# ಹೊಸತು

## ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ರಾಂಚಂದ್ರ ಕೊಪ್ಪಲು, ಗೋಪಿ, ರವಿ ಹೆಗ್ಗಡಿ, ಕಮಲಂ ಅರಸು, ವಿ. ಗೋಪಾಲ್, ತನು

**ಮುಖಪುಟ :** ಹೋರಾಟನಿರತ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರು

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ದು ಹಳೆಯ ಸಮಾಚಾರ. ಪದ್ಮ ಪ್ರಶಸ್ತಿಗಳ ಘೋಷಣೆ ಆಗುವ ವೇಳೆಗೆ ಫೆಬ್ರವರಿ ತಿಂಗಳ ‘ಹೊಸತು’ ಅಚ್ಚಿನಮನೆಗೆ ಹೋಗಿತ್ತು. ಮೋದಿಯವರ ಸುತ್ತ ಸುತ್ತುವ ಕೆಲವು ಗ್ರಹಗಳಿಗೆ ಹಿರಿದೋ ಕಿರಿದೋ ತಾವರೆ ಹೂವುಗಳ ಪ್ರದಾನ ನಡೆದಿದೆ. ಪ್ರಕಾಶ ಸಿಂಗ್ ಬಾದಲ್ ಇದ್ದಾರೆ, ವೀರೇಂದ್ರ ಹೆಗಡೆ ಇದ್ದಾರೆ. ಅಕಾಲಿದಳವು ಮೋದಿಯವರ ಪಕ್ಷದೊಡನೆ ಸ್ವಲ್ಪ ವಿರಸ ಉಂಟುಮಾಡಿದೆ. ಆದ್ದರಿಂದ ಬಾದಲ್ ಅವರಿಗೆ ಕಿರೀಟವಿಟ್ಟು ಅವರನ್ನು ಒಲಿಸುವ ಪ್ರಕ್ರಿಯೆ ಆರಂಭವಾಗಿದೆ. ದಕ್ಷಿಣ ಕನ್ನಡದ ಗುರುವಾಯನಕೆರೆಯ ಪ್ರಸಿದ್ಧ ಸಮಾಜ ಸೇವಾ ಸಂಸ್ಥೆಯು ಧರ್ಮಸ್ಥಳದ ‘ಧರ್ಮಾಧಿಕಾರಿ’ಗಳು ಅವ್ಯವಹಾರಗಳ ಮಡುವಿನಲ್ಲಿ ಮಿಂದಿದೆ ಎಂದು ಅನೇಕ ದಾಖಲೆಗಳನ್ನು ಬಹಿರಂಗಪಡಿಸಿದೆ. ಅದರ ಬಗ್ಗೆ ನಮ್ಮ ಘನ ಸರ್ಕಾರವು ಏನೂ ಹೇಳಿಲ್ಲ. ಆಪಾದನೆಗಳು ಸುಳ್ಳೆಂದು ಹೇಳಬೇಕು, ಇಲ್ಲವೆ ತನಿಖೆಗೆ ಆದೇಶ ನೀಡಬೇಕು. ಯಾವುದಕ್ಕೇ ಆಗಲಿ ದಾಖಲೆಗಳ ಆಧಾರ ನೀಡಬೇಕು. ಇಲ್ಲವಾದರೆ ಗುರುವಾಯನಕೆರೆಯ ಸಂಸ್ಥೆಗೆ, ಇಲ್ಲವೆ ಧರ್ಮಸ್ಥಳದ ಸಂಸ್ಥೆಗೆ ಕೆಸರು ಮುಚ್ಚಿಕೊಳ್ಳುತ್ತದೆ. ಅದನ್ನು ಪದ್ಮಶ್ರೀ ಪದವಿಯಿಂದ ಮುಚ್ಚಲಾಗುವುದಿಲ್ಲ. ಮುಖ್ಯಮಂತ್ರಿಯಿಂದ ಹಿಡಿದು ಕೆಳಹಂತದ ಅಧಿಕಾರಿಗಳವರೆಗೆ ಯಾರೂ ತುಟಿಪಿಟಕ್ಕೆಂದಿಲ್ಲದಿರುವುದು ಆಶ್ಚರ್ಯಕರ. ಕಾನೂನು ಎಲ್ಲರಿಗೂ ಒಂದೇ ಎಂಬ ವಾಣಿಯು ಬಾಯುಪಚಾರದ್ದೆಂದು ಜನರಿಗೆ ಈವರೆಗೆ ಕೋಟಿ ಬಾರಿ ಅನುಭವಕ್ಕೆ ಬಂದಿದೆ. ಇತ್ತೀಚಿನ ಸಿ.ಬಿ.ಐ. ತೀರ್ಮಾನಗಳು ಅದಕ್ಕೆ ಪುಷ್ಟಿ ಒದಗಿಸಿವೆ. ಒಬ್ಬೊಬ್ಬರೇ ಅಪರಾಧಿಗಳಲ್ಲವೆಂಬ ಪದಕ ಧರಿಸಿಕೊಂಡು ಹಸನ್ಮುಖಿಗಳಾಗುತ್ತಿದ್ದಾರೆ. ಹತ್ತು ವರ್ಷ ಬೇಕಾಯಿತೆ ಸಿಬಿಐಗೆ ಈ ಗೌರವಾನ್ವಿತ ಪದಕಗಳನ್ನು ನೀಡಲು ? ಈಗ ಒಂದರ ನಂತರ ಇನ್ನೊಂದು ಬಿರುಸಿನಿಂದ ಹೊರಬರುತ್ತಿರುವುದಕ್ಕೂ ಕೇಂದ್ರದಲ್ಲಿ ಮಾನ್ಯ ಮೋದಿಯವರು ಪ್ರಧಾನಿಗಳಾಗಿರುವುದಕ್ಕೂ ಸರ್ವಥಾ ಸಂಬಂಧವಿಲ್ಲವೆಂದು ನಮ್ಮ ಕೆಲವು ಪತ್ರಿಕೆಗಳು ಸಂಪಾದಕೀಯಗಳನ್ನು ಬರೆದಿದ್ದು ಕುಂಬಳಕಾಯಿಗಾಗಿ ಯಾರೋ ಹೆಗಲು ಮುಟ್ಟಿನೋಡಿಕೊಂಡ ಪ್ರಸಂಗ ನೆನಪಿಗೆ ಬರುತ್ತದೆ. ರಾಜಕೀಯ ಸಂಬಂಧಗಳು ಬಿಗಡಾಯಿಸಿದಾಗ ಸಂಬಂಧಗಳನ್ನು ಗಟ್ಟಿಗೊಳಿಸಿಕೊಳ್ಳಲು ಕೋಮಲ ಕಮಲದ ಬಳಕೆಯು ಶಿಖಂಡಿಯ ಕತೆಗೆ ಸಮನಾದ್ದು. ಅದು ಶ್ಲಾಘನೀಯವಲ್ಲ. ಅಂತೆಯೇ ಅರ್ಧಶತಮಾನಕ್ಕೂ ಮುಂಚೆ ಗತಿಸಿದ್ದ ಮಹಾನ್ ನಾಯಕರಿಗೆ ‘ಭಾರತರತ್ನ’ ಪ್ರಶಸ್ತಿ ನೀಡುವ ನಿರರ್ಥಕ ಸಂಪ್ರದಾಯ ಬಹು ಹಿಂದೆಯೇ ಆರಂಭವಾಯಿತು. ಮಧುಚ್ಛಂದಸ್ ಎಂಬ ಋಗ್ವೇದದ ಕವಿ ಮತ್ತು ಉದ್ದಾಲಕ ಆರುಣಿ ಎಂಬ ಉಪನಿಷತ್ತು ತತ್ತ್ವಶಾಸ್ತ್ರಜ್ಞರಿಗೂ ಈ ಪ್ರಶಸ್ತಿ ಕೊಟ್ಟರೆ ಹೇಗೆ ? ಆಮೇಲೆ ಚರಕ, ಆರ್ಯಭಟ, ಮುಂತಾದವರ ಸರದಿ ! ಪ್ರಶಸ್ತಿ ಪಡೆದವರು ಜೀವಂತವಾಗಿದ್ದರೆ ಗತಿಸಿದವರ ಜೊತೆ ಅವರನ್ನು ನಿಲ್ಲಿಸುವುದು ಏಕೋ ಮನಸ್ಸಿಗೆ ಕಸಿವಿಸಿ ಉಂಟು ಮಾಡುತ್ತದೆ. ಲಂಡನ್ನಿನ ದುಂಡುಮೇಜು ಸಭೆಗೆ ತೆರಳುವಾಗ ಮಾನ್ಯ ಮದನಮೋಹನ ಮಾಳವೀಯರು ಎರಡು ಪೀಪಾಯಿ ಗಂಗಾಜಲ ತೆಗೆದುಕೊಂಡು ಹೋಗಿದ್ದರು. ಹಡಗಿನಲ್ಲಿ ಹೋಗಲು ಅವರಿಗೆ ಶಾಸ್ತ್ರ ಅಡ್ಡಿ ಬರಲಿಲ್ಲ. ಇಂದು ಅದೇ ಗಂಗೆಯು ಮಲಿನವಾಗಿದೆ. ಮಾಳವೀಯರಿಗೆ ಯಾವ ‘ರತ್ನ’ ಪದಕವೂ ಬೇಕಿಲ್ಲ. ರಾಜಕೀಯವನ್ನು ಸಮಕಾಲೀನ ನೆಲೆಯಲ್ಲಿ ನಿಲ್ಲಿಸಿದರೆ ಹೆಚ್ಚು ಆದರಣೀಯರಾಗಬಹುದು, ಅದನ್ನು ಬಿಟ್ಟು ದೇಶವೆಲ್ಲಾ ನಮಿಸುವ ಹಿಂದಿನ ಶ್ರೇಷ್ಠರಿಗೆ ಈಗ ಪದಕ ತಗುಲಿಹಾಕುವುದು ಅಷ್ಟೇನೂ ಸ್ವಾಗತಾರ್ಹವಲ್ಲ.

✳ ✳ ✳

ಒಬಾಮ ಬಂದು ಅದೆಷ್ಟು ತಳಮಳ ಉಂಟುಮಾಡಿಬಿಟ್ಟ ! ನಮ್ಮ ದೇಶದ ರಕ್ಷಣಾ ದಳಗಳು ಆತನ ಪ್ರಾಣವನ್ನು ಉಳಿಸಲಾರವೆಂಬ ತೀರ್ಮಾನ ಮಾಡಿ ತನ್ನದೇ ಕಾರು, ತನ್ನದೇ ನಾಯಿಗಳು ಮತ್ತು ರಕ್ಷಕರನ್ನು ಸಾವಿರ ಸಂಖ್ಯೆಯಲ್ಲಿ

(೬ನೇ ಪುಟಕ್ಕೆ)




ಸಂಪುಟ-೧೬ ಸಂಚಿಕೆ-೮ ಮಾರ್ಚ್ ೨೦೧೫

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ಆರ್. ಉಡುಪ

■ **ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ **ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಮಹಾರಾಷ್ಟ್ರದಲ್ಲಿ ಮಾಫಿಯಾ ರಾಜ್ಯ

ಮಹಾರಾಷ್ಟ್ರದ ಧೀಮಂತ ಹೋರಾಟಗಾರ, ಕಮ್ಯುನಿಸ್ಟ್ ಪಕ್ಷದ ಹಿರಿಯ ನಾಯಕ, ಗೋವಿಂದ ಪಾನ್ಸರೆ ದುಷ್ಕರ್ಮಿಗಳ ಗುಂಡೇಟಿಗೆ ಬಲಿಯಾಗಿದ್ದಾರೆ. ಕೊಲ್ಹಾಪುರದ ತಮ್ಮ ಮನೆಯಿಂದ ಪತ್ನಿ ಉಮಾ ಅವರ ಜೊತೆ ಬೆಳಗಿನ ವಾಯುವಿಹಾರಕ್ಕೆ ಹೋಗಿ ಮರಳಿ ಮನೆಗೆ ಬರುತ್ತಿದ್ದ ದಂಪತಿಗಳ ಮೇಲೆ ದುಷ್ಕರ್ಮಿಗಳು ಅತ್ಯಂತ ಸಮೀಪದಿಂದಲೇ ಗುಂಡಿನ ದಾಳಿ ನಡೆಸಿದ್ದಾರೆ. ೮೨ ವಯಸ್ಸಿನ ಗೋವಿಂದ ಪಾನ್ಸರೆಯವರ ದೇಹದಲ್ಲಿ ಎರಡು, ಉಮಾ ಅವರ ಕುತ್ತಿಗೆಯಲ್ಲಿ ಒಂದು ಗುಂಡು ತಗಲಿದ್ದವು. ಶಸ್ತ್ರಚಿಕಿತ್ಸೆ ನಡೆಸಿ ದೇಹದಲ್ಲಿನ ಬುಲೆಟ್‌ಗಳನ್ನು ತೆಗೆದಿದ್ದರೂ ಚಿಕಿತ್ಸೆ ಫಲಕಾರಿಯಾಗದೆ ಗೋವಿಂದ ಪಾನ್ಸರೆ ದಿನಾಂಕ ೨೦.೦೨.೨೦೧೫ರಂದು ಮುಂಬೈ ಆಸ್ಪತ್ರೆಯಲ್ಲಿ ನಿಧನರಾಗಿದ್ದಾರೆ. ಅವರ ಪತ್ನಿ ಉಮಾ ಇನ್ನೂ ಚಿಕಿತ್ಸೆ ಪಡೆಯುತ್ತಿದ್ದಾರೆ. ಇದೊಂದು ಆಘಾತಕರ ಸುದ್ದಿ. ಗೋವಿಂದ ಪಾನ್ಸರೆ ಒಬ್ಬ ಸ್ವಾತಂತ್ರ್ಯ ಹೋರಾಟಗಾರ, ಮಹಾರಾಷ್ಟ್ರದ ರೈತ ಕಾರ್ಮಿಕ ಚಳವಳಿಗಳಿಗೆ ನಾಯಕತ್ವ ಕೊಟ್ಟು ಬದುಕಿನುದ್ದಕ್ಕೂ ಜನಸಾಮಾನ್ಯರಿಗಾಗಿ ಹೋರಾಡಿದವರು. ಮಹಾರಾಷ್ಟ್ರದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷವನ್ನು ಕಟ್ಟಿ ಬೆಳೆಸುತ್ತಲೇ ರಾಷ್ಟ್ರನಾಯಕರಾಗಿ ಬೆಳೆದವರು. ಸಂಘಟನೆ ಚಳುವಳಿ ಮಾತ್ರವಲ್ಲ, ಮಹಾರಾಷ್ಟ್ರದ ವೈಚಾರಿಕ ಆಂದೋಲನದಲ್ಲಿಯೂ ಮಹತ್ವದ ಪಾತ್ರವಹಿಸಿದವರು. ಲೋಕವಾಙ್ಮಯ ಪ್ರಕಾಶನದ ಮೂಲಕ ನೂರಾರು ಕೃತಿಗಳನ್ನು ಪ್ರಕಟಿಸಿದ್ದರು. ಶಿವಾಜಿಯನ್ನು ಒಬ್ಬ ಮತೀಯವಾದಿಯಂತೆ ಮತಾಂಧ ಶಕ್ತಿಗಳು ಬಿಂಬಿಸುತ್ತಿದ್ದ ಸಂದರ್ಭದಲ್ಲಿ ಶಿವಾಜಿ ಒಬ್ಬ ಅಸಾಮಾನ್ಯ ಜನಪರ ಹೋರಾಟಗಾರನೆಂದು ಪ್ರತಿಪಾದಿಸಿ ಒಂದು ಕೃತಿಯನ್ನೇ ರಚಿಸಿದರು. ಆ ಕೃತಿ ಕನ್ನಡಕ್ಕೆ ಅನುವಾದಗೊಂಡು ನವಕರ್ನಾಟಕ ಪ್ರಕಾಶನದಿಂದ ಪ್ರಕಟಗೊಂಡಿದೆ. ತಮ್ಮ ೮೦ನೇ ವಯಸ್ಸಿನವರೆಗೂ ಭಾರತ ಕಮ್ಯುನಿಸ್ಟ್ ಪಕ್ಷದ ರಾಷ್ಟ್ರೀಯ ನಾಯಕರಲ್ಲೊಬ್ಬರಾಗಿದ್ದ ಅವರು ಇತ್ತೀಚಿನ ದಿನಗಳಲ್ಲಿ ಕೊಲ್ಹಾಪುರದಲ್ಲಿ ವಾಸವಾಗಿದ್ದರು. ಈ ವಯಸ್ಸಿನಲ್ಲಿಯೂ ತಮ್ಮ ಸಾಮಾಜಿಕ ಹೋರಾಟಗಳನ್ನು ಮುಂದುವರಿಸಿದ್ದರು. ಹೆದ್ದಾರಿಗಳಲ್ಲಿ ಟೋಲ್ ಮೂಲಕ ನಡೆಸುತ್ತಿರುವ ಸುಲಿಗೆಯ ವಿರುದ್ಧ ಪ್ರಮುಖ ಹೋರಾಟದ ನಾಯಕತ್ವ ವಹಿಸಿದ್ದ ಪಾನ್ಸರೆಯವರು ಟೋಲ್ ಮಾಫಿಯಾಗಳ ಕೆಂಗಣ್ಣಿಗೆ ಗುರಿಯಾಗಿದ್ದರು. ಧೀಮಂತ ಹೋರಾಟಗಾರ, ಚಿಂತಕ ಗೋವಿಂದ ಪಾನ್ಸರೆ ದುಷ್ಕರ್ಮಿಗಳ ಗುಂಡಿಗೆ ಬಲಿಯಾಗಿ ತಮ್ಮ ಬದುಕಿನ ಯಾತ್ರೆ ಮುಗಿಸಿದ್ದಾರೆ. ೮೨ ವರ್ಷದ ಹಿರಿಯ ಹೋರಾಟದ ಜೀವಿಯನ್ನು ತಾತ್ವಿಕವಾಗಿ, ನೈತಿಕವಾಗಿ ಎದುರಿಸಲಾಗದ ಮಹಾರಾಷ್ಟ್ರದ ಮಾಫಿಯಾ ಪಡೆ ಅವರನ್ನು ದೈಹಿಕವಾಗಿ ಮುಗಿಸಿದ್ದಾರೆ. ಆದರೆ ಗೋವಿಂದ ಪಾನ್ಸರೆ ತಮ್ಮ ಬದುಕಿನುದ್ದಕ್ಕೂ ತಮ್ಮ ತತ್ವ, ಸಿದ್ಧಾಂತಗಳ ಅಡಿಯಲ್ಲಿ ಸಂಘಟಿಸಿದ ಹಲವಾರು ಸಂಘಟನೆಗಳಲ್ಲಿ ಸಾವಿರಾರು ಕಾರ್ಯಕರ್ತರನ್ನು ಸಿದ್ಧಪಡಿಸಿದ್ದಾರೆ. ಅವರು ಆರಂಭಿಸಿದ ಹೋರಾಟ ಮುಂದುವರಿಯುತ್ತದೆ. ಅವರ ಪತ್ನಿ ಉಮಾ ಶೀಘ್ರ ಗುಣಮುಖರಾಗಲೆಂಬುದು 'ಹೊಸತು' ಬಳಗದ ಆಶಯ.

೨೦೧೩ರಲ್ಲಿ ಮೂಢನಂಬಿಕೆ ವಿರೋಧಿ, ವೈಜ್ಞಾನಿಕ ಮನೋವೃತ್ತಿ ಆಂದೋಲನದ ನಾಯಕ ನರೇಂದ್ರ ದಾಭೋಲ್ಕರ್ ಅವರ ಹತ್ಯೆಯ ಮಾದರಿಯಲ್ಲಿಯೇ ಗೋವಿಂದ ಪಾನ್ಸರೆಯವರ ಹತ್ಯೆ ನಡೆದಿದೆ. ನರೇಂದ್ರ ದಾಭೋಲ್ಕರ್ ಅವರ ಹತ್ಯೆ ಮತೀಯ, ಧರ್ಮಾಂಧ ಶಕ್ತಿಗಳಿಂದ ನಡೆದದ್ದು ಅವರ ಹತ್ಯೆಗೆ ಬೇರೆ ಕಾರಣಗಳೇ ಇರಲಿಲ್ಲ. ಅವರ ಹತ್ಯೆ ಕುರಿತ ತನಿಖೆ ಕುಂಟುತ್ತಲೇ ಸಾಗಿದೆ. ಇನ್ನೂ ಹಂತಕರ ಪತ್ತೆಯಾಗಿಲ್ಲ. ಈಗ ಗೋವಿಂದ ಪಾನ್ಸರೆಯವರ ಹತ್ಯೆ ನಡೆದಿದೆ. ಜನಪರ, ಸಾಮಾಜಿಕ ಹೋರಾಟಗಾರರ ಬದುಕು ಮಹಾರಾಷ್ಟ್ರದಲ್ಲಿ ಸುರಕ್ಷಿತವಾಗಿಲ್ಲ ಎಂಬುದು ಆಘಾತಕಾರಿ ಸಂಗತಿ. ಸ್ವಾತಂತ್ರ್ಯ ಹೋರಾಟಕ್ಕೆ, ಕ್ರಾಂತಿಕಾರಿ, ಸಾಮಾಜಿಕ ಸುಧಾರಣೆಯ ಹಲವಾರು ಆಂದೋಲನಗಳಿಗೆ ನೆಲೆಯಾಗಿದೆ ಮಹಾರಾಷ್ಟ್ರ. ಆದರೆ ಇಂದು ಮಾಫಿಯಾಗಳ ನಾಡಾಗಿ ಪರಿವರ್ತನೆ ಹೊಂದಿದೆ. ಮುಂಬೈ ಭೂಗತ ಪಾತಕಿಗಳ ಕೇಂದ್ರವಾಗಿ, ಪಾತಕಿಗಳ ಮಧ್ಯೆ ಸಂಘರ್ಷ, ಕೊಲೆ, ಸುಪಾರಿ ಕೊಲೆ ಇಂಥ ಘಟನೆಗಳು ಸಹಜವೆಂಬಂತಾಗಿತ್ತು. ಕರ್ನಾಟಕದ ಗಡಿಪ್ರದೇಶ ಭೀಮಾನದಿ ಪ್ರದೇಶದಲ್ಲಿಯೂ ಇದರ ಕರಾಳ ಛಾಯೆ ಆವರಿಸಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಹೋರಾಟಗಾರರನ್ನು, ಮಾಹಿತಿಹಕ್ಕು ಕಾರ್ಯಕರ್ತರನ್ನು, ಮೂಢನಂಬಿಕೆ ವಿರೋಧಿ ಕಾರ್ಯಕರ್ತರನ್ನು ಕೊಂದುಹಾಕುತ್ತಿರುವ ಘಟನೆಗಳು ರಾಜ್ಯದ ವಿವಿಧ ಭಾಗಗಳಲ್ಲಿ ನಡೆಯುತ್ತಿವೆ. ನರೇಂದ್ರ ದಾಭೋಲ್ಕರ್ ಅವರ ಹತ್ಯೆ ಪುಣೆಯಂಥ ಸಾಂಸ್ಕೃತಿಕ ನಗರಿಯಲ್ಲಾದರೆ, ಪಾನ್ಸರೆಯವರ ಹತ್ಯೆ ಕೊಲ್ಹಾಪುರದ ಹೊರವಲಯದ ವಿಶ್ವವಿದ್ಯಾಲಯವಿರುವ ಪ್ರಶಾಂತ ಪ್ರದೇಶದಲ್ಲಿ ನಡೆದಿದೆ. ಸರಕಾರಗಳು, ಪೊಲೀಸ್ ಇಲಾಖೆ, ಗುಪ್ತಚರ ಸಂಸ್ಥೆಗಳು ಹಂತಕರನ್ನು ಬಂಧಿಸಲಾಗದೆ ಕೈಚೆಲ್ಲಿ ಕುಳಿತಿವೆ. ಅಲ್ಲಿಗೆ ಮಾಫಿಯಾಗಳು ಸರಕಾರಗಳನ್ನೇ ನಿಯಂತ್ರಿಸುತ್ತಿವೆ ಎಂಬುದು ವಾಸ್ತವ. ಭೂಮಾಫಿಯಾ, ಮರಳು ಮಾಫಿಯಾ, ಸಾರಾಯಿ ಮಾಫಿಯಾ, ಹೀಗೆ ಸಮಾಜಘಾತುಕ ಚಟುವಟಿಕೆಗಳನ್ನು ನಡೆಸುವ ಶಕ್ತಿಗಳೆಲ್ಲ ಒಂದು ಕಡೆಯಾದರೆ ಜಾತಿ, ಮತೀಯ ಶಕ್ತಿಗಳೂ ಮಾಫಿಯಾಗಳಾಗಿ ಸರಕಾರಗಳನ್ನು ನಿಯಂತ್ರಿಸುತ್ತಿವೆ. ಸುಪಾರಿ ಕೊಲೆಗಾರರ ಮೂಲಕ ಇಂಥ ಮಾಫಿಯಾಗಳು ಜನಪರ ಹೋರಾಟಗಾರರ ಕೊಲೆ ಮಾಡಿಸುವ ಸುಲಭದ ಮಾರ್ಗ ಕಂಡುಕೊಂಡಿವೆ. ತಾವು ಕೊಲ್ಲಲು ಹೊರಟಿರುವ ವ್ಯಕ್ತಿಯ ಹಿನ್ನೆಲೆ, ಸಾಮಾಜಿಕ ಕಾಳಜಿ, ತ್ಯಾಗ ಬಲಿದಾನ ಇವಾವುವೂ ಮಹತ್ವವಾಗುವುದಿಲ್ಲ. ಇಂಥ ಮಾಫಿಯಾ ಸಂಸ್ಕೃತಿ ಮುಂದುವರಿದರೆ ಸಾಮಾಜಿಕ ಹೋರಾಟಗಾರರು ಮಾತ್ರವಲ್ಲ ಪ್ರಾಮಾಣಿಕ ಅಧಿಕಾರಿಗಳೂ, ಆಡಳಿತಗಾರರು, ರಾಜಕಾರಣಿಗಳು ಮಾಫಿಯಾಗಳ ಹಿತಾಸಕ್ತಿಗೆ ಬಲಿಯಾಗಬೇಕಾಗುತ್ತದೆ.

ಮಹಾರಾಷ್ಟ್ರದಲ್ಲಿ ಕಾಂಗ್ರೆಸ್ ಪಕ್ಷದ ಅಧಿಕಾರ ಕೊನೆಗೊಂಡು ಬಿ.ಜೆ.ಪಿ. ಸರಕಾರ ಬಂದಿದೆ. ಯಾವುದೇ ಸರಕಾರ ಇರಲಿ ತನ್ನ ಪ್ರಜೆಗಳ ಬದುಕಿಗೆ, ಜೀವಕ್ಕೆ ಕನಿಷ್ಠ ಖಾತ್ರಿಯನ್ನಾದರೂ ಒದಗಿಸಬೇಕು. ಇಂಥ ಮಾಫಿಯಾಗಳು ಮುಂದೆ ಪರ್ಯಾಯ ಸರಕಾರವಾಗಿ ಬೆಳೆದು ಪ್ರಜಾಪತ್ತೆಯನ್ನೇ ನಾಶಮಾಡುತ್ತವೆ. ಜಂಗಲ್ ರಾಜ್ ನಿರ್ಮಾಣವಾಗುತ್ತದೆ. ಪ್ರಜೆಗಳು ಸಹಜ ಜೀವನ ಸಾಗಿಸುವ ಹಕ್ಕಿನಿಂದ ವಂಚಿತರಾಗುತ್ತಾರೆ. ಅದನ್ನೆಲ್ಲ ತಡೆಯಬೇಕಾದರೆ ಗೋವಿಂದ ಪಾನ್ಸರೆ, ನರೇಂದ್ರ ದಾಭೋಲ್ಕರ್‌ರಂಥವರ ಹತ್ಯೆ ಮಾಡಿದ ಪಾತಕಿಗಳನ್ನು ಬಂಧಿಸಿ ಶಿಕ್ಷಿಸುವ ಕೆಲಸವಾಗಬೇಕು. ಇಲ್ಲವಾದರೆ ಮಂತ್ರಿಮಹೋದಯರನ್ನೊಳಗೊಂಡು ಯಾರೂ ಸುರಕ್ಷಿತವಾಗಿ ಬದುಕಲಾರರು. ಮಹಾರಾಷ್ಟ್ರ ಮಾಫಿಯಾ ರಾಜ್ಯವಾಗದಿರಲಿ.

## ಬದಲಾವಣೆಯ ನಿರೀಕ್ಷೆಯಲ್ಲಿ ಮತದಾರ

ದೆಹಲಿ ವಿಧಾನಸಭೆ ಚುನಾವಣೆ ಫಲಿತಾಂಶ ಜನ ಬದಲಾವಣೆ ಅಪೇಕ್ಷಿಸುತ್ತಿದ್ದಾರೆ ಎನ್ನುವುದನ್ನು ಹೊರಗೆಡಹಿದೆ. ಅಲ್ಲದೆ ಅದು ಭಾರತೀಯ ಮತದಾರ ತುಂಬ ವಿವೇಚನೆಯಿಂದ ಮತ ಚಲಾಯಿಸುತ್ತಾನೆ, ಯಾವ ಅಲೆಯೂ ಶಾಶ್ವತವಲ್ಲ ಎನ್ನುವುದನ್ನು ಸ್ಪಷ್ಟಪಡಿಸಿದೆ. ಇಂದಿರಾ ಗಾಂಧಿ ತುರ್ತು ಪರಿಸ್ಥಿತಿ ಹೇರಿ ೧೯೭೭ರಲ್ಲಿ ಚುನಾವಣೆ ನಡೆಸಿದಾಗ ಜನ ಕಾಂಗ್ರೆಸ್ಸಿಗೆ ಪಾಠ ಕಲಿಸಿದ್ದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಈಗ ಇನ್ನೂ ವರ್ಷವಾಗಿಲ್ಲ. ಅಧಿಕಾರ ವಹಿಸಿಕೊಂಡು. ಆಗಲೇ ಭಾಜಪಗೆ ಜನ ಬಿಸಿ ಮುಟ್ಟಿಸಿದ್ದಾರೆ. ವಿಜಯದ ಬೆನ್ನೇರಿ ಹೊರಟಿದ್ದ ಪಕ್ಷಕ್ಕೆ ಕಡಿವಾಣ ಹಾಕಿದ್ದಾರೆ. ಕಾಂಗ್ರೆಸ್ ಶೂನ್ಯ ಸಂಪಾದನೆ ಮಾಡಿ ನೆಲ ಕಚ್ಚಿದ್ದರೆ, ಅಧಿಕಾರ ಗ್ರಹಣದ ಕನಸು ಕಾಣುತ್ತಿದ್ದ ಭಾಜಪ ಒಂದಂಕಿ ದಾಟದೆ ಕೇವಲ ಮೂರು ಸ್ಥಾನಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಹೊಸದಾಗಿ ಉದಯಿಸಿ ಪೊರಕೆ ಹಿಡಿದಿರುವ ಆಮ್ ಆದ್ಮಿ ಪಕ್ಷ ಎಲ್ಲ ರಾಜಕೀಯ ಲೆಕ್ಕಾಚಾರವನ್ನೂ ತಲೆಕೆಳಗುಮಾಡಿ ಅಭೂತಪೂರ್ವ ಜಯ ಗಳಿಸಿದೆ. ಎರಡನೆ ಬಾರಿ ಅಧಿಕಾರದ ಚುಕ್ಕಾಣಿ ಹಿಡಿಯುತ್ತಿರುವ ಈ ಪಕ್ಷ ಸ್ವಚ್ಛ ಆಡಳಿತ ನೀಡಿ ದೊರೆತಿರುವ ಸದವಕಾಶವನ್ನು ಸದುಪಯೋಗಪಡಿಸಿಕೊಳ್ಳಲಿ, ಜನಪರ ಕ್ರಮಗಳನ್ನು ಕೈಗೊಳ್ಳಲಿ.

ಚುನಾವಣೆಯಲ್ಲಿ ಪರಾಜಯಗೊಂಡ ರಾಷ್ಟ್ರೀಯ ಪಕ್ಷಗಳು ಆತ್ಮಾವಲೋಕನ ನಡೆಸಿ ಸಮಜಾಯಿಷಿ ನೀಡಬಹುದು. ಆದರೆ ಅವು ಎಷ್ಟರಮಟ್ಟಿಗೆ ತಮ್ಮ ನಡವಳಿಕೆಯನ್ನು ಸರಿಪಡಿಸಿಕೊಳ್ಳುವುವು ಎನ್ನುವುದು ಊಹಾತೀತ. ಕಾಂಗ್ರೆಸ್ಸಿನ ಮಟ್ಟಿಗೆ ಮೇಲೇಳಲು ಸಾಧ್ಯವೇ ಆಗದಂತೆ ನಾಯಕತ್ವವೇ ಇಲ್ಲದೆ ಸೊರಗುತ್ತಿದೆ. ಕುಟುಂಬ ರಾಜಕಾರಣದಿಂದ ಹೊರಬರಲು ಅದಕ್ಕೆ ಆಗುತ್ತಿಲ್ಲ. ಇನ್ನು ಭಾಜಪ ಅಧಿಕಾರದ ಮದದಿಂದ ವರ್ತಿಸುತ್ತಿರುವುದನ್ನು ಕಳೆದ ಒಂಬತ್ತು ತಿಂಗಳಿಂದ ಜನ ಕಂಡಿದ್ದಾರೆ. ಸದುದ್ದೇಶದ ಒಳ್ಳೊಳ್ಳೆ ಘೋಷಣೆಗಳ ಸರಮಾಲೆ ಬಿಟ್ಟರೆ, ಕಾರ್ಯತಃ ಅಭಿವೃದ್ಧಿಯ ಕ್ರಮಗಳು ಕಾಗದದ ಮೇಲೇ ಇವೆ. ಮೋದಿ ಸರಕಾರದ ಸಚಿವರುಗಳು ಮಗುಮ್ಮಾಗಿ ಹಿಂದುತ್ವದ ಅಜೆಂಡಾವನ್ನು ಕಾರ್ಯಗತ ಮಾಡಲು ಹೊರಟಿದ್ದಾರೆ. ಸಂಘಪರಿವಾರದ ಅಂಗಸಂಸ್ಥೆಗಳಾದ ಭಜರಂಗದಳ, ವಿಶ್ವ ಹಿಂದೂ ಪರಿಷತ್ ಮುಂತಾದವು ಹಮ್ಮಿಕೊಂಡಿರುವ ಮರುಮತಾಂತರ ಮುಂತಾದ ಕ್ರಮಗಳು ಭಾಜಪಗೆ ತಿರುಗುಬಾಣವಾಗಿ ಪರಿಣಮಿಸಿದೆ. ಮೋದಿ ಸರಕಾರದ ಕೆಲ ಸಚಿವರುಗಳು, ಭಾಜಪದ ಕೆಲ ಉಗ್ರಗಾಮಿ ಪಾರ್ಲಿಮೆಂಟ್ ಸದಸ್ಯರುಗಳು ಆಗಾಗ ನೀಡುತ್ತಿರುವ ಹಿಂದುತ್ವವಾದಿ ಪ್ರಕಟಣೆಗಳು ಆಡಳಿತವನ್ನು ಪೇಚಿಗೆ ಸಿಕ್ಕಿಸಿವೆ. ಪ್ರಧಾನಿ ನರೇಂದ್ರ ಮೋದಿ ಈ ಎಲ್ಲ ಬೆಳವಣಿಗೆಗಳ ಬಗ್ಗೆ ವಹಿಸಿರುವ ಮೌನ ಮುಖ್ಯವಾಗಿ ಅಲ್ಪಸಂಖ್ಯಾತರನ್ನು, ವಿಚಾರಶೀಲ ಜನರನ್ನು ಕಂಗೆಡಿಸಿದೆ. ಈಚೆಗೆ ಕ್ರೈಸ್ತ ಸಮುದಾಯಕ್ಕೆ ಭಾರತದ ಜಾತ್ಯತೀತ ಪರಂಪರೆ ಕುರಿತು ಪ್ರಧಾನಿ ನೀಡಿರುವ ವ್ಯಾಖ್ಯಾನ ಕೇವಲ ಔಪಚಾರಿಕ. ಬಹಳ ಚಾಕಚಕ್ಯತೆಯಿಂದ ಅವರು ನಡೆಯುತ್ತಿರುವ ವಿದ್ಯಮಾನಗಳಾವುದನ್ನೂ ಖಂಡಿಸದೆ ಜಾರಿಕೊಂಡಿದ್ದಾರೆ. ಇದು ಭಾಜಪದ ವರಿಸೆ, ಅದರ ಮೂಲ ಸಿದ್ಧಾಂತ ಹಿಂದುತ್ವ , ಹಿಂದೂ ಸಮಾಜದ ಸ್ಥಾಪನೆಗೆ ಸಂಬಂಧಿಸಿದ್ದು.

ದೆಹಲಿ ಚುನಾವಣೆಗಳು ಭಾಜಪಗೆ ಗೌರವದ ಪ್ರಶ್ನೆಯಾಗಿತ್ತು, ಅದಕ್ಕೇ ನಮೋ–ಷಾ ಜೋಡಿ ನೇರವಾಗಿ ಅಗತ್ಯವಾದ ತಂತ್ರ ರೂಪಿಸಿದ್ದರು. ಆಮ್ ಆದ್ಮಿ ಪಕ್ಷದ ನಾಯಕ ಅರವಿಂದ ಕೇಜ್ರಿವಾಲ್ ಎದುರಿಸಲು ಮಾಜಿ ಪೊಲೀಸು ಅಧಿಕಾರಿ, ಭ್ರಷ್ಟಾಚಾರ ವಿರೋಧಿ ಚಳವಳಿಯಲ್ಲಿ ಪ್ರಮುಖ ಪಾತ್ರಧಾರಿ ಕಿರಣ್ ಬೇಡಿಗೆ ದೆಹಲಿ ಮುಖ್ಯಮಂತ್ರಿ ಪಟ್ಟದ ಆಮಿಷ ಒಡ್ಡಿ ಈ ಜೋಡಿ ಕರೆತಂದಿದ್ದರು. ಸ್ವತಃ ಮೋದಿ ಹಾಗೂ ಅಮಿತ್ ಷಾ ಚುನಾವಣಾ ಪ್ರಚಾರದಲ್ಲಿ ತೊಡಗಿಕೊಂಡಿದ್ದರು. ಆದರೆ ಯಾವ ತಂತ್ರವೂ ಫಲಿಸಲಿಲ್ಲ. ಭಾಜಪದ ದೆಹಲಿ ಸೋಲು ಒಂದು ಎಚ್ಚರಿಕೆಯ ಗಂಟೆ, ಅದೇನೇ ಇರಲಿ ಜನ ಕಾಂಗ್ರೆಸ್ ಮತ್ತು ಭಾಜಪಗಳನ್ನು ತಿರಸ್ಕರಿಸಿ ಆಮ್ ಆದ್ಮಿ ಪಕ್ಷವನ್ನು ಗದ್ದುಗೆಗೇರಿಸಿ ಬದಲಾವಣೆಯ ಪರ ತೀರ್ಪು ನೀಡಿದ್ದಾರೆಂಬುದು ಖಚಿತವಾಗಿದೆ. ಇದುವರೆಗೆ ದೆಹಲಿಯಲ್ಲಿ ನಡೆದಿರುವ ಚುನಾವಣೆಗಳಲ್ಲಿ ಈ ಬಾರಿ ಜನ ಅತ್ಯಧಿಕ ಸಂಖ್ಯೆಯಲ್ಲಿ ಮತ ಚಲಾಯಿಸಿದ್ದಾರೆಂಬುದನ್ನು ಗಮನಿಸಬೇಕು. ಚುನಾವಣೆಗಳಲ್ಲಿ ಎಡಪಕ್ಷಗಳ ಪಾತ್ರ ಸಂಪೂರ್ಣವಾಗಿ ನಗಣ್ಯವಾಗಿದ್ದುದು ಶೋಚನೀಯ. ಅವು ಈಗಲಾದರೂ ಎಚ್ಚೆತ್ತುಕೊಂಡು ಎಲ್ಲ ಪ್ರಗತಿಪರ, ಜನಪರ ಶಕ್ತಿಗಳನ್ನೂ ಒಂದುಗೂಡಿಸಿ, ಪರ್ಯಾಯ ವ್ಯವಸ್ಥೆ ರೂಪಿಸಲು ಕ್ರಮ ಕೈಗೊಳ್ಳುವುದು ಅಗತ್ಯವಾಗಿದೆ, ಅದಕ್ಕೆ ಕಾಲವೂ ಸನ್ನಿಹಿತವಾಗಿದೆ. ಇದಕ್ಕೆ ಮುಖ್ಯವಾಗಿ ಎಡಪಕ್ಷಗಳ ಐಕ್ಯತೆ ಮೊದಲ ಹೆಜ್ಜೆಯಾಗಬೇಕು. ಮುಂಬರುವ ದಿನಗಳಲ್ಲಿ ಇದು ಅಗತ್ಯವಾದ ಕಾರ್ಯ. ಆಮ್ ಆದ್ಮಿ ಪಕ್ಷ ಈಗ ದೆಹಲಿಗೆ ಮಾತ್ರ ಸೀಮಿತ. ಅದು ಕಾಂಗ್ರೆಸ್, ಭಾಜಪಗಳಿಗೆ ಪರ್ಯಾಯವಲ್ಲ. ಜನಸಾಮಾನ್ಯರು ಬದಲಾವಣೆ ನಿರೀಕ್ಷಿಸುತ್ತಿದ್ದಾರೆ. ಅವರ ನಿರೀಕ್ಷೆಯನ್ನು ಹುಸಿಯಾಗಿಸದಿರಲು ಎಲ್ಲ ಪ್ರಜಾಪ್ರಭುತ್ವವಾದಿ, ಜನಪರ ಚಿಂತಕರೂ ಒಂದುಗೂಡಿ ಪರ್ಯಾಯ ರೂಪಿಸುವುದು ಅಗತ್ಯವಾಗಿದೆ.



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(ಈ ತಿಂಗಳು : ೩ನೇ ಪುಟದಿಂದ)*

ಕರೆತಂದ. ನಮ್ಮ ದೇಶಕ್ಕೆ ಅತಿಥಿಗಳಾಗಿ ಬಂದ ಯಾವ ಅಧ್ಯಕ್ಷನ ಪ್ರಾಣಕ್ಕೂ ಈವರೆಗೆ ಹಾನಿಯುಂಟಾಗಿಲ್ಲ. ನಮ್ಮ ಪೊಲೀಸ್ ಮತ್ತು ಮಿಲಿಟರಿ ಅಧಿಕಾರಿಗಳನ್ನು ಆತ ಕರೆತಂದಿದ್ದ ರಕ್ಷಣಾ ದಳದವರು ಕೆಟ್ಟುದಾಗಿ ನಡೆಸಿಕೊಂಡರು. ಆದರೆ ನಮ್ಮ ಪ್ರಧಾನಿ ಆತನಿಗೇನೂ ಹೇಳಲಿಲ್ಲ. "ನಮ್ಮ ರಕ್ಷಣಾ ಸಾಮರ್ಥ್ಯದ ಬಗ್ಗೆ ಅಷ್ಟೊಂದು ಅನುಮಾನವಿದ್ದರೆ ನಿನ್ನ ಶ್ವೇತಭವನದಲ್ಲೇ ಕ್ಷೇಮವಾಗಿರಬಹುದಿತ್ತು" ಎಂದು ತನ್ನ ಖಾಸಾ ಮಿತ್ರ ಬರಾಕ್‌ಗೆ ಹೇಳಬಹುದಿತ್ತು. ಬಹಳ ಆಪ್ತತೆಯಿಂದ ಅಧ್ಯಕ್ಷರನ್ನು 'ಬರಾಕ್' ಎಂದು ಕರೆದರೋ ಅಥವಾ 'ಪರಾಕ್' ಹೇಳುತ್ತಿದ್ದರೋ ಗೊತ್ತಿಲ್ಲ. ಗಣರಾಜ್ಯೋತ್ಸವಕ್ಕೆ ಅತಿಥಿಯನ್ನಾಗಿ ಆತನನ್ನು ಕರೆದಿದ್ದು ಸರಿಯಿಲ್ಲ. ಹಲವು ದೇಶಗಳಲ್ಲಿ ರಕ್ತ ಚೆಲ್ಲುವಂತೆ ಮಾಡುತ್ತಿರುವವರು ಯಾರೂ ಆ ಗೌರವಕ್ಕೆ ಅರ್ಹರಲ್ಲ. ವಿಮಾನಗಳ ಹಾರಾಟವನ್ನು ಗಣರಾಜ್ಯ ಸಂಭ್ರಮದಲ್ಲಿ ಸೇರಿಸ ಕೂಡದೆಂಬ ತಕರಾರನ್ನು ಸಹ ಒಬಾಮರ ರಕ್ಷಣಾ ದಳದವರು ಎತ್ತಿದ್ದರು. ರಾಜಪಥದ ಆಸುಪಾಸಿನಲ್ಲಿ ಇರುವ ಹೊಟೇಲುಗಳನ್ನೆಲ್ಲಾ ಖಾಲಿ ಮಾಡಿಸಲಾಗಿತ್ತು ಮತ್ತು ದೆಹಲಿಯ ನಾಗರಿಕರಿಗೆ ಮೂರು ದಿನ ಎಲ್ಲಿಲ್ಲದ ನಿರ್ಬಂಧಗಳನ್ನು ಹೇರಲಾಗಿತ್ತು. ನಮ್ಮ ದೇಶಕ್ಕೆ ತಗುಲಿದ ಖರ್ಚು ೯೦ ಕೋಟಿ ರೂಪಾಯಿಗಳು. ಯಾವ ಮಹಾತ್ಮನೂ ಅತಿಥಿಯಾಗಿ ಮೂರು ದಿನವಿದ್ದು ಇಷ್ಟು ಹಣವನ್ನು ಪೋಲು ಮಾಡಿಸಿರಲಿಲ್ಲ! ಹತ್ತಾರು ಒಪ್ಪಂದಗಳಿಗೆ ಸಹಿ ಹಾಕಲಾಯಿತೆಂಬ ಸಮಾಚಾರ ಬಿತ್ತರಿಸಿದರು, ಆದರೆ ಈವರೆಗೆ ಅವುಗಳ ವಿವರಗಳು ಪ್ರಕಟವಾಗಿಲ್ಲ. ಹಾಗೆ ಪ್ರಕಟಿಸದಿರುವುದು ಸಹ ರಕ್ಷಣಾ ದಳದ ಅನುಮತಿಯಿಂದಲೇ ನಡೆಯಬೇಕೇನೊ! ಆಗ್ರಾದ ಜನ ಬಚಾವಾದರು, ಏಕೆಂದರೆ ಒಬಾಮ ದಂಪತಿಗಳು ಅಲ್ಲಿಯ ಭೇಟಿಯನ್ನು ರದ್ದು ಮಾಡಿದರು. ಸೌದಿ ಅರೇಬಿಯಾದ ದೊರೆ ಭಗವಂತನ ಪಾದ ಸೇರಿದ್ದರಿಂದ ಒಬಾಮ ರಿಯಾದ್‌ಗೆ ಧಾವಿಸಬೇಕಾಗಿ ಬಂತು. ಒಂದು ರೀತಿಯಲ್ಲಿ ಇದು ಸಾಂಕೇತಿಕವಾಗಿದೆ : ಆ ದೊರೆಯಷ್ಟು ನಿರಂಕುಶ ಆಳ್ವಿಕೆ ನಡೆಸಿದವರಿಲ್ಲ, ಮಾನವ ಹಕ್ಕುಗಳನ್ನು ಹೊಸಕಿಹಾಕಿದವರಿಲ್ಲ, ಮಹಿಳೆಯ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ತುಳಿದುಹಾಕಿದವರಿಲ್ಲ. ಆದರೆ ಮಾನವ ಹಕ್ಕುಗಳ ಮಹಾನ್ ಅಧಿರಕ್ಷಕನೆಂದು ಸುಳ್ಳುಸುಳ್ಳೇ ತನ್ನನ್ನು ವಿಜೃಂಭಿಸಿಕೊಳ್ಳುವ ಒಬಾಮರ ರಾಷ್ಟ್ರವು ಆತನಿಗೆ ನೂರಕ್ಕೆ ನೂರೈವತ್ತರಷ್ಟು ಮನ್ನಣೆ ಮತ್ತು ಪೋಷಣೆ ನೀಡಿತ್ತು, ನೀಡುತ್ತಿದೆ. ಎಷ್ಟು ಕ್ರೌರ್ಯ ಮತ್ತು ದರ್ಪ ಮೆರೆದರೂ ಸರಿಯೆ, ಒಬಾಮನ ದೇಶಕ್ಕೆ ಕೈಂಕರ್ಯ ಸಲ್ಲಿಸಿದರೆ ಉದ್ದಾಮ ಪ್ರಜಾಪ್ರಭುತ್ವವಾದಿ ಎಂಬ ಅರ್ಹತಾ ಪತ್ರ ಪಡೆಯಬಹುದೆಂಬುದಕ್ಕೆ ಸೌದಿ ಅರೇಬಿಯ ಒಂದು ನಿದರ್ಶನ. ಅರಬ್ ರಾಷ್ಟ್ರಗಳ ಹಿತವನ್ನೆಂದೂ ಲೆಕ್ಕಿಸದ ದೇಶವೆಂದರೆ ಸೌದಿ ಅರೇಬಿಯ. ಯಾವ ಪಶ್ಚಿಮ ಏಷ್ಯಾದ ದೇಶವೂ ಸೌದಿ ಅರೇಬಿಯ ಕೊಂಡಿರುವಷ್ಟು ಶಸ್ತ್ರಾಸ್ತ್ರಗಳನ್ನು ಅಮೆರಿಕಾದಿಂದ ಕೊಂಡಿಲ್ಲ. ಅಮೆರಿಕಾದ ಅಧ್ಯಕ್ಷನೆಂಬ ದೇವರಿಗೆ ನಿರಂತರವಾಗಿ ಪ್ರಪತ್ತಿ ಮಾರ್ಗದಲ್ಲಿ ನಡೆದುಕೊಳ್ಳುವ ದೇಶ ಸೌದಿ ಅರೇಬಿಯ. ನಮ್ಮ ದೇಶಕ್ಕೆ ಅಂತಹ ಕುಕೀರ್ತಿ ಎಂದಿಗೂ ಬೇಡ. ಐವತ್ತು ವರ್ಷದ ಒಬ್ಬ ಗುಜರಾತಿ ನಾಗರಿಕನನ್ನು ಒಬಾಮನ ರಕ್ಷಣಾ ದಳ ಹಿಡಿದು ಚಚ್ಚಿದ್ದು ನಮಗೊಂದು ಪಾಠವಾಗಬೇಕು. ಕಳೆದ ಎಪ್ಪತ್ತು ವರ್ಷಗಳಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಸರ್ಕಾರ ಎಷ್ಟು ದೇಶಗಳಲ್ಲಿ ಎಷ್ಟು ಜನರನ್ನು ಕೊಂದಿದೆಯೆಂಬ ಲೆಕ್ಕವೇನಾದರೂ ಸಿಕ್ಕಿದರೆ ಅದು ಜಗತ್ತಿನಲ್ಲಿ ಒಂದು ಅಳಿಸಿಹಾಕಲಾಗದ 'ರೆಕಾರ್ಡ್' ಆಗುತ್ತದೆ. ಅಂತಹ ದೇಶದೊಡನೆ ನಮಗೇಕೆ ಒಪ್ಪಂದ! ಮಾನ್ಯ ಪ್ರಧಾನಿ ಮೋದಿಯವರು ಇದನ್ನು ಆಲೋಚಿಸುವುದು ಅಗತ್ಯ.

✶ ✶ ✶

ನಮ್ಮ ದೇಶದ ಪ್ರಜೆಗಳು ಮತದಾನ ಮಾಡಲು ಯೋಗ್ಯ ವಯಸ್ಸಿನವರಾಗಿದ್ದರೆ ವಿದೇಶಗಳಲ್ಲಿ ಇದ್ದುಕೊಂಡೇ ತಮ್ಮ ಮತದಾನ ಹಕ್ಕನ್ನು ಚಲಾಯಿಸುವಂತೆ ಮಾಡಲು ಹೊಸ ತೀರ್ಮಾನ ಕೈಗೊಳ್ಳಲಾಗುತ್ತಿದೆ. ಇದು ಖಂಡನೀಯ. ನಾವಾರಾದರೂ ನಮ್ಮದೇ ದೇಶದ ಕೋಹಿಮಾಕ್ಕೆ ಹೋಗಿ ನೆಲೆಸಿದ್ದರೆ ಅಲ್ಲಿಂದ ಬೆಂಗಳೂರಿನ ಚುನಾವಣೆಯಲ್ಲಿ ಮತ ಚಲಾಯಿಸಲಾಗುವುದಿಲ್ಲ, ಆದರೆ ಅಟ್ಲಾಂಟಾಕ್ಕೆ ಹೋಗಿದ್ದರೆ ಚಲಾಯಿಸಲು ಅಡ್ಡಿಯಿಲ್ಲ! ಅಲ್ಲೆಲ್ಲೋ ನೆಲೆಸಿ ಇಲ್ಲಿಯ ಆಗುಹೋಗುಗಳಲ್ಲಿ ಮೂಗುತೂರಿಸಿ ಅವರೇಕೆ ರಾಜಕೀಯ ಹಕ್ಕನ್ನು ಅನುಭವಿಸಬೇಕು? ಹಿಂದಿನ ಕಾಲದಲ್ಲಿ "ಆ್ಯಬ್ಸೆಂಟೀ ಲ್ಯಾಂಡ್ಲಾರ್ಡಿಸಂ" ಎಂಬುದಿತ್ತು. ಅಂದರೆ ಜಮೀನುದಾರ ದೂರದಲ್ಲೆಲ್ಲೋ ಇದ್ದುಕೊಂಡು ತನ್ನ ಜಮೀನಿನ ಉಸ್ತುವಾರಿ ನೋಡಿಕೊಂಡು ಲಾಭ ಸೆಳೆದುಕೊಳ್ಳುತ್ತಿದ್ದ, ಇಲ್ಲಿಯ ಆಳುಗಳ ಮೇಲೆ ಅಧಿಕಾರ ಚಲಾಯಿಸುತ್ತಿದ್ದ. ನಮ್ಮನ್ನು ಪ್ರತಿನಿಧಿಸುವ ಶಾಸಕನನ್ನು ನಮ್ಮಿಂದ ದೂರವಾಗಿರುವ ವ್ಯಕ್ತಿ ಏಕೆ ಆರಿಸಬೇಕು? ನಮ್ಮ ಅಗತ್ಯಗಳನ್ನು ಅಲ್ಲಿಂದ ಆ ವ್ಯಕ್ತಿ ತೀರ್ಮಾನಿಸಬೇಕೆ? ಜೀವನ ಹೊರೆಯಲು ಅಲ್ಲಿಗೆ ಹೋಗಬೇಕಾಯಿತು, ಹೋಗಿದ್ದಾರೆ. ಅವರು ನಮ್ಮೊಡನೆ ಇಲ್ಲೇ ಇರಲು ಸಾಧ್ಯವಾಗಿದ್ದಿದ್ದರೆ ನಮಗೆ ಸಂತೋಷವಾಗಿರುತ್ತಿತ್ತು, ಆದರೆ ಅಲ್ಲಿಂದ ಅವರು ನಮ್ಮನ್ನು ಪ್ರತಿನಿಧಿಸುವವರನ್ನು ಆಯ್ಕೆಮಾಡುವುದು ಖಂಡಿತ ಕೂಡದು. ನಮ್ಮ ದೇಶಕ್ಕೆ ಆಗಾಗ್ಗೆ ಬರುವ ವರದಿಗಳನ್ನು ನೋಡಿದರೆ ಹೊರದೇಶಗಳಲ್ಲಿ ನೆಲೆಸಿರುವ ನಮ್ಮ ದೇಶದ ಬಾಂಧವರು ಬಂಡವಾಳ ಹೂಡುವುದು ಯೂರೋಪ್ ಮತ್ತು ಅಮೆರಿಕಾಗಳಲ್ಲಿ. ಅದಕ್ಕೆ ಕೆಲವು ಅಪವಾದಗಳಿರಬಹುದು, ಆದರೆ ಬಹು ಕಡಿಮೆ. ರಾಜಕೀಯವಾಗಿ ಅವರ ಒಲವನ್ನು ಗಳಿಸಲು ನಮ್ಮೂರಿನ ಚುನಾವಣಾ ಅಭ್ಯರ್ಥಿ ಅವರನ್ನು ಸಂಪರ್ಕಿಸುವುದು ಸಹ ಸಾಧ್ಯವಿಲ್ಲ. ಹೋಗಲಿ ಎಂದರೆ, ಈ ಪ್ರಕ್ರಿಯೆಗೆ ನೂರಾರು ಕೋಟಿ ರೂಪಾಯಿಗಳೂ ವೆಚ್ಚವಾಗುತ್ತದೆ. ಅದನ್ನು ಭರಿಸಬೇಕಾದವರು ನಾವು. ಅಲ್ಲಿ ನೆಲೆಸಿದ್ದು ಭಾರತದ ಪ್ರಜೆಗಳಾಗಿಯೇ ಉಳಿದಿದ್ದರೆ ಅವರನ್ನು ನಮ್ಮ ದೇಶದವರೆಂದು ಗೌರವಿಸೋಣ, ಆದರೆ ಗೌರವವನ್ನು ನಮ್ಮ ದೇಶದ ಚುನಾವಣೆಗಳಲ್ಲಿ ಅಲ್ಲೆಲ್ಲಿಂದಲೋ ಮತ ಚಲಾಯಿಸುವುದಕ್ಕೆ ವಿಸ್ತರಿಸುವುದು ಬೇಡ. ಈಗ ಮತ ಚಲಾಯಿಸುವವರು ಶೇ. ೬೦ ಎಂದಿಟ್ಟುಕೊಳ್ಳೋಣ. ಅದು ೬೦.೦೦೧ ಆಗಿಬಿಟ್ಟರೆ ದೊಡ್ಡ ಪ್ರಮಾಣದ ಉತ್ತಮಿಕೆಯೇನೂ ಉಂಟಾಗುವುದಿಲ್ಲ. ನಮ್ಮ ದೇಶದಲ್ಲಿ ಜೀವಿಸುವ ಸೌಭಾಗ್ಯ ಕಳೆದುಕೊಂಡವರು ಐದು ವರ್ಷಕ್ಕೊಮ್ಮೆ ಒಂದು ಮತ ಚಲಾಯಿಸಲು ಸಾಧ್ಯವಾಗದಿದ್ದರೆ ಅವರೇನೂ ನಿರ್ಭಾಗ್ಯರಾಗುವುದಿಲ್ಲ. ಅವರೆಲ್ಲಾ ನಮ್ಮ ಸೋದರ–ಸೋದರಿಯರಾಗಿಯೇ ಇರುತ್ತಾರೆ. ಮತದಾನದ ಪರಿಧಿಯನ್ನು ಹೀಗೆ ವಿಸ್ತರಿಸುವುದನ್ನು ಕೈಬಿಟ್ಟು ನಾವು ಅನುಪಾತದ ಮಾದರಿಯಲ್ಲಿ ಪ್ರಾತಿನಿಧ್ಯವಿರುವಂತೆ ಚುನಾವಣಾ ಪದ್ಧತಿಯನ್ನು ಮಾರ್ಪಡಿಸುವುದು ಅತ್ಯವಶ್ಯಕ.

✶ ✶ ✶

ಮಹಾರಾಷ್ಟ್ರದಲ್ಲಿ "ಮರಾಠಿ ಮಾಣುಸ್"ಗೆ ಆದ್ಯತೆ ಎಂಬ ಘೋಷಣೆ ಬಾಳ ಠಾಕ್ರೆಯ ಬತ್ತಳಿಕೆಯ ಬಾಣ. ಮಹಾರಾಷ್ಟ್ರದಲ್ಲಿ ಪ್ರವಾಸ ಕೈಗೊಂಡಾಗ ಕೆಲವು ಮರಾಠಿ ಮಿತ್ರರು ಸ್ವಾರಸ್ಯಕರ ಸಂಗತಿಗಳನ್ನು ಪರಿಚಯಿಸಿಕೊಡುತ್ತಾರೆ. ಅದರಲ್ಲೆ ಒಂದು ಠಾಕ್ರೆ ಕುಟುಂಬದಲ್ಲಿ ಮರಾಠಿ ಮಾಣುಸ್‌ಗೆ ಅಂತಹ ಹೇಳಿಕೊಳ್ಳಬಹುದಾದ ಆದ್ಯತೆ ಇಲ್ಲವೋ ಎಂದು. ಇದು ಕುಟುಂಬದ ವ್ಯವಹಾರ, ವೈಯಕ್ತಿಕ ಆಯ್ಕೆ. ಅದನ್ನು ಪ್ರಶ್ನಿಸುವಂತಿಲ್ಲ. ಆದರೆ ತಮಾಷೆಗಾಗಿ ಒಂದೆರಡು ವಿವರಗಳನ್ನು ತಿಳಿದುಕೊಳ್ಳುವುದು ಆಕ್ಷೇಪಾರ್ಹವಲ್ಲ. ಉದ್ಧವ ಠಾಕ್ರೆ ಈಗ ಶಿವಸೇನೆಯ ಮುಖ್ಯಸ್ಥ. ಆತನ ಪತ್ನಿ ಉತ್ತರ ಪ್ರದೇಶದ ಹಿಂದಿ ಭಾಷಿಕರು. ಉದ್ಧವ ಮಹಾರಾಜನಿಗೆ ಅವನಿಷ್ಟದ ಸಲಹೆಗಾರನ ಸ್ಥಾನದಲ್ಲಿರುವ ವ್ಯಕ್ತಿಯೊಬ್ಬರು ಉತ್ತರ ಪ್ರದೇಶದವರು. ಆತನಿಗೆ ಉದ್ಧವನ ರಾಣಿ ಇತ್ತೀಚೆಗೆ ಹೇಳಿದರಂತೆ. "ನೋಡು, ನೀನು ಮುಂಬೈ ನಗರದ ಮೇಯರ್ ಅವರನ್ನು ಭೇಟಿಯಾದಾಗ ಆಕೆ ಕೊಡುವ ಟೀ ಕುಡಿಯಬೇಡ. ಏಕೆ ಗೊತ್ತೆ? ಆಕೆ ಪರಿಶಿಷ್ಟ ಜಾತಿಗೆ ಸೇರಿದವರು", ಎಂದು!!. ಜೈ ಭಾರತ್ ಮಹಾನ್ ಎನ್ನಲಡ್ಡಿಯಿಲ್ಲ, ಅಲ್ಲವೆ?

✶ ✶ ✶

ಅರ್ಕಾವತಿ ನದಿಯಲ್ಲಿ ನೀರು ಹರಿದದ್ದನ್ನು ಯಾರೂ ಕಂಡಿಲ್ಲ. ಮಳೆಗಾಲದಲ್ಲಿ ಅಷ್ಟೋ ಇಷ್ಟೋ ಹರಿದೀತೇನೊ. ಆದರೆ ಅರ್ಕಾವತಿ ಹಗರಣ ಮಾತ್ರ ತುಂಬಿದ ಪ್ರವಾಹ, ನಿರಂತರ. ಹೊಸ ವರ್ಷದಲ್ಲಿ ಪ್ರಾರಂಭವಾದ ರಾಜ್ಯ ವಿಧಾನ ಮಂಡಲದ ಎರಡೂ ಸದನಗಳಲ್ಲಿ ಬೆಂಗಳೂರಿನ ಅರ್ಕಾವತಿ ಬಡಾವಣೆಯ ಕುರಿತ ನೋಟಿಫಿಕೇಶನ್, ಡಿನೋಟಿಫಿಕೇಶನ್ ಪ್ರಸ್ತಾಪ ಬಾರದ ದಿನವೇ ಇಲ್ಲ. ಸದನದ ಕೊನೆಯ ದಿನವೂ ಕೂಡ ಅರ್ಕಾವತಿ ಕರ್ಮಕಾಂಡ ಸಾಕಷ್ಟು ಸಮಯವನ್ನು ನುಂಗಿತು. ಧರಂ ಸಿಂಗ್, ಕುಮಾರಸ್ವಾಮಿ, ಯಡಿಯೂರಪ್ಪ, ಸದಾನಂದ ಗೌಡ, ಜಗದೀಶ ಶೆಟ್ಟರ್, ಸಿದ್ದರಾಮಯ್ಯ ಈ ಎಲ್ಲ ಮುಖ್ಯಮಂತ್ರಿಗಳೂ ಒಂದಲ್ಲ ಒಂದು

ರೀತಿಯಲ್ಲಿ ಈ ಹಗರಣದಲ್ಲಿ ಭಾಗಿಗಳೇ ? ನ್ಯಾಯಮೂರ್ತಿ ಎಚ್. ಎಸ್. ಕೆಂಪಣ್ಣ ನೇತೃತ್ವದಲ್ಲಿ ಆಯೋಗವೊಂದನ್ನು ರಚಿಸಿ ಮುಖ್ಯಮಂತ್ರಿ ಸಿದ್ದರಾಮಯ್ಯ ಕೈ ತೊಳೆದುಕೊಂಡು ಹಾಯಾಗಿದ್ದಾರೆ. ಇನ್ನೂ ಆಯೋಗದ ವರದಿ ಬರುವವರೆಗೆ ಅವರು ನಿದ್ರೆ ಮಾಡಬಹುದು. ಬೆಂಗಳೂರಿನಲ್ಲಿ ಭೂಮಿ ಬೆಲೆ ಗಗನಕ್ಕೇರಿರುವಾಗ, ಸಾವಿರಾರು ಕೋಟಿ ರೂಪಾಯಿಗಳ ವ್ಯವಹಾರ ಇರುವಾಗ ಯಾರಿಗೆ ತಾನೆ ಹಣ ಬೇಡ, ಅದರಲ್ಲೂ ರಾಜಕಾರಣಿಗಳಿಗೆ. ಗಣಿಗಾರಿಕೆ ಬಿಟ್ಟರೆ ಭೂಹಗರಣದ್ದೇ ಪಾರುಪತ್ಯ. ಯಡಿಯೂರಪ್ಪ ಪರಪ್ಪನ ಅಗ್ರಹಾರ ಸೇರಿದ್ದು ಕೂಡ ಈ ಹಗರಣದಿಂದಾಗಿಯೆ. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಏಳೆಂಟು ವರ್ಷಗಳ ಹಿಂದೆ ಅರ್ಕಾವತಿ ಬಡಾವಣೆ ರಚಿಸಿ ಸಾರ್ವಜನಿಕರಿಂದ ಅರ್ಜಿ ಆಹ್ವಾನಿಸಿ, ಹಂಚಿಕೆಯನ್ನು ಮಾಡಿತ್ತು. ಆದರೆ ಕೆಲವೇ ದಿನಗಳಲ್ಲಿ ತಕರಾರು. ಆಗ ಶುರುವಾದದ್ದೆ ನೋಟಿಫಿಕೇಶನ್, ಡಿನೋಟಿಫಿಕೇಶನ್ ಹಗರಣ. ಅಂದಿನಿಂದ ಇಂದಿನವರೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಯಾವ ಹೊಸ ಬಡಾವಣೆಯನ್ನೂ ಮಾಡಿಲ್ಲ. ಕೆಂಗೇರಿ ಸಮೀಪ ನಿರ್ಮಿಸಲು ಹೊರಟ ಬಹುದೊಡ್ಡ ಬಡಾವಣೆ ಮೇಲೇಳಲೇ ಇಲ್ಲ. ಭೂಕಬಳಿಕೆಯ ಈ ರಾದ್ಧಾಂತ ಈಗ ಹಲವು ವರ್ಷಗಳಿಂದ ವಿಧಾನ ಮಂಡಲದ ಕಲಾಪಗಳನ್ನು ಬೇಕಾದಷ್ಟು ನುಂಗಿಹಾಕಿದೆ, ಸಾವಿರಾರು ಕೋಟಿ ಹಣ ಗುಳುಂ ಆಗಿರುವ ಹಾಗೆ. ಹಲವಾರು ಹಗರಣಗಳನ್ನು ಹೊರಗೆಡಹಿರುವ ಹಿರೇಮಠ ಸಾಕಷ್ಟು ದಾಖಲೆಗಳನ್ನು ಒದಗಿಸಿದ್ದಿದೆ. ಜನತಾದಳದ ನಾಯಕ ಕುಮಾರಸ್ವಾಮಿ ಒಂದು ಬೃಹತ್ ಗ್ರಂಥವನ್ನೇ ಪ್ರಕಟಿಸಿ ಹಂಚಿದ್ದಾರೆ. ಎಲ್ಲ ಮಾಜಿ ಮುಖ್ಯಮಂತ್ರಿಗಳೂ ತಮ್ಮ ಸಾಚಾತನವನ್ನು ತೋಡಿಕೊಂಡಿದ್ದಾರೆ. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಧಿಕಾರಿಗಳು ಎಷ್ಟು ಪ್ರಾಮಾಣಿಕರು ಎಂಬುದು ಆ ಕಚೇರಿಗೆ ಹೋದವರಿಗೆ ಗೊತ್ತು. ಅಲ್ಲಿನ ಕಟ್ಟಡಗಳ ಗೋಡೆಗಳು, ಕಿಟಕಿಗಳೂ ಕೂಡ ಲಂಚ ಕೇಳುತ್ತವೆ ಎಂಬ ಪ್ರತೀತಿ ಇದೆ. ಇನ್ನು ನಮ್ಮ ಸಚಿವರು, ಶಾಸಕರ ಪ್ರಾಮಾಣಿಕತೆ ಕುರಿತು ಚಕಾರ ಎತ್ತುವಂತಿಲ್ಲ.

ಅಂದಹಾಗೆ ಈ ಸಲದ ಅಧಿವೇಶನದಲ್ಲಿ ರಾಜ್ಯಪಾಲರ ಭಾಷಣದ ಮೇಲೆ ಒಂದಷ್ಟು ಚರ್ಚೆ ಬಿಟ್ಟರೆ ಬೇರೇನಿತ್ತು ಎಂಬುದನ್ನು ಕೆದಕಿ ನೋಡಬೇಕು. ನಾನು ಪ್ರಗತಿಪರ, ವಿಚಾರವಾದಿ; ನಾನು ಆಸ್ತಿಕನೂ ಅಲ್ಲ ನಾಸ್ತಿಕನೂ ಅಲ್ಲ ಎಂದು ಹೇಳಿಕೊಳ್ಳುವ ಸಿದ್ದರಾಮಯ್ಯ ಮಠಮಾನ್ಯರುಗಳ ಒತ್ತಾಯಕ್ಕೆ ಮಣಿದು ಮಠಗಳ ನಿಯಂತ್ರಣ ಕುರಿತ ಮಸೂದೆಯನ್ನೂ ಮುಗುಮ್ಮಾಗಿ ವಾಪಸ್ಸು ಪಡೆದುಕೊಂಡರು. ಇನ್ನೂ ಮೂಢನಂಬಿಕೆ ನಿಷೇಧಿಸುವ ಮಸೂದೆ ಸಿದ್ಧಪಡಿಸಿದ್ದರೂ ಅದು ಜೋಪಾನವಾಗಿ ವಿಧಾನಸೌಧದ ಬೀರುವಿನ ಮೂಲೆ ಸೇರಿದೆ.

* * *

ಸಂಘಪರಿವಾರದವರು ಪ್ರತಿವರ್ಷ ನಡೆಸುವ ಹಿಂದೂ ಸಮಾಜೋತ್ಸವ ಬೆಂಗಳೂರು ನಗರದ ನ್ಯಾಷನಲ್ ಕಾಲೇಜು ಮೈದಾನದಲ್ಲಿ ಈ ಸಲವೂ ನಡೆಯಿತು. ಮಾಮೂಲಿನಂತೆ ಚಾಮರಾಜಪೇಟೆ, ಜಯನಗರ, ಶಂಕರಪುರ, ಬಸವನಗುಡಿ ಬೀದಿಗಳಲ್ಲಿ ಕಾವಿಬಣ್ಣದ ಬ್ಯಾನರುಗಳು, ತೋರಣಗಳು ರಾರಾಜಿಸಿದುವು. ನಗರದಲ್ಲಿ ನಡೆಯುವ ಹತ್ತಾರು ಕಾರ್ಯಕ್ರಮಗಳಂತೆ ಅದೂ ನಡೆದುಹೋಗುತ್ತಿತ್ತು. ಆದರೆ ಪೊಲೀಸರು ವಿಶ್ವ ಹಿಂದೂ ಪರಿಷತ್ತಿನ ಪ್ರವೀಣ್ ತೊಗಾಡಿಯಾ ನಗರಪ್ರವೇಶಕ್ಕೆ ಪ್ರತಿಬಂಧಕ ಹೇರಿ ಅನಗತ್ಯ ಪ್ರಚಾರಕ್ಕೆ ಎಡೆಮಾಡಿಕೊಟ್ಟರು. ಈತ ಬಂದು ಒಂದು ಭಾಷಣ ಬಿಗಿದು ಹೋಗಿದ್ದರೆ ಏನೂ ಮುಳುಗಿ ಹೋಗುತ್ತಿರಲಿಲ್ಲ. ಆತ ಏನು ಮಾತನಾಡುತ್ತಾನೆ ಎನ್ನುವುದೂ ಗೊತ್ತು. ಬೇಜವಾಬ್ದಾರಿ ಆಸಾಮಿ ಈತ ಉಗ್ರ ಹಿಂದುತ್ವವಾದಿ. ಈತ ಹೆಸರು ಮಾಡಿದ್ದೇ ಶ್ರೀರಾಮನ ಹೆಸರಿನಲ್ಲಿ, ಅಯೋಧ್ಯೆ ರಥಯಾತ್ರೆ ಕಾಲದಲ್ಲಿ. ಮೋದಿ ಅಧಿಕಾರದಲ್ಲಿರುವುದರಿಂದ ಈತನ ಪಾರುಪತ್ಯ ಹೆಚ್ಚಾಗಿದೆ. ಪೊಲೀಸರು ಹೇರಿದ ನಿರ್ಬಂಧ ಎಷ್ಟು ಸರಿ ಎನ್ನುವುದು ಬೇರೇ ವಿಷಯ. ಅದು ವಿಧಾನ ಮಂಡಲದ ಒಂದೆರಡು ದಿನಗಳ ಕಲಾಪವನ್ನು ಅಡ್ಡಿಪಡಿಸಿತು. ಸಾವಿರಾರು ಪೊಲೀಸರು ಸಮಾಜೋತ್ಸವ ಮೈದಾನದ ಬಳಿ ಇದ್ದರೂ ತೊಗಾಡಿಯಾನ ಧ್ವನಿ ಮುದ್ರಿತ ಭಾಷಣ ತಡೆಯಲಾಗಲಿಲ್ಲ. ಪೊಲೀಸರು ವಿಡಿಯೋ ಭಾಷಣಕ್ಕೂ ನಿಷೇಧ ಹೇರಿದ್ದರು. ಆದರೂ ಹತ್ತು ನಿಮಿಷಗಳ ಭಾಷಣ ಬಿತ್ತರಿಸಲ್ಪಟ್ಟಿತು. ಪೊಲೀಸರು ಕೈಕಟ್ಟಿ ನಿಲ್ಲಬೇಕಾಯಿತು. ಇದನ್ನು ಮೂರ್ಖತನ ಎನ್ನೋಣವೇ, ಇಲ್ಲ ಪೊಲೀಸರ ವೈಫಲ್ಯ ಎನ್ನೋಣವೇ ? ಗೃಹಸಚಿವ ಜಾರ್ಜ್‌ರವರೇ ಉತ್ತರಿಸಬೇಕು. ಊರು ಕೊಳ್ಳೆಯಾದ ಮೇಲೆ ದಿಡ್ಡಿಬಾಗಿಲು ಮುಚ್ಚಿದರು ಅನ್ನೋ ಹಾಗೆ ಪೊಲೀಸರು ಮರ್ಯಾದೆ ಕಾಪಾಡಿಕೊಳ್ಳಲು ಸಂಘಟಕರ ಮೇಲೆ ಮೊಕದ್ದಮೆ ಹೂಡಿದ್ದಾರೆ. ಅವರಿಗೆ ಶಿಕ್ಷೆಯಾದಾಗ ನೋಡಿಕೊಳ್ಳೋಣ.

* * *

ಕೆಲ ತಿಂಗಳ ಹಿಂದೆ ಅಮೆರಿಕದಲ್ಲಿ ಪೊಲೀಸರ ದೌರ್ಜನ್ಯ ಕುರಿತು ಪ್ರಸ್ತಾಪ ಮಾಡಿದ್ದೆವು. ಮಾನವ ಹಕ್ಕುಗಳ ಪ್ರತಿಪಾದಕ ತಾನು ಎಂದು ಹೇಳಿಕೊಳ್ಳುವ ಅಮೆರಿಕ ತನ್ನ ದೇಶದಲ್ಲೇ ನಡೆಯುವ ಪೊಲೀಸರ ಅತ್ಯಾಚಾರವನ್ನು ತಡೆಯುವುದರಲ್ಲಿ ವಿಫಲಗೊಂಡಿದೆ. ಅಮೆರಿಕದ ಆಡಳಿತಗಾರರು ಇತರ ದೇಶಗಳ ಮಾನವಹಕ್ಕುಗಳ ಉಲ್ಲಂಘನೆ ಕುರಿತು ಬೊಟ್ಟು ಮಾಡಿ ಹೇಳುವುದರಲ್ಲಿ ನಿಸ್ಸೀಮರು. ಅದರ ಮಿಲಿಟರಿ ಇತರ ದೇಶಗಳಲ್ಲಿ ನಡೆಸುವ ದೌರ್ಜನ್ಯ ಬೇರೆಯೇ ಕತೆ. ಇಬ್ಬರು ಆಫ್ರಿಕನ್ ಅಮೆರಿಕನ್ನರನ್ನು ಗುಂಡಿಕ್ಕಿ ಕೊಂದರೂ, ಪೊಲೀಸು ಅಧಿಕಾರಿಗಳು ಆರಾಮವಾಗಿ ಓಡಾಡಿಕೊಂಡಿದ್ದಾರೆ. ನ್ಯಾಯಾಲಯ ಅವರನ್ನು ನಿರ್ದೋಷಿಗಳೆಂದು ಖುಲಾಸೆ ಮಾಡಿತು. ಆಫ್ರಿಕನ್ ಅಮೆರಿಕನ್ನರು ಈ ತೀರ್ಪನ್ನು ಪ್ರತಿಭಟಿಸಿ ವಾಷಿಂಗ್ಟನ್, ನ್ಯೂಯಾರ್ಕ್, ಡೆಟ್ರಾಯಿಟ್, ಶಿಕಾಗೋ, ಫ್ಲಾರಿಡಾ ಮೊದಲಾದ ಕಡೆ ಪ್ರದರ್ಶನಗಳನ್ನು ನಡೆಸಿದರು. ಅಮೆರಿಕ ಸರಕಾರ ಈ ಪ್ರದರ್ಶನಗಳಿಗೆ ಕ್ಯಾರೇ ಅನ್ನಲಿಲ್ಲ. ಏನೂ ಆಗಿಲ್ಲ ಎಂದು ಸೋಗುಹಾಕಿ ತೆಪ್ಪಗಿತ್ತು.

ಈಗ ಹಿಂದಿನದನ್ನೆಲ್ಲ ನೆನಪು ಮಾಡಿಕೊಳ್ಳುವುದಕ್ಕೆ ಕಾರಣ ಈಚೆಗೆ ಅದೇ ಅಮೆರಿಕ ಪೊಲೀಸರ ದೌರ್ಜನ್ಯಕ್ಕೆ ಬಲಿಯಾದವನು ಭಾರತೀಯ ಪೊಲೀಸರಿಂದ ಅಮಾನುಷವಾಗಿ ಒದೆ ತಿಂದು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿರುವ ಗುಜರಾತ್ ಮೂಲದ ಸುರೇಶ್‌ಭಾಯಿ ಪಟೇಲ್ ಎಂಬ ಹಿರಿಯ ನಾಗರಿಕ. ಘಟನೆ ನಡೆದದ್ದು ಅಲಬಾಮ ರಾಜ್ಯದಲ್ಲಿ. ಇದು ಜನಾಂಗೀಯ ದ್ವೇಷಕ್ಕೆ ಹೆಸರುವಾಸಿಯಾಗಿದೆ ಅಮೆರಿಕದಲ್ಲಿ. ಕರಿಯರ ಮೇಲೆ ಕುಖ್ಯಾತ 'ಕ್ಲುಕ್ಲುಕ್ಸ್‌ಕ್ಲಾನ್', ಇದು ಬಿಳಿಯರ ಸಂಘಟನೆ, ಸಾಕಷ್ಟು ಕರಿಯರ ಕೊಲೆಗಳನ್ನು ನಡೆಸಿದ್ದ ಸಂಸ್ಥೆ ಒಂದು ಕಾಲದಲ್ಲಿ. ಅಲಬಾಮಾದಲ್ಲಿ ಈ ಸಂಘಟನೆ ತುಂಬ ಕ್ರಿಯಾಶೀಲವಾಗಿತ್ತು. ಭಾರತೀಯ ಪಟೇಲನ ಮೇಲೆ ದಾಳಿಮಾಡಲು ಕಾರಣ ಆತ ಗರಾಜುಗಳಲ್ಲಿ ಇಣುಕಿ ನೋಡುತ್ತಿದ್ದ ಎಂಬುದು. ಇದು ನೆಪಕ್ಕೆ ಅಷ್ಟೆ. ಪೊಲೀಸು ಅಧಿಕಾರಿ ಈತನ ಮೇಲೆ ನಡೆಸಿದ ಹಲ್ಲೆಯ ದೃಶ್ಯಗಳು ನಮ್ಮ ಎಲ್ಲ ಟಿವಿ ಮಾಧ್ಯಮಗಳಲ್ಲೂ ಪ್ರಸಾರವಾಯಿತು. ಘಟನೆ ಕುರಿತು ಅಮೆರಿಕದ ವಿದೇಶಾಂಗ ಸಚಿವಾಲಯ ವಿಷಾದ ವ್ಯಕ್ತಪಡಿಸಿದೆ. ಸಂಬಂಧಪಟ್ಟ ಪೊಲೀಸು ಅಧಿಕಾರಿಯನ್ನು ಬಂಧಿಸಿ ತನಿಖೆಗೆ ಆದೇಶ ನೀಡಿ ಅಮೆರಿಕ ಸರಕಾರ ಕೈತೊಳೆದುಕೊಂಡಿದೆ. ಆಶ್ಚರ್ಯಕರ ಸಂಗತಿಯೆಂದರೆ ಈ ಘಟನೆ ಮಾಧ್ಯಮಗಳಲ್ಲಿ ದೊಡ್ಡ ಸುದ್ದಿಯಾಗಲೇ ಇಲ್ಲ. ಮೋದಿ ಸರಕಾರದ ಸಚಿವರಾಗಲಿ, ಅಧಿಕಾರಿಗಳಾಗಲಿ ಘಟನೆಯನ್ನು ಕುರಿತ ಪ್ರತಿಕ್ರಿಯೆ ನೀಡಲಿಲ್ಲ. ಖಂಡಿಸಲೂ ಇಲ್ಲ. ಭಾರತೀಯ ನಾಗರಿಕನೋರ್ವನ ಮೇಲೆ ಅಮೆರಿಕದಲ್ಲಿ ನಡೆದ ಮಾರಣಾಂತಿಕ ಹಲ್ಲೆಯನ್ನು ಮೋದಿ ಸರಕಾರ ಸಂಪೂರ್ಣವಾಗಿ ಕಡೆಗಣಿಸಿದ್ದಕ್ಕೆ ಕಾರಣ ಈಚೆಗೆ ಆದೇಶದೊಂದಿಗೆ ಬೆಸೆದಿರುವ ಸಂಬಂಧಗಳೋ ಏನೋ. ಕ್ಷುಲ್ಲಕ ವಿಚಾರಗಳನ್ನು ಕುರಿತು ಗಂಟೆಗಟ್ಟಲೆ ಚರ್ಚಾಗೋಷ್ಠಿಗಳನ್ನು ನಡೆಸುವ ಮಾಧ್ಯಮಗಳಿಗೆ ಇದು ದೊಡ್ಡ ಸುದ್ದಿ ಆಗಲೇ ಇಲ್ಲ. ಭಾರತದ ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್ ಪ್ರಾಯಶಃ ಭಗವದ್ಗೀತೆ ಪಠಣ ಮಾಡಿ ಮನಃಶಾಂತಿ ಪಡೆದಿರಬೇಕು. ಸಚಿವಾಲಯದ ಒಬ್ಬ ಯಃಕಶ್ಚಿತ್ ಕಿರಿಯ ಅಧಿಕಾರಿ ಸಯ್ಯದ್ ಅಕ್ಬರುದ್ದೀನ್ ಎಂಬಾತ ಸರಕಾರ ಭಾರತೀಯ ನಾಗರಿಕರ ಮೇಲೆ ಹಲ್ಲೆಯನ್ನು ಗಂಭೀರವಾಗಿ ಪರಿಗಣಿಸುತ್ತದೆ, ಘಟನೆಯ ಕುರಿತು ಭಾರತದ ಕಳವಳವನ್ನು ಸಂಬಂಧಪಟ್ಟವರಿಗೆ ತಿಳಿಯಪಡಿಸುತ್ತೇವೆ ಎಂದು ತಿಳಿಸಿದ್ದಾನೆ. ಅಲ್ಲಿಗೆ ಮುಗಿಯಿತು ಭಾರತ ಸರಕಾರದ ಪ್ರತಿಕ್ರಿಯೆ. ವಿದೇಶದಲ್ಲಿ ನೆಲೆಸಿರುವ ಭಾರತೀಯರ ಸುರಕ್ಷಿತತೆಯನ್ನು ಕಾಪಾಡುವ ಪರಿ ಇದೇನಾ ಎಂಬುದನ್ನು ಮೋದಿಯೇ ತಿಳಿಸಬೇಕು.




✉ ಈ ವರ್ಷದ ವಿಶೇಷ ಸಂಚಿಕೆಯಲ್ಲಿ, ಮುಖಪುಟದ ವೇಣುವಾದನದಲ್ಲಿ ಮಗ್ನರಾಗಿರುವ ಇಬ್ಬರು ಬುಡಕಟ್ಟು ಜನಾಂಗದ ಯುವಕರ ವರ್ಣಚಿತ್ರ ಸೊಗಸಾಗಿ ಮೂಡಿಬಂದಿದೆ. ಅನೇಕ ಉಪಯುಕ್ತ ಹಾಗೂ ವೈಚಾರಿಕ ಲೇಖನಗಳೊಂದಿಗೆ ಸಂಚಿಕೆ ಓದುಗರ ಕೈ ಸೇರಿದೆ.

ಸಂಪಾದಕೀಯದಲ್ಲಿ, ಅನೇಕ ಪ್ರಸಕ್ತ ರಾಜಕೀಯ ಮತ್ತು ಸಾಮಾಜಿಕ ವಿಷಯಗಳತ್ತ ಗಮನ ಸೆಳೆಯಲಾಗಿದೆ. ಡಾ॥ ಜಿ. ರಾಮಕೃಷ್ಣರವರು ತಮ್ಮ ಈ ಸಂಚಿಕೆಯ ಕಂತಿನಲ್ಲಿ ಕ್ಲಿಷ್ಟವಾದ ಸಂಸ್ಕೃತ ಭಾಷೆಯ ಋಗ್ವೇದದ ಮಂತ್ರಗಳ ಸಾರಾಂಶವನ್ನು ಸರಳವಾದ ಕನ್ನಡದಲ್ಲಿ ಜನಸಾಮಾನ್ಯರಿಗೆ ತಲುಪಿಸಿದ್ದಾರೆ. ಅವರು ನಿರಂತರವಾಗಿ, ಹಿಂದಿನ ಕಂತುಗಳಲ್ಲಿ ಸಹ, ಋಗ್ವೇದ ಕಾಲದ ಚಿಂತನೆಗಳ ಸಾಮಾಜಿಕ ಸನ್ನಿವೇಶಗಳನ್ನು ವಿವರಿಸುವ ಪ್ರಯತ್ನ ಮಾಡುತ್ತಿದ್ದಾರೆ. ಪುರುಷಸೂಕ್ತದ ವಿವರಣೆ ಉಪಯುಕ್ತವಾಗಿದೆ.

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯನವರು ತಮ್ಮ ಲೇಖನದಲ್ಲಿ ಇತಿಹಾಸ ಮತ್ತು ಪುರಾಣಗಳ ಅಂತರವನ್ನು ಚರ್ಚಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ, ಪೌರಾಣಿಕ ಪಾತ್ರಗಳನ್ನು ಐತಿಹಾಸಿಕ ವ್ಯಕ್ತಿಗಳನ್ನಾಗಿ ಮತ್ತು ಪೌರಾಣಿಕ ಸನ್ನಿವೇಶಗಳನ್ನು ಐತಿಹಾಸಿಕ ಘಟನೆಗಳನ್ನಾಗಿ ಬಿಂಬಿಸುತ್ತಿರುವುದು ಸಾಮಾನ್ಯವಾಗಿದೆ. ಐತಿಹಾಸಿಕ ದಾಖಲೆಗಳನ್ನು ತಮ್ಮ ಧೋರಣೆಗಳಿಗೆ ಮತ್ತು ಅನುಕೂಲಕ್ಕೆ ತಕ್ಕಂತೆ ತಿರುಚುವುದು ಕೆಲವು 'ಪರಿಣತ ಸಂಶೋಧಕರ' ಪ್ರವೃತ್ತಿಯಾಗಿದೆ. ಯಾವುದೇ ಒಂದು ಕಾಲಘಟ್ಟದ ಇತಿಹಾಸವನ್ನು ಯಥಾವತ್ತಾಗಿ ದಾಖಲಿಸುವುದು ಇತಿಹಾಸಕಾರರ ಜವಾಬ್ದಾರಿಯಾಗಿರುತ್ತದೆ. ಇತಿಹಾಸ ಗ್ರಂಥಗಳು ಭವಿಷ್ಯದ ಪೀಳಿಗೆಯ ಜನರಿಗೆ ದಾರಿದೀಪವಾಗಬೇಕಿದೆ. ಸಂದರ್ಶನಗಳು ಸಂದರ್ಶಿತ ವ್ಯಕ್ತಿಗಳ ಸಾಧನೆಗಳ ಚಿತ್ರಣವನ್ನು ನೀಡಿವೆ. ಕವನಗಳು, ವಿಡಂಬನಾತ್ಮಕ ಲೇಖನಗಳು ಸಂಚಿಕೆಗೆ ಮೆರುಗನ್ನು ನೀಡಿವೆ. ಇತ್ತೀಚಿನ ದಿನಗಳಲ್ಲಿ ನಿಧನರಾದ ವಿ. ಆರ್. ಕೃಷ್ಣ ಅಯ್ಯರ್, ಕ. ವೆಂ. ರಾಜಗೋಪಾಲ್ ಮತ್ತು ಹಿರಿಯ ಸಂಗೀತ ವಿದ್ವಾಂಸ ನೇದನೂರಿ ಕೃಷ್ಣಮೂರ್ತಿ ಅವರ ಬಗ್ಗೆ ಪ್ರಕಟವಾದ ಶ್ರದ್ಧಾಂಜಲಿ ಲೇಖನಗಳು ಸೂಕ್ತವಾಗಿವೆ. ಈ ಸಂಚಿಕೆಗೆ ಶ್ರಮಿಸಿದ 'ಹೊಸತು' ಸಂಪಾದಕ ಮಂಡಳಿ ಮತ್ತು ಬಳಗದ ಎಲ್ಲರಿಗೂ ಅಭಿನಂದನೆಗಳು.

*ಬೆಂಗಳೂರು* **ಶಂಕರನಾರಾಯಣ**

✉ ಫೆಬ್ರವರಿ ತಿಂಗಳ 'ಹೊಸತು'ವಿನಲ್ಲಿ ಡಾ॥ ರಾಜೇಂದ್ರ ಬುರಡಿಕಟ್ಟಿ ಅವರ 'ಭಗವದ್ಗೀತೆ ಒಂದು ನೋಟ' ಎಂಬ ಲೇಖನ "ಸಂವಿಧಾನದ ಆಶಯಗಳನ್ನು ಬುಡಮೇಲು ಮಾಡಬಲ್ಲ ಅನೇಕ ಅಪಾಯಕಾರಿ ಅಂಶಗಳನ್ನು ತನ್ನ ಗರ್ಭದಲ್ಲಿ ಇರಿಸಿಕೊಂಡಿರುವ ಗೀತೆ" ಎಂಬ ತೀರ್ಮಾನಕ್ಕೆ ಬಂದು ಶಾಲಾ ಮಕ್ಕಳ ಗಂಟಲಲ್ಲಿ ಒತ್ತಾಯದಿಂದ ಇಳಿಸಲು ಹೊರಟಿರುವ ಗೀತೆಯ ಬೋಧೆ ಔಷಧಿಯೋ ವಿಷವೋ? ಎಂಬ ಸಂದೇಹ ತುಂಬಿದ ಪ್ರಶ್ನೆಯೊಂದಿಗೆ ಮುಕ್ತಾಯವಾಗಿದೆ. ಭಗವದ್ಗೀತೆಯ ಸಂದೇಶವೇನು ಎಂಬ ಪ್ರಶ್ನೆಗೆ ನಿರ್ದಿಷ್ಟ ಉತ್ತರ ದೊರಕಿಲ್ಲ ಎನ್ನುತ್ತ ಅನೇಕ ಮಹನೀಯರ ವ್ಯಾಖ್ಯಾನಗಳನ್ನು ಉದಾಹರಿಸಿದ್ದಾರೆ. ಈ ಸಂದರ್ಭದಲ್ಲಿ 'ಯೋಗಿಯ ಆತ್ಮಕಥೆ'ಯ ಲೇಖಕರೂ, ಸ್ವತಃ ಒಬ್ಬ ದೊಡ್ಡ ಯೋಗಿಯೂ ಆಗ ಶ್ರೀ ಶ್ರೀ ಪರಮಹಂಸ ಯೋಗಾನಂದರ ಕೃತಿಯಾದ 'ಗಾಡ್ ಟಾಕ್ಸ್ ವಿತ್ ಅರ್ಜುನ – ದಿ ಭಗವದ್ಗೀತ – ದಿ ರಾಯಲ್ ಸೈನ್ಸ್ ಆಫ್ ಗಾಡ್ ರಿಯಲೈಸೇಶನ್ (೨ ಸಂಪುಟಗಳಲ್ಲಿ) ಎಂಬ ಒಂದು ವಿಶಿಷ್ಟ ವ್ಯಾಖ್ಯಾನದ ಕೃತಿಯ ಕಡೆಗೆ ಲೇಖಕರ ಗಮನ ಸೆಳೆಯಲು ಇಚ್ಛಿಸುತ್ತೇನೆ.

*ಬೆಂಗಳೂರು* **ಬಿ. ಎಸ್. ಸರೋಜ**




### ಅಕ್ಷರಕ್ಕೆ ಅಪರಿಮಿತ ಶಕ್ತಿಯಿದೆ

✉ ಹೊಸತು ಜನವರಿ ೨೦೧೫ರ ವಿಶೇಷ ಸಂಚಿಕೆಯಲ್ಲಿ ಎಂ. ಜೆ. ರಾಜೀವ ಗೌಡರ 'ಮೌನ ಹೋರಾಟ' ಕಥೆ ಮನ ಮಿಡಿಯುತ್ತದೆ. ಅಷ್ಟೇ ಅಲ್ಲ 'ಅಕ್ಷರಕ್ಕೆ ಅಪರಿಮಿತ ಶಕ್ತಿಯಿದೆ' ಎಂಬ ಸಂದೇಶವನ್ನೂ ಸಾರುತ್ತಿದೆ. ಈ ಕಥೆ ಕೀನ್ಯಾದ ಸ್ವಾತಂತ್ರ್ಯ ಹೋರಾಟದ ಕಥೆಯಲ್ಲ. ಇದು ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಒಬ್ಬ ವ್ಯಕ್ತಿಯ ಕಥೆ. 'ಮೌಮೌ' ಬಂಡುಕೋರನೆಂದು ಬ್ರಿಟಿಷರಿಂದ ಕರೆಸಿಕೊಂಡು ಆ ಕಾರಣಕ್ಕಾಗಿ ನನ್ನ ಕಣ್ಣೆದುರೇ ಹೆಂಡತಿ–ಮಕ್ಕಳು ಬರ್ಬರವಾಗಿ ಹತ್ಯೆಯಾಗುವುದನ್ನು ಕಂಡು ಘಾಸಿಗೊಂಡ 'ಮರುಗೆ' ಎಂಬ ವ್ಯಕ್ತಿ ತನ್ನ ಎಂಬತ್ತೊರನೇ ವಯಸ್ಸಿನಲ್ಲಿ ಅಕ್ಷರ ಕಲಿಯಲು ಹೊರಟ ಕಥೆಯಿದು. ದೇಶವನ್ನು ದಾಸ್ಯದಿಂದ ಬಿಡಿಸಿದ ಎಷ್ಟೋ ವರ್ಷಗಳ ನಂತರ ತನ್ನ ದಾಸ್ಯವನ್ನು ಕಳೆದುಕೊಳ್ಳಲು ಎರಡನೇ ಬಾರಿ ತನ್ನವರ ವಿರುದ್ಧವೇ ಮೌನವಾಗಿ ಹೋರಾಡಿದ ಕಥೆಯಿದು.

ಹೊಸ ಸರ್ಕಾರ ಉಚಿತ ಶಿಕ್ಷಣ ನೀಡುವುದು ಎಂಬ ಸುದ್ದಿಯನ್ನು ಕೇಳಿ 'ಮರುಗೆ' ಶಾಲೆಗೆ ಹೋದದ್ದು, ಜೇನ್ ಎಂಬ ಮುಖ್ಯ ಶಿಕ್ಷಕಿ ಆತನಿಗೆ ಅವಕಾಶ ಕಲ್ಪಿಸಿದ್ದು, ಊರಿನ ಸಂಗಾತಿಗಳೇ ಗಲಾಟೆ ಎಬ್ಬಿಸಿ ಜೇನ್‌ಳನ್ನು ವರ್ಗಾಯಿಸುವಂತೆ ಮಾಡಿದ್ದು, ಮಕ್ಕಳು ಪ್ರತಿಭಟಿಸಿದ್ದು, ರಾಜಧಾನಿ ನೈರೋಬಿಗೆ ಹೋದ 'ಮರುಗೆ' ಜೇನ್‌ಳನ್ನು ಅಲ್ಲೇ ಉಳಿಯುವಂತೆ ಮಾಡಿಸಿದ್ದು, ಈ ಮಧ್ಯೆ ಎನ್.ಜಿ.ಓ.ಗಳು ಈ ಶಾಲೆಗೆ ಅಪಾರವಾಗಿ ಅಂತರರಾಷ್ಟ್ರೀಯ ದೇಣಿಗೆ ಬರುತ್ತದೆ. ಅದರಲ್ಲಿ ನಮಗೂ ಪಾಲು ಬೇಕೆಂದು ಒತ್ತಾಯಿಸುವುದು, ರಾಜಕಾರಣಿಗಳ, ಲಂಚಕೋರರ ಉಪಟಳ, ಇದೆಲ್ಲವನ್ನು ಕಂಡು ಈ ಭಾಗ್ಯಕ್ಕೆ ಸ್ವಾತಂತ್ರ್ಯ ಬಂತೇ ಎಂದು ಮರುಗೆ ದೇಶದ ಬಗ್ಗೆ ಖಿನ್ನನಾಗುವುದು... ಇತ್ಯಾದಿ ಸಂಗತಿಗಳಿಂದ ಇಡಿ ಕಿರಿದಿರುವ ಕೀನ್ಯಾದ ಈ ಕಥೆ ಭಾರತವೂ ಸೇರಿದಂತೆ ಎಲ್ಲಾ ವಸಾಹತು ಆಳ್ವಿಕೆಗೆ ಒಳಪಟ್ಟ ದೇಶಗಳ ಇಂದಿನ ಕಥೆಯೇ ಆಗಿದೆ. ಮೌನ ಹೋರಾಟ ಕಥೆಯನ್ನು ಓದುತ್ತಿದ್ದರೆ ಕುವೆಂಪು ಅವರ 'ರೈತನ ದೃಷ್ಟಿ' ಎಂಬ ಕವನ ನೆನಪಾಗುತ್ತದೆ. 'ಕತ್ತಿ ಪರದೇಶಿಯಾದರೆ ಮಾತ್ರ ನೋವೆ ? ನಮ್ಮವರೆ ಹದ ಹಾಕಿ ತಿವಿದರದು ಹೂವೆ ?' ೯೦ಳಿಗಳಲ್ಲಿ ಬರೆದ ಈ ಕವನದ ದಾರ್ಶನಿಕ ದೃಷ್ಟಿಯ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ. ರಾಜೀವ್ ಅವರಿಗೆ ಧನ್ಯವಾದಗಳು ಸಲ್ಲಬೇಕು.

*ಬೆಂಗಳೂರು* **ಪ್ರೊ ॥ ಶಿವರಾಮಯ್ಯ**

✉ 'ಹೊಸತು' ವಿಶೇಷ ಸಂಚಿಕೆ ಸೊಗಸಾಗಿ ಬಂದಿದೆ. ಲೇಖನಗಳು ಮೌಲಿಕವಾಗಿದ್ದು ಅದರಲ್ಲಿ ಕೆಲವು ವಿಚಾರಪೂರ್ಣವಾಗಿದೆ. ಡಾ॥ ಜಿ. ರಾಮಕೃಷ್ಣ ಅವರ ಧಾರಾವಾಹಿ ಲೇಖನ – 'ಋಗ್ವೇದ ಪ್ರವೇಶಿಕೆ' ವಿಶ್ಲೇಷಕವಾಗಿದೆ; ಶ್ರೀ ಎಸ್. ಆರ್. ಹಿರೇಮಠರ ಸಂದರ್ಶನ, ನ್ಯಾಯಮೂರ್ತಿ ಶ್ರೀ ವಿ. ಆರ್. ಕೃಷ್ಣ ಅಯ್ಯರ್ ಬಗ್ಗೆ ಲೇಖನ, ಸಮುದಾಯದ ಪ್ರಬಲ ಮಾಧ್ಯಮವಾಗಿರುವ 'ರೇಡಿಯೋ' ಮೇಲಿನ ಬರಹ, ಮಾಹಿತಿಪೂರ್ಣವಾಗಿರುವ 'ವೇದ ಗಣಿತ'ದ ಮೇಲಿರುವ ವಿದ್ವತ್ಪೂರ್ಣ ಲೇಖನ, ಹೆಣ್ಣುಮಕ್ಕಳ ವಿದ್ಯಾಭ್ಯಾಸ ಹಾಗೂ ಇತಿಹಾಸ–ಪುರಾಣಗಳ ಬಗ್ಗೆ ಚರ್ಚೆ, ರಾಜಕಾರಣ, ಕೀನ್ಯಾದ ಮರುವಿನ ಮೌನ ಹೋರಾಟ, 'ವಡ್ಡಾರಾಧನೆ'ಯಿಂದ ಆಯ್ದ ಕಥೆ, ಸ್ವಾರಸ್ಯಪೂರ್ಣವಾದ ಚೆ ಗೆವಾರನ 'ಮೋಟಾರ್ ಸೈಕಲ್ ಡೈರಿ', ಸುಮಿತ್ರಾಬಾಯಿಯವರ ಸಂದರ್ಶನ, ಕ. ವೆಂ. ಮೇಲಿನ ಲೇಖನ ಆಪ್ತ, ಶಾಸನಗಳ ಆಧಾರಿತ ಅಶೋಕನ ಪ್ರಸ್ತುತತೆ, ಮರಾಠಿ ಮೂಲದ ಸಾಂಸ್ಕೃತಿಕ ಮರ್ಮದ ಅನುವಾದ, ಮತ್ತು ಡಿ. ಡಿ. ಕೋಸಾಂಬಿ ಅವರ ಲೇಖನದ ಅನುವಾದ, ಕುಂ. ವೀ. ಅವರ ಕಥೆ, ನಾದ ಸಂಪನ್ನತೆಯ ನೇದನೂರಿ ಅವರ ಪರಿಚಯ, ವೈಜ್ಞಾನಿಕ ಲೇಖನಗಳು, 'ಪರಿಸರ' ಕುರಿತ ಓದುಗರ ಅನಿಸಿಕೆಗಳು, ಚುಟುಕ ಹಾಗೂ ಕವಿತೆಗಳು – ಎಷ್ಟೊಂದು ಸಮೃದ್ಧ ಸಂಚಿಕೆ !

*ಬೆಂಗಳೂರು* **ಡಾ॥ ಎಚ್. ಜಿ. ಸೋಮಶೇಖರ ರಾವ್**



# ಭರವಸೆಯ ಬೆಳಕಾದ ನ್ಯಾಯಮೂರ್ತಿ ವರ್ಮಾ ವರದಿ

**ಭಾರತದಲ್ಲಿ ಹೆಣ್ಣಿನ ಮೇಲೆ ನಡೆಯುವ ಅತ್ಯಾಚಾರಕ್ಕೆ ದೀರ್ಘ ಇತಿಹಾಸವೇ ಇರುವುದಾದರೂ ಅದನ್ನು ಕುರಿತ ಚರ್ಚೆ ಮತ್ತು ಅದರ ವಿರುದ್ಧದ ಪ್ರತಿಭಟನೆಗೆ ಸುಮಾರು ಮೂರುವರೆ ದಶಕಗಳ ಚರಿತ್ರೆಯಿದೆ. ಮಥುರಾಳಿಂದ ಆರಂಭವಾಗಿ ರಮಿಜಾಬಿ, ಅನಸೂಯಮ್ಮ , ಶಶಿಕಲಾ, ಭಾಂವ್ರಿದೇವಿ... ನಿರ್ಭಯ. ಹೀಗೆ ಚರಿತ್ರೆಯ ಕಾಲ ಗರ್ಭದಲ್ಲಿ ನೊಂದು, ನರಳಿದ ಹೆಣ್ಣುಗಳು ಹಲವಾರು. ಅವರ ಮೇಲಿನ ದೌರ್ಜನ್ಯವನ್ನು ಪ್ರತಿಭಟಿಸಿದ ಹಲವಾರು ಚಟುವಟಿಕೆಗಳು ಮಹಿಳಾ ಚಳುವಳಿಯ ಹಾದಿಯಲ್ಲಿ ಮಾಸದ ಹೆಜ್ಜೆಗಳಾಗಿವೆ. ಹಾಗೆಯೇ ಪ್ರತಿಭಟನಕಾರರ ಒತ್ತಡಕ್ಕೆ ಮಣಿದು ಸರ್ಕಾರ ಕೈಗೊಂಡ ಕ್ರಮಗಳು ತೀವ್ರ ಚರ್ಚೆಗೆ ಗುರಿಯಾದವು. ಈ ಹಿನ್ನೆಲೆಯಲ್ಲಿ ವಿಶಿಷ್ಟವಾಗಿ ನಿಲ್ಲುವ ನ್ಯಾಯಮೂರ್ತಿ ವರ್ಮಾ ವರದಿಯನ್ನು ಕುರಿತು ಸಮಾಜಶಾಸ್ತ್ರ ಪ್ರಾಧ್ಯಾಪಕಿ ಡಾ॥ ಸುಧಾ ಸೀತಾರಾಮನ್ ಬರೆದ ಈ ಲೇಖನವನ್ನು ಮಹಿಳಾ ದಿನಾಚರಣೆಯ ನೆನಪಿಗೆ ಪ್ರಕಟಿಸುತ್ತಿದ್ದೇವೆ.**

ಡಾ॥ ಸುಧಾ ಸೀತಾರಾಮನ್

೨೦೧೨ರ ಡಿಸೆಂಬರ್ ೧೬ರಂದು ದೆಹಲಿಯಲ್ಲಿ ನಡೆದ ನಿರ್ಭಯಾಳ ಮೇಲಿನ ಅತ್ಯಾಚಾರ ಪ್ರಕರಣದ ನಂತರದ ಅದು ಬೀರಿದ ಪ್ರಭಾವ ಮತ್ತು ಪರಿಣಾಮ ಅಗಾಧವಾದದ್ದು. ಇದು ಸಾಕಷ್ಟು ಕಾನೂನಾತ್ಮಕ ಬದಲಾವಣೆಗಳನ್ನು ತರುವುದರ ಜೊತೆಗೆ ಸಮಾಜದಲ್ಲಿ ನಡೆಯುತ್ತಿರುವ ಲೈಂಗಿಕ ಹಿಂಸೆಯನ್ನು ಕುರಿತಂತೆ ಸಮಾಜದ ಗ್ರಹಿಕೆಯ ದಿಕ್ಕನ್ನು ಬದಲಾಯಿಸಿತು. ಮೊದಲ ಬಾರಿಗೆ ಇಂತಹ ಪ್ರಕರಣವನ್ನು ಇಡೀ ರಾಷ್ಟ್ರ ಒಟ್ಟಿಗೆ ಎದ್ದು ನಿಂತು ಪ್ರತಿಭಟಿಸಿತು. ಲೈಂಗಿಕ ಹಿಂಸೆಯನ್ನು ಕುರಿತಂತೆ ಕಾನೂನು ಮತ್ತು ಪೊಲೀಸ್ ಸುಧಾರಣೆಬೇಕೆಂದು ಕೇಳಿದವರು ಕೇವಲ ಸ್ತ್ರೀವಾದಿಗಳು ಮಾತ್ರವಾಗದೆ, ಅದು ಎಲ್ಲಾ ಪ್ರಜ್ಞಾವಂತರ ಕೋರಿಕೆಯೂ ಆಗಿತ್ತು. ಕಾಮುಕರ ಕ್ರೌರ್ಯಕ್ಕೆ ಬಲಿಯಾದ ಹೆಣ್ಣಿನ ಮೇಲೆ ನಡೆದ ಪಶುತ್ವದ ರೌದ್ರ ನರ್ತನ ದೇಶದ ಉದ್ದಗಲಕ್ಕೂ ಜನಸಾಮಾನ್ಯರು ಮಿಡಿಯುವಂತೆ ಮಾಡಿತು. ನಾಗರಿಕ ಸಮಾಜದ ಜನಸಾಮಾನ್ಯರು ಈ ಸಾಮೂಹಿಕ ಅತ್ಯಾಚಾರವನ್ನು ಪ್ರತಿಭಟಿಸಲು ಬೀದಿಗಿಳಿದರು. ಡಿಸೆಂಬರ್ ೨೧ರಂದು ದೆಹಲಿಯ ರೈಸಿನಾ ಹಾಲ್ ಮತ್ತು ಜಂತರ್ ಮಂತರ್‌ನಲ್ಲಿ ನಡೆದ ಬೃಹತ್ ಪ್ರತಿಭಟನೆಯಲ್ಲಿ ಸಾವಿರಾರು ಮಂದಿ ಪೊಲೀಸರೊಂದಿಗೆ ಹೊಡೆದಾಟಕ್ಕೆ ಇಳಿದರು. ಅಂದಿನ ಮುಖ್ಯಮಂತ್ರಿ ಶೀಲಾ ದೀಕ್ಷಿತ್ ಈ ಘಟನೆಗೆ ತೋರಿದ ನಿರಾಸಕ್ತಿ ಮತ್ತು ಬೇಜವಾಬ್ದಾರಿತನಕ್ಕಾಗಿ ಟೀಕೆಗೆ ಗುರಿಯಾದರು. ದೆಹಲಿಯಲ್ಲಿ ಮಾತ್ರವಲ್ಲದೆ ದೇಶದ ಉದ್ದಗಲಕ್ಕೂ ವಿಶೇಷವಾಗಿ ಕೊಲ್ಕತ್ತಾ, ಮುಂಬೈ ಮತ್ತು ಬೆಂಗಳೂರಿನಲ್ಲಿ ಬೃಹತ್ ಪ್ರತಿಭಟನೆಗಳು ನಡೆದವು. ಈ ಘಟನೆಯನ್ನು ಪ್ರತಿಭಟಿಸಿ ಸಾವಿರಾರು ಮಂದಿ ಆನ್‌ಲೈನ್‌ನಲ್ಲಿ ಸಹಿ ಮಾಡುವುದರ ಮೂಲಕ ಪ್ರತಿಭಟಿಸಿದರು. ಅತ್ಯಾಚಾರಕ್ಕೊಳಗಾದ ನಿರ್ಭಯಾಳ ಸಾವಿನ ನಂತರ ಹಿಂದೆಂದೂ ನಡೆದಿರದಂತಹ ಸಾರ್ವಜನಿಕ ಪ್ರತಿಭಟನೆ ಮೂಡಿಬಂತು. ಹೊಸ ವರ್ಷದ ಆಚರಣೆ ಸ್ವಲ್ಪ ತಣ್ಣಗಾಯಿತು. ಸಾರ್ವಜನಿಕರ ಒತ್ತಡ ಮತ್ತು ಉಕ್ಕಿದ ರೋಷದ ಪರಿಣಾಮವಾಗಿ ಈ ಘಟನೆಯ ನಂತರ ಲೈಂಗಿಕ ದೌರ್ಜನ್ಯದ ಪ್ರಕರಣಗಳು ಮಾಧ್ಯಮದಲ್ಲಿ ಹೆಚ್ಚು, ಹೆಚ್ಚಾಗಿ ಬಿಂಬಿತವಾದವು ಮತ್ತು ಪೊಲೀಸರು ಇವುಗಳಿಗೆ ಪ್ರತಿಸ್ಪಂದಿಸಲಾರಂಭಿಸಿದರು. ಕೆಲವು ರಾಜ್ಯ ಸರ್ಕಾರಗಳು ಇಂತಹ ಹಿಂಸೆಯನ್ನು ಅಡಗಿಸಲು ಮತ್ತು ಕಾನೂನಿನಲ್ಲಿ ಬದಲಾವಣೆ ತರಲು ಕ್ರಿಯಾ ಯೋಜನೆಗಳನ್ನು ರೂಪಿಸಲು ಉದ್ಯುಕ್ತರಾದರು. ಆದರೆ ಈ ಸಂದರ್ಭದಿಂದ ಮೂಡಿಬಂದ ಮಹತ್ವದ ಪರಿಣಾಮ ಜಸ್ಟಿಸ್ ವರ್ಮಾ ಸಮಿತಿಯ ವರದಿ.

ಭಾರತ ಸರ್ಕಾರ ೨೦೧೨ರ ಡಿಸೆಂಬರ್ ೨೨ರಂದು ನ್ಯಾಯಾಧೀಶ ವರ್ಮಾ ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯ ನೇತೃತ್ವವನ್ನು ಭಾರತದ ಮಾಜಿ ಉಚ್ಚ ನ್ಯಾಯಾಧೀಶರಾದ ನ್ಯಾಯವಾದಿ ಜೆ. ಎಸ್. ವರ್ಮಾ ವಹಿಸಿದ್ದರು. ಜಸ್ಟಿಸ್ ಲೈಲ ಸೇಟ್ ಮತ್ತು ಗೋಪಾಲ ಸುಬ್ರಮಣಿಯಂ ಈ ಸಮಿತಿಯ ಸದಸ್ಯರಾಗಿದ್ದರು. ಲೈಂಗಿಕ ಹಿಂಸೆಯನ್ನು ಕುರಿತಂತೆ ಚಾಲ್ತಿಯಲ್ಲಿರುವ ಕ್ರಿಮಿನಲ್ ಕಾನೂನಿಗೆ ತಿದ್ದುಪಡಿಯನ್ನು ಸೂಚಿಸುವ ವರದಿಯನ್ನು ೩೦ ದಿನಗಳೊಳಗೆ ಸಲ್ಲಿಸಲು ಇವರನ್ನು ಕೋರಲಾಯಿತು. ಈ ಮುಂಚೆಯೂ ಲೈಂಗಿಕ ದೌರ್ಜನ್ಯವನ್ನು ಕುರಿತಂತೆ ಕಾನೂನು ರೂಪಿಸಲು ಹಲವಾರು ಸಮಿತಿಗಳು ನೇಮಕವಾಗಿದ್ದರೂ ಈ ಸಮಿತಿ ಅವೆಲ್ಲಕ್ಕಿಂತ ಭಿನ್ನವೂ, ವಿಶಿಷ್ಟವೂ ಆಗಿತ್ತು. ಮೊದಲ ಬಾರಿಗೆ ಇದೊಂದು ಎಲ್ಲರಿಗೂ ತೆರೆದುಕೊಂಡ ಸಮಿತಿಯಾಗಿತ್ತು. ಅದು ಆರಂಭವಾದ ದಿನದಿಂದ

ನಾಗರಿಕ ಸಮಾಜದ ಮನ್ನಣೆಯನ್ನು ಪಡೆಯಿತು. ಖ್ಯಾತ ವಕೀಲರು, ಕಾನೂನು ವೃತ್ತಿಪರರು, ಸರ್ಕಾರೇತರ ಸಂಘಟನೆಗಳು ಮತ್ತು ಮಹಿಳಾ ಗುಂಪುಗಳನ್ನು "ಅವರ ಅಭಿಪ್ರಾಯ, ಜ್ಞಾನ, ತಿಳುವಳಿಕೆ, ಅನುಭವ ಗಳನ್ನು ಹಂಚಿಕೊಂಡು ಕ್ರಿಮಿನಲ್ ಕಾನೂನಿಗೆ ಅಳವಡಿಸಬಹುದಾದ ತಿದ್ದುಪಡಿಗಳನ್ನು ಸೂಚಿಸಲು ಕೋರಲಾಯಿತು. ಶೀಘ್ರ ತನಿಖೆ, ವಿಚಾರಣೆ ಮತ್ತು ಅಪರಾಧಿಗಳಿಗೆ ಹೆಚ್ಚಿನ ಶಿಕ್ಷೆ – ಮುಂತಾದ ವಿಷಯಗಳ ಬಗ್ಗೆ ಸಲಹೆ ಗಳನ್ನು ಸ್ವೀಕರಿಸಲಾಯಿತು." ಇದರ ಪರಿಣಾಮವಾಗಿ ಜನಸಾಮಾನ್ಯರಿಂದ ಮತ್ತು ಮಹಿಳಾ ಸಂಘಟನೆಗಳಿಂದ ೬೦೦೦೦ಕ್ಕೂ ಹೆಚ್ಚು ಇ–ಮೇಲ್‌ಗಳ ಮೂಲಕ ಸಲಹೆಗಳು ಹರಿದುಬಂದವು.



ನ್ಯಾಯಮೂರ್ತಿ ವರ್ಮಾ ಸಮಿತಿಯು ಭಾರತೀಯ ರಾಜಕೀಯ ಇತಿಹಾಸದಲ್ಲಿಯೇ ಒಂದು ಹೊಸ ಹಾದಿಯನ್ನು ಸೃಷ್ಟಿಸಿತು. ಇಲ್ಲಿಯವರೆಗೂ ಸಾಮಾನ್ಯವಾಗಿ ಇಂತಹ ವರದಿಗಳು ಸುಮ್ಮನೆ ಕಣ್ಣೊರೆಸುವ ತಂತ್ರ ವಾಗಿದ್ದವು. "ದೀರ್ಘ ಪರಂಪರೆಯಿರುವ ನ್ಯಾಯಾಂಗ ವ್ಯವಸ್ಥೆಯಾಗಲೀ ಹಾಗೂ ನಮ್ಮ ಸಮಾಜವಾಗಲಿ ಹೆಣ್ಣನ್ನು 'ಲಜ್ಜೆ' ಮತ್ತು 'ಮರ್ಯಾದೆ'ಯ ಚೌಕಟ್ಟಿನಲ್ಲಿಟ್ಟು ನೋಡಿದೆ. ಅತ್ಯಾಚಾರಕ್ಕೆ ಬಲಿಪಶು ವಾದವರಿಗೆ ಸಂಬಂಧಪಟ್ಟಂತೆ 'ಲಜ್ಜೆ' ಮತ್ತು 'ಮರ್ಯಾದೆ'ಗಳ ಪದಸಂಪತ್ತನ್ನು ಪುನರ್ರಚಿಸುವ ಕಾರ್ಯವನ್ನು ಮಾಡಬೇಕಾದ್ದು ಸರ್ಕಾರ ಮತ್ತು ಸಮಾಜದ ಮುಖ್ಯ ಕರ್ತವ್ಯವಾಗಿದೆ. ಇಂಡಿಯನ್ ಪೀನಲ್ ಕೋಡ್‌ನಡಿ ಅತ್ಯಾಚಾರವೆನ್ನುವುದು ಇತರ ಯಾವುದೇ ಅಪರಾಧದಂತೆ. ಅದೊಂದು ಮನುಷ್ಯ ದೇಹದ ಮೇಲೆ ನಡೆಸುವ ಹಲ್ಲೆ. (ವರ್ಮಾ ೮೩)." ಒಟ್ಟಾರೆಯಾಗಿ, ಲೈಂಗಿಕ ಹಲ್ಲೆಗಳ ಕಡಿಮೆ ವರದಿ ಮತ್ತು ಅದನ್ನು ಸುತ್ತುವರಿದಿರುವ ಸಾಮಾಜಿಕ ಕಳಂಕ – ಇವೆರಡೂ 'ಲಜ್ಜೆ–ಮರ್ಯಾದೆ' ಎಂಬ ವಿಷವೃತ್ತದಿಂದ ಹುಟ್ಟುವವು ಎಂಬ ತೀರ್ಮಾನಕ್ಕೆ ಇಲ್ಲಿ ಬರಲಾಗಿದೆ. 'ಲಜ್ಜೆ–ಮರ್ಯಾದೆ' ಎಂಬ ಸೂತ್ರಕ್ಕೆ ಕಟ್ಟುಬೀಳದೆ, ಹೆಣ್ಣಿನ ಲೈಂಗಿಕ ಸ್ವಾಯತ್ತತೆಯನ್ನು ಕೇಂದ್ರೀಕರಿಸಿರುವ ಸಂಕಥನ ವಾಗಿರುವುದು ಈ ವರದಿಯ ದಿಟ್ಟ ನಿಲುವಾಗಿದೆ. ಗಂಡುಮಕ್ಕಳಿಗಾಗಿ ಆಶಿಸುತ್ತಾ ಹೆಣ್ಣು ಭ್ರೂಣಹತ್ಯೆಯಲ್ಲಿ ತೊಡಗುವ ಕೌಟುಂಬಿಕ ಹಿಂಸೆಯ ವಿಸ್ತರಣೆಯೇ ದೊಡ್ಡ ಪ್ರಮಾಣದಲ್ಲಿ ಲೈಂಗಿಕ ಹಿಂಸೆಯಾಗಿ ನಡೆದಾಗ 'ಅತ್ಯಾಚಾರ'ವಾಗಿ ಬಿಡುತ್ತದೆ ಎನ್ನುವ ಒಳನೋಟಗಳು ಈ ವರದಿಯಲ್ಲಿವೆ. ಗುಪ್ತವಾಗಿ ಕಾಡುವುದು, ಕಿರುಕುಳ, ದೈಹಿಕ ಆಕ್ರಮಣ – ಎಲ್ಲವೂ ಮಹಿಳೆಯ ವಿರುದ್ಧ ನಡೆಸುವ ಘೋರ ಅಪರಾಧಗಳಾಗಿವೆ. 'ಅತ್ಯಾಚಾರ'ದ ವ್ಯಾಖ್ಯಾನದೊಳಗೆ ವಿವಾಹದೊಳಗಿನ ಅತ್ಯಾಚಾರ ವನ್ನು ತರುವ ಮೂಲಕ ಪಿತೃಪ್ರಾಧಾನ್ಯತೆಯ ಮೂಲಸತ್ವಕ್ಕೆ ಪೆಟ್ಟು ಕೊಟ್ಟಿದೆ.

ಇದರ ಜೊತೆಗೆ, ಮಹಿಳೆಯ ಮೇಲಿನ ದೌರ್ಜನ್ಯದ ಸಮಗ್ರ ವಿಶ್ಲೇಷಣೆಯಲ್ಲಿ ಲೈಂಗಿಕ ಅಲ್ಪಸಂಖ್ಯಾತರ ಬವಣೆಯನ್ನು ಕುರಿತ ಚರ್ಚೆಯನ್ನು ನ್ಯಾಯಮೂರ್ತಿ ವರ್ಮಾ ಸಮಿತಿ ಪ್ರಸ್ತಾಪಿಸುತ್ತದೆ. ಸ್ವಲಿಂಗಿಗಳು, ಮಹಿಳೆ ಮತ್ತು ಮಕ್ಕಳ ಸಾಗಾಣಿಕೆ, ಮನೆಗೆಲಸದ ಮಹಿಳೆಯರ, ಯುದ್ಧದ ಸನ್ನಿವೇಶದಲ್ಲಿನ ಮಹಿಳೆಯರ ಮತ್ತು ಹಿಂಸಾತ್ಮಕವಾದ ವಿವಾಹ ಸಂಬಂಧದಲ್ಲಿ ಸಿಲುಕಿರುವ ಮಹಿಳೆಯರ ಪರಿಸ್ಥಿತಿಯನ್ನು ಈ ಸಮಿತಿ ಪರಿಗಣಿಸುತ್ತದೆ. ಸರ್ಕಾರ ಮತ್ತು ಕಾನೂನಿನ ಹೊರ ಅಂಚಿನಲ್ಲಿ ಶಸ್ತ್ರಸಜ್ಜಿತ ಸೈನಿಕರು ಲೈಂಗಿಕ ಹಿಂಸೆಯಲ್ಲಿ ತೊಡಗದಿರುವಂತೆ ಅವರನ್ನು ನಿಯಂತ್ರಿಸುವುದು ಸರ್ಕಾರಿ ನೌಕರರಾಗಿರುವ ಸೈನ್ಯದ ಮೇಲಧಿಕಾರಿಯ ಜವಾಬ್ದಾರಿಯಾಗಿರುತ್ತದೆ, ಎಂಬ ಅಂಶವನ್ನು ಈ ವರದಿಯು ತಿಳಿಸುವುದು ಅತ್ಯಂತ ಪ್ರಮುಖ ವಿಷಯವಾಗಿದೆ.

ನ್ಯಾಯಮೂರ್ತಿ ವರ್ಮಾ ಸಮಿತಿಯ ವರದಿಯು ಅಚ್ಚುಕಟ್ಟಾಗಿ ದಾಖಲಾದ ಮತ್ತು ಸಮಗ್ರ ಮಾಹಿತಿಯುಳ್ಳ ದಾಖಲೆಯಾಗಿದೆ. ಏಕೆಂದರೆ, ಸಮಾಜದ ವಿಭಿನ್ನ ಜನ ವರ್ಗಗಳ ಅಭಿಪ್ರಾಯ ಮತ್ತು ಅನುಭವಗಳನ್ನು ಸಂಗ್ರಹಿಸಿ ಅದನ್ನು ಸಂಕಥನದ ಭಾಗವಾಗಿಸಿದೆ. ಮಹಿಳಾ ಸಂಘ, ಸಂಸ್ಥೆಗಳು, ಕಾನೂನು ವೃತ್ತಿಪರರು ಮತ್ತು ನ್ಯಾಯಮೂರ್ತಿಗಳ ಅಭಿಪ್ರಾಯಕ್ಕೆ ಇಲ್ಲಿ ಪ್ರಾಶಸ್ತ್ಯ ಕೊಟ್ಟಿರುವುದರಿಂದಾಗಿ ಇದೊಂದು ಸಮಗ್ರ ದಾಖಲೆಯಾಗಿದೆ. "ಲೈಂಗಿಕ ಅಲ್ಪಸಂಖ್ಯಾತ ಮಹಿಳೆಯರ ಮತ್ತು ಪುರುಷರ, ಸಂಘರ್ಷದ ವಲಯಗಳಲ್ಲಿರುವ ಮಹಿಳೆಯರ, ಮಹಿಳಾ ಖೈದಿಗಳ, ಮಹಿಳೆ ಮತ್ತು ಮಕ್ಕಳ ಸಾಗಾಣಿಕೆಗೆ ತುತ್ತಾದವರ, ವೈಯಕ್ತಿಕ ದೂರುದಾರರ, ಶೈಕ್ಷಣಿಕ ತಜ್ಞರ ಮತ್ತು ಸಾಮಾಜಿಕ ಕಾರ್ಯಕರ್ತರ ಮಾತುಗಳನ್ನು ಆಲಿಸಿದ ಘನತೆ ಈ ವರದಿಯ ಹಿಂದಿದೆ." (ಕಾಪುರ್ ೨೦೧೩).

ಈ ಘಟನೆಯ ನಂತರ ಪತ್ರಿಕೆಯ ಮೂರನೆಯ ಪುಟದಲ್ಲಿ ಕಾಣಿಸಿಕೊಳ್ಳುತ್ತಿದ್ದ ಲೈಂಗಿಕ ಹಿಂಸೆಯ ವರದಿಗಳು ದಿಢೀರನೆ ಮೊದಲನೆಯ ಪುಟದ ಸುದ್ದಿಗಳಾದವು. ದಿಢೀರನೆ ಲೈಂಗಿಕ ಹಲ್ಲೆಗಳ ಸಂಖ್ಯೆ ಹೆಚ್ಚಿತೇನೋ ಎಂಬ ಭ್ರಮೆ ಹುಟ್ಟಿಸಿದವು. ಈ

## ಕಣ್ಮರೆಯಾದ ಆದರಣೀಯ ವ್ಯಕ್ತಿತ್ವದ ಗೋವಿಂದ ಪಾನ್ಸರೆ



ವೃತ್ತಿಯಿಂದ ವಕೀಲರಾಗಿ, ೧೯೫೨ರಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿ, ಅನಂತರ ೧೦ ವರ್ಷಗಳ ಕಾಲ ಮಹಾರಾಷ್ಟ್ರದಲ್ಲಿ ಪಕ್ಷದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದ ಗೋವಿಂದ ಪಾನ್ಸರೆ ದಂಪತಿ ಕೆಲವು ದಿನಗಳ ಹಿಂದೆ ಕೊಲ್ಹಾಪುರದಲ್ಲಿ ಬೆಳಗಿನಜಾವ ವಾಯುವಿಹಾರದಲ್ಲಿ ತೊಡಗಿದ್ದಾಗ, ದುಷ್ಕರ್ಮಿಗಳು ಗುಂಡಿನ ದಾಳಿ ನಡೆಸಿದ ಪರಿಣಾಮವಾಗಿ ಇಬ್ಬರೂ ತೀವ್ರವಾಗಿ ಗಾಯಗೊಂಡಿದ್ದರು. ಖ್ಯಾತ ಜನಪರ ಹೋರಾಟಗಾರರೂ ಉತ್ತಮ ಸಾಹಿತಿಯೂ ಆಗಿದ್ದ ಪಾನ್ಸರೆ ತಾವು ಅನುಭವಿಸಿದ ಆಘಾತದಿಂದ ಚೇತರಿಸಿಕೊಳ್ಳಲಾಗದೆ ೨೦-೨-೨೦೧೫ರಂದು ಮುಂಬಯಿಯ ಆಸ್ಪತ್ರೆಯೊಂದರಲ್ಲಿ ಸಾವನ್ನಪ್ಪಿದ್ದಾರೆ. ಇದು ಎಲ್ಲ ಪ್ರಗತಿಪರರಿಗೂ ಅತ್ಯಂತ ದುಃಖಕರ ಸಂಗತಿ. ದಿವಂಗತರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ನಮನಗಳು.

ಸಂದರ್ಭದಲ್ಲಿ ಕೆಲವು ಮಹಿಳಾ ಗುಂಪುಗಳು ದಲಿತರ, ಅಲ್ಪಸಂಖ್ಯಾತರ ಮತ್ತು ಬಡ ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯದ ವರದಿಗಳನ್ನು ಹೇಗೆ ಪಕ್ಕಕ್ಕೆ ಸರಿಸಿ ಹಾಕಲಾಗಿದೆಯೆಂದು ಭಿನ್ನರಾಗ ತೆಗೆದರು. ಈ ಸಂದರ್ಭದಲ್ಲಿ ಮರೆತುಹೋದ ಮತ್ತು ಮೌನದ ಆಳದಲ್ಲಿ ಹೂತುಹೋದ ಅತ್ಯಾಚಾರ ಪ್ರಕರಣಗಳನ್ನು ಹೊರತೆಗೆಯಲಾಯಿತು. ಅತ್ಯಾಚಾರವನ್ನು ನಾಗರಿಕ ಸಮಾಜದ ಮಾನವ ಸ್ವಭಾವಕ್ಕೆ ಹೊರತಾದ ಪಥಭ್ರಷ್ಟ ನಡವಳಿಕೆಯಾಗಿ ನೋಡಲಿಲ್ಲ. ಬದಲಿಗೆ, ಸಮಾಜದಲ್ಲಿ ವ್ಯಾಪಕವಾಗಿ ನೆಲೆಸಿರುವ ಮಹಿಳಾ ವಿರೋಧಿ ಮನಃಸ್ಥಿತಿ ಮತ್ತು ಆಚರಣೆಗಳ ಒಟ್ಟು ಸ್ವರೂಪವಾಗಿ ನೋಡಲಾಯಿತು. ಊರ್ಮಿಳಾ ಭೂತಾಲಿಯಾ ಹೇಳುವಂತೆ, "ಅತ್ಯಾಚಾರವೆನ್ನುವುದು ನಿರ್ವಾತದಲ್ಲಿ ಸಂಭವಿಸುವಂತಹುದಲ್ಲ. ಅದು ಸಮಾಜದಲ್ಲಿ ಹಾಸುಹೊಕ್ಕಾಗಿರುವ, ಪ್ರತಿದಿನವೂ ಬಲಿಪಶುಗಳಾಗುತ್ತಿರುವ ಹೆಣ್ಣುಗಳ ಮೇಲೆ ನಿರಂತರವಾಗಿ ನಡೆಯುತ್ತಿರುವ ಕ್ರೌರ್ಯವೇ ಆಗಿದೆ" (ಹಿಂದು ೨೦೧೩). ಹಿಂಸೆಯ ಮೂಲಕವೇ ಪುರುಷತ್ವದ ಅಭಿವ್ಯಕ್ತಿಯೆಂದುಕೊಂಡ ಮೌಲ್ಯವ್ಯವಸ್ಥೆಗೆ ಅಂತ್ಯ ಹಾಡಲು ಶಿಕ್ಷಣದ ಪಾತ್ರಕ್ಕೂ ಮತ್ತು ಸಮಗ್ರ ಸಾಮಾಜಿಕ ಮೌಲ್ಯವ್ಯವಸ್ಥೆಗೂ ಸಂಬಂಧವಿದೆಯೆಂಬ ಅಂಶವನ್ನು ಮಹಿಳಾ ಕಾರ್ಯಕರ್ತರು ಮತ್ತು ಶಿಕ್ಷಣತಜ್ಞರು ಒಟ್ಟಾರೆಯಾಗಿ ಅಭಿಪ್ರಾಯಪಟ್ಟರು.

ಹಾಗೆಯೇ ರತ್ನ ಕಪೂರ್ ಗುರುತಿಸುವಂತೆ ರಾಷ್ಟ್ರೀಯ ಮಹಿಳಾ ಆಯೋಗ, ರಾಜಕಾರಣಿಗಳು ಮತ್ತು ಕೆಲವೊಮ್ಮೆ ನ್ಯಾಯಮೂರ್ತಿಗಳೂ ಕೂಡ ಕ್ರೌರ್ಯದ ವಿರುದ್ಧ ದನಿಯೆತ್ತುವಾಗ ರಕ್ಷಣೆಯ ಶಬ್ದಗಳನ್ನೇ ಮಾತನಾಡುತ್ತಾರೆ. ರಕ್ಷಣೆ ಮತ್ತು ಭದ್ರತೆಗಳು ಕ್ರೌರ್ಯಕ್ಕೆ ಪರಿಹಾರವಲ್ಲವೆಂಬುದನ್ನು ಸ್ತ್ರೀವಾದಿಗಳು ಮನಗಂಡಿದ್ದಾರೆ. ಈ ತಿಳುವಳಿಕೆಯು ವರ್ಮಾ ಸಮಿತಿಯಲ್ಲಿ ಕೂಡ ಪ್ರತಿಬಿಂಬಿತವಾಗಿದೆ. ಮಾಧ್ಯಮದವರು ಮತ್ತು ಸ್ತ್ರೀವಾದಿಗಳಲ್ಲಿ ಕೆಲವರು ದೆಹಲಿಯ ಪ್ರಕರಣದ ಸಂಬಂಧವಾಗಿ ಕೆಲವು ಅಹಿತಕರ ಪ್ರಶ್ನೆಗಳನ್ನು ಎತ್ತಿದ್ದುಂಟು. ದೆಹಲಿಯಲ್ಲಿ ಅತ್ಯಾಚಾರಕ್ಕೆ ಗುರಿಯಾದ ಹುಡುಗಿ ದಲಿತಳಾಗಿದ್ದರೆ, ಮುಸ್ಲಿಂಳಾಗಿದ್ದರೆ ಅಥವಾ ಕಾಶ್ಮೀರಿ ಮಹಿಳೆಯಾಗಿದ್ದರೆ, ಇನ್ನೂ ಹೆಚ್ಚೆಂದರೆ ಲೈಂಗಿಕ ಕಾರ್ಯಕರ್ತೆ ಯಾಗಿದ್ದರೆ, ಆಗ ಈ ಸಾರ್ವತ್ರಿಕ ಪ್ರತಿಭಟನೆಯ ಆವೇಶ ಇಷ್ಟು ಹೆಚ್ಚಿನ ಮಟ್ಟದಲ್ಲಿರುತ್ತಿತ್ತೇ ? ಎಂಬ ಪ್ರಶ್ನೆಗಳನ್ನು ಎತ್ತಿದ್ದುಂಟು. ದೆಹಲಿಯಲ್ಲಿ ಅತ್ಯಾಚಾರ ಕ್ಕೊಳಗಾದ ಹೆಣ್ಣುಮಗಳು ಮಧ್ಯಮವರ್ಗಕ್ಕೆ ಸೇರಿದ ವಿದ್ಯಾವಂತ ಹಿಂದೂ ಮಹಿಳೆಯಾದ್ದರಿಂದ ಜನಸಾಮಾನ್ಯರಿಗೆ ಅವಳಲ್ಲಿ ತಮ್ಮನ್ನು ಗುರುತಿಸಿಕೊಳ್ಳುವುದು ಸಾಧ್ಯವಾಯಿತು. 'ಅವಳು ತಮ್ಮಂತೆ ಒಬ್ಬಳು; ಅವಳಿಗಾದದ್ದು ತಮಗಾಗಬಾರ ದೆಂದೇನಿಲ್ಲ' ಎಂದು ಸಮಸ್ಯೆಯೊಂದಿಗೆ ಸಾಮಾನ್ಯ ಮಹಿಳೆಯರು ತಮ್ಮನ್ನು ಗುರುತಿಸಿಕೊಂಡರು. ಆಗ ನಡೆದ ಪ್ರತಿಭಟನೆಗಳು ಸಮಾಜದ ಅಂತಃಸಾಕ್ಷಿಯನ್ನು ಬಡಿದೆಬ್ಬಿಸಿದ್ದು, ನಿಜ. ಆದ್ದರಿಂದ ಈ ಪ್ರತಿಭಟನೆ ಆಯ್ಕೆಮಾಡಿಕೊಂಡು ನಡೆದದ್ದು ಎಂದು ಹೇಳಬರುವುದಿಲ್ಲ. ಸಾರ್ವಜನಿಕರು ಎಲ್ಲ ಮಹಿಳೆಯರಿಗಾಗಿ ಧ್ವನಿಯೆತ್ತಿದರು. ವಾಸ್ತವದಲ್ಲಿ ವರ್ಗ, ಜಾತಿ, ಪ್ರದೇಶ ಮತ್ತು ಧರ್ಮವನ್ನು ಪರಿಗಣಿಸದೆ ಎಲ್ಲ ಮಹಿಳೆಯರ ಮೇಲಿನ ದೌರ್ಜನ್ಯದ ವಿರುದ್ಧವೂ ಸಾರ್ವಜನಿಕರು ತಮ್ಮ ಪ್ರತಿಭಟನೆಯ ಸೊಲ್ಲೆತ್ತುವಂತಾಗಬೇಕು. ದೆಹಲಿ ಅತ್ಯಾಚಾರ ಪ್ರಕರಣದ ನಂತರದ ಸಂದರ್ಭದಲ್ಲಿ ಲೈಂಗಿಕ ಹಿಂಸೆಗೆ ಸಂಬಂಧಿಸಿದಂತೆ ಮಾಧ್ಯಮಗಳು ಸಾಕಷ್ಟು ಪ್ರಚಾರವನ್ನು ಕೊಡುತ್ತಿದೆಯಾದರೂ ಅದು ಕೂಡ ಆಯ್ದ ಘಟನೆಗಳಿಗೆ ಅನ್ವಯಿಸುತ್ತದೆ. ಅತ್ಯಂತ ಘೋರ ಸ್ವರೂಪದ, ರಂಜಕವಾದ ಮತ್ತು ಮುಖ್ಯವಾಗಿ ಅಪರಿಚಿತರು ನಡೆಸಿದ ಅತ್ಯಾಚಾರಗಳತ್ತಲೇ ಮಾಧ್ಯಮಗಳು ಕೇಂದ್ರೀಕರಿಸಿದಂತಿದೆ.

ನ್ಯಾಯಮೂರ್ತಿ ವರ್ಮಾ ಸಮಿತಿಯ ವರದಿಯನ್ನು ಸಾರ್ವಜನಿಕರು ಮತ್ತು ಮಹಿಳಾ ಸಂಘಗಳು ಮೆಚ್ಚಿಕೊಂಡವಾದರೂ ಅದು ಪಾರ್ಲಿಮೆಂಟಿನಲ್ಲಿ ಚರ್ಚೆಗೆ ಮಂಡಿತವಾದಾಗ, ಸರ್ಕಾರವೇ ಅದರ ಕೆಲವು ಶಿಫಾರಸ್ಸುಗಳನ್ನು ತೆಗೆದುಹಾಕಿತು. "ಲೈಂಗಿಕ ಅಪರಾಧಗಳನ್ನು ಎಸಗಿದವರು ಚುನಾವಣೆಗೆ ಸ್ಪರ್ಧಿಸಬಾರದು ಎಂಬುದನ್ನು ಚುನಾವಣಾ ನೀತಿಯನ್ನಾಗಿ ಮಾಡಲು ಹಿಂದೆಗೆಯಲಾಯಿತು. ಪೊಲೀಸರ ಸುಧಾರಣೆ ಮತ್ತು ಅವರನ್ನು ಬಾಧ್ಯಸ್ಥರನ್ನಾಗಿಸುವುದು, ಲೈಂಗಿಕ ಶಿಕ್ಷಣ ಮತ್ತು ಶಸ್ತ್ರಾಸ್ತ್ರ ಸೇನಾಪಡೆಗಳಲ್ಲಿ ಕೆಳಗಿನ ಹಂತದ ಸೈನಿಕರು ನಡೆಸುವ ಲೈಂಗಿಕ ಹಿಂಸೆಗೆ ಅವರ ಅಧಿಕಾರಿಯನ್ನು ಹೊಣೆಯಾಗಿಸುವುದು, ಮುನ್ನೆಚ್ಚರಿಕಾ ಕ್ರಮಗಳು ಮತ್ತು ಬಹುಮುಖ್ಯವಾಗಿ 'ಮಹಿಳಾ ಹಕ್ಕುಗಳ ಮಸೂದೆ' – ಇವುಗಳನ್ನು ಒಪ್ಪಿಕೊಳ್ಳಲು ಸರ್ಕಾರ ಹಿಂದೇಟು ಹಾಕಿದೆ (ಕಾಪುರ್ ೨೦೧೩). ಅದೇನೇ ಇರಲಿ, ಸರ್ಕಾರ ನೇಮಿಸಿದ ಅಧಿಕೃತ ಸಮಿತಿಯೊಂದು ಪಿತೃಪ್ರಧಾನ ಸಮಾಜದ ಬೇರುಗಳನ್ನು ಅಲ್ಲಾಡಿಸುವಂತಹ ಸ್ತ್ರೀಪರವಾದ ವರದಿಯೊಂದನ್ನು ದೇಶಕ್ಕೆ ಕೊಡುವಲ್ಲಿ ಶಕ್ತವಾಯಿತೆಂಬ ಅಂಶವೇ ಬದುಕಿನ ಆಶಾಕಿರಣವಾಗಿದೆ.

**ಡಾ॥ ಸುಧಾ ಸೀತಾರಾಮನ್**
ಪ್ರಾಧ್ಯಾಪಕರು, ಪಾಂಡಿಚೆರಿ ವಿಶ್ವವಿದ್ಯಾಲಯ
ಪಾಂಡಿಚೆರಿ

## ಸಾದರ ಸ್ವೀಕಾರ

**ಹುಡುಕಾಟ** (ಕವನ ಸಂಕಲನ) *ಡಾ॥ ಕೆ. ಬಿ. ಪವಾರ*
***ಪುಟ : xiv + ೯೦ = ೧೦೪ ಬೆಲೆ : ರೂ. ೭೦***
**ರಚನ ಪ್ರಕಾಶನ,** ನಂ. ೬೯೧/೫, ೨೫/೭ನೇ ಕ್ರಾಸ್, ಹೆಬ್ಬಾಳ್ ೨ನೇ ಹಂತ, ಮೈಸೂರು – ೧೭

**ಚಮ್ಮಾವುಗೆ : ಅನುಸಂಧಾನ** (ಕಥಾ ಸಂಕಲನದ ವಿಮರ್ಶಾ ಬರಹಗಳು) *ಸಂಪಾದಕರು : ಡಾ॥ ಶ್ರೀಶೈಲ ನಾಗರಾಳ, ಡಾ॥ ಎಂ. ಬಿ. ಕಟ್ಟಿ*
***ಪುಟ : xiv+೧೨೪ = ೧೪೦ ಬೆಲೆ : ರೂ. ೧೦೦***
**ಸಿರಿಗಿರಿ ಪ್ರಕಾಶನ,** ಗಾಜಿಪುರ, ಕಲಬುರಗಿ–೫೮೫೧೦೬

**ಸಂಪಿಗೆ ತಾಯವ್ವ** (ಕಥಾ ಸಂಕಲನ)
ಎಚ್. ಕಮಲಾ ಬಡ್ಡಿಹಳ್ಳಿ
***ಪುಟ : ೧೧೨ ಬೆಲೆ : ರೂ. ೮೦***

**ಏನೋ ಮಾಡಲು ಹೋಗಿ ಮತ್ತೇನೋ...!**
(ವಿಡಂಬನಾತ್ಮಕ ಲೇಖನಗಳು) ಬ್ಯಾಡನೂರು ನಾಗಭೂಷಣ
***ಪುಟ : ೧೨೦ ಬೆಲೆ : ರೂ. ೮೦***

**ಬದುಕ ದಿಕ್ಕು ಬದಲಿಸಿದ ಆಸ್ಟಿಯೋ ಸರ್ಕೋಮಾ... ವಿಧಿಯ ಕೈಯೊಳಗಾಡೋ ಗೊಂಬೆಗಳು ನಾವು**
*ಶ್ರುತಿ ಬಿ. ಎಸ್*
***ಪುಟ : ೧೨೦ ಬೆಲೆ : ರೂ. ೮೦***

**ಬೆಳದಿಂಗಳ ಹೈಕುಗಳು** (234 ಹೈಕುಗಳ ಸಂಕಲನ)
*ಡಾ॥ ಕೆ. ಬಿ. ರಂಗಸ್ವಾಮಿ*
***ಪುಟ : ೬೮ ಬೆಲೆ : ರೂ. ೫೦***

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಗೋಮಿನಿ ಪ್ರಕಾಶನ,** ಶ್ರೀ ವೀರಭದ್ರ ಸ್ವಾಮಿ ನಿಲಯ, ೧ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ವಿಶ್ವಣ್ಣ ಲೇಔಟ್, ಶಾಂತಿನಗರ, ತುಮಕೂರು – ೫೭೨ ೧೦೫

**ನನ್ನ ಶಬ್ದ ನಿನ್ನಲಿ ಬಂದು** (ಕವಿತೆಗಳು)
*ಕೆ. ಪಿ. ಮೃತ್ಯುಂಜಯ*
***ಪುಟ : xiv + ೯೬ ಬೆಲೆ : ರೂ. ೧೦೦***
**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಹಡಪದ ಶರಣದ ವಚನಗಳಲ್ಲಿ ವೈಚಾರಿಕತೆ**
*ಡಾ॥ ಬಸವರಾಜ ಸಬರದ*
***ಪುಟ : viii + ೪೮ = ೫೬ ಬೆಲೆ : ರೂ. ೪೦***
**ಬಸವ ಧರ್ಮ ಪ್ರಸಾರ ಸಂಸ್ಥೆ,** ಹಿರೇಮಠ ಸಂಸ್ಥಾನ, ಭಾಲ್ಕಿ, ಬೀದರ ಜಿಲ್ಲೆ

**ಅರಿವಿನ ಹಾಡುಗಳು**
*ಸಂಪಾದನೆ : ರುದ್ರಪ್ಪ ಹನಗವಾಡಿ*
***ಪುಟ : xvi+೧೫೮ ಬೆಲೆ : ರೂ. ೨೩೦***
**ಪ್ರೊ॥ ಬಿ. ಕೃಷ್ಣಪ್ಪ ಟ್ರಸ್ಟ್,** ೨೫, ೩ನೇ ತಿರುವು, ೩ನೇ ವಾರ್ಡ್, ಸಂತೋಷ್ ನಗರ, ೨ನೇ ಹಂತ, ಅಟ್ಟೂರು, ಯಲಹಂಕ, ಬೆಂಗಳೂರು – ೫೬೦ ೦೬೪

**ನಿನ್ನ ಧ್ಯಾನದ ಹಣತೆ** (ಕವಿತೆಗಳು)
ವಾಸುದೇವ ನಾಡಿಗ್
***ಪುಟ : ೮೮ ಬೆಲೆ : ರೂ. ೬೦***
**ಫಲ್ಗುಣಿ ಪುಸ್ತಕ,** ನಂ. ೧೩/೧, ೧ನೇ ದೇವಸ್ಥಾನ ಬೀದಿ, ೯ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

# ಕ್ಷ - ಕಿರಣ

- ಸಾನ್ವಿ ಪಿ.


ಶುದ್ಧ ಕಸವನ್ನು
ಮಾತ್ರ ಹಾಕಿ, ಜಾತಿ, ಧರ್ಮಗಳ
ಕೊಳೆಯನ್ನು ಹಾಕಿ ನನ್ನನ್ನು
ಹೊಲಸು ಮಾಡಬೇಡಿ


ದೆಲ್ಲಿ ಚುನಾವಣೆ
ಅಮ್ಮ ನನ್ನನ್ನು
ಆಡೋಕೆ ಬಿಡಲಿಲ್ಲ
ಓದಿಸಿಬಿಟ್ರು


ಮನೆ ಹುಡುಕಾಟ
ಪಾರ್ಟಿ
ಆಫೀಸ್ ಇಲ್ಲಾ
JD(S)


ಮತದಾರರ
ನಿರೀಕ್ಷೆಗಳು
AAP

# “ನೆರವು” ಪಡೆಯುವ ಮಾನಸಿಕ ವೈಕಲ್ಯ

**“ನೆರವು” ಎಂಬ ಹೆಸರಿನಲ್ಲಿ ನಾವು ಪಡೆಯುವ ಸಾಲವು ಅತೀವ ದೊಡ್ಡ ಹೊರೆ. ಅದನ್ನು ಬೇಕಾಬಿಟ್ಟಿ ಯಾವಾವುದಕ್ಕೋ ತೊಡಗಿಸಿ ಹಾಳುಮಾಡುತ್ತೇವೆ, ತಲೆಯ ಮೇಲೆ ಚಪ್ಪಡಿ ಎಳೆದುಕೊಳ್ಳುತ್ತೇವೆ. ಝಗಮಗಿಸುವ ವಿಮಾನ ನಿಲ್ದಾಣ, ಕನ್ನಡಿಯಂತಿರುವ ೧೬ ಲೇನ್ ರಸ್ತೆ, ಸುತ್ತಮುತ್ತ ಫ್ಲೈ ಓವರ್‌ಗಳು, ಉಪಯೋಗಿಸಬೇಕಾಗದ ಶಸ್ತ್ರಾಸ್ತ್ರಗಳು, ಎಲ್ಲಾ ಯಾವ ಮತ್ತು ಯಾರ ಪುರುಷಾರ್ಥಕ್ಕಾಗಿ ? ನೂರು ಕೋಟಿ ರೂಪಾಯಿಗಳಲ್ಲಿ ಆಗಬಹುದಾದ್ದಕ್ಕೆ ಸಾವಿರಾರು ಕೋಟಿ ರೂಪಾಯಿಗಳ ದುರ್ವ್ಯಯ ಸಮರ್ಥನೀಯವೆ ?**



ಸಾಲವನ್ನು ಪಡೆಯುವುದು ಬೇರೆ, ‘ನೆರವು’ ಬೇರೆ ಎಂಬ ತಿಳಿವಳಿಕೆಯೇ ಇಲ್ಲದಾಗಿದೆ. ಸಾಲವನ್ನು ಹಿಂದಿರುಗಿಸಬೇಕು. ಎಷ್ಟೋ ವೇಳೆ ಅದಕ್ಕೆ ಬಡ್ಡಿಯನ್ನೂ ಪಾವತಿಸಬೇಕು. ಹಾಗಿದ್ದರೆ ಅದನ್ನು ‘ನೆರವು’ ಎಂದೇಕೆನ್ನಬೇಕು ? “ಸಾಲ” ಎಂಬ ಪದವು ಅರುಚಿಕರ ಎಂದೆ ?

ಕಳೆದ ವಾರ ಸ್ನೇಹಿತನೊಬ್ಬ ಬಂದಿದ್ದ. ಆಸಕ್ತಿ ಮೂಡಿಸುವಂತಹ ವ್ಯಕ್ತಿ. ಅವನೊಂದು ಕತೆ ಹೇಳಿದ. ‘ರೋಮಾಂಚನ ಉಂಟುಮಾಡುವಂಥದು’ ಎನ್ನುತ್ತಾರಲ್ಲ, ಅಂತಹ ಕತೆ. ಆಗಲೆ ಹೇಳಿದಂತೆ ಸಾಲವನ್ನು ಬಡ್ಡಿ ಸಮೇತ ಹಿಂದಿರುಗಿಸಬೇಕಾಗುತ್ತದೆಂಬುದು ನಮಗೆಲ್ಲಾ ತಿಳಿದೇ ಇದೆ. “ಅಭಿವೃದ್ಧಿಗಾಗಿ ನೆರವು” ಎಂದು ನಾವು ಪಡೆಯುವುದು ಸಾಲವನ್ನೇ. ಇದರಲ್ಲೇನು ಮಹಾ ಎನ್ನುತ್ತೀರಾ ? ಇದರಲ್ಲಿ ‘ಮಹಾ’ ಏನೆಂದರೆ ‘ನೆರವು’ ಎಂದು ನೀಡಲಾಗುವುದಕ್ಕೆ ಒಳಗಿನ ಮಾರ್ಮಿಕ ಕತೆಗಳಿರುತ್ತವೆ, ಅವು ಎಲ್ಲರಿಗೂ ತಿಳಿಯದು. ಈ ಆಸಕ್ತಿ ಮೂಡಿಸುವ ವ್ಯಕ್ತಿ ಎಂದೆನಲ್ಲ, ಅವನು ನೆರವು ಪಡೆಯಲು ತೆರಳುವ ಸಂಧಾನಕಾರರ ‘ಟೀಂ’ನಲ್ಲಿದ್ದವನು. ಅವನಿಗೆ ನೆರವಿನ ಪ್ರಕ್ರಿಯೆಯ ಒಳ ಮತ್ತು ಹೊರಗು ಎಲ್ಲಾ ಗೊತ್ತು. ಅವನು ಹೇಳಿದ್ದನ್ನೆಲ್ಲಾ ಕೇಳಿಯಾದ ನಂತರ ಅದನ್ನು ಸಾಬೀತುಪಡಿಸುವಂತಹ ಒಂದು ಪುಸ್ತಕವನ್ನೂ ಓದಿದೆ. ಜಾನ್ ಪರ್ಕಿನ್ಸ್ ಎಂಬುವನು ಬರೆದ “ಕನ್‌ಫೆಶನ್ಸ್ ಆಫ್ ಅನ್ ಇಕನಾಮಿಕ್ ಹಿಟ್ ಮ್ಯಾನ್” ಎಂಬುದು ಆ ಪುಸ್ತಕ. ೧೯೭೦ರ ದಶಕದಲ್ಲಿ ಟೆರೆಸಾ ಹೇಟರ್ ಎಂಬಾಕೆ “ಏಡ್ ಆ್ಯಸ್ ಇಂಪೀರಿಯಲಿಸಂ” ಎಂಬ ಪುಸ್ತಕ ಬರೆದು ‘ನೆರವು’ ಎಂಬುದರ ಮೋಸವನ್ನು ಬಿಚ್ಚಿಟ್ಟಿದ್ದಳು. ಆಕೆ ಸ್ವತಃ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಲ್ಲಿ ಅಧಿಕಾರಿಯಾಗಿದ್ದವಳು. ಪರ್ಕಿನ್ಸ್‌ನ ಪುಸ್ತಕ “ಅತಿ ಹೆಚ್ಚು ಮಾರಾಟವಾದ ಪುಸ್ತಕಗಳು” ಎಂಬ ನ್ಯೂಯಾರ್ಕ್ ಪಟ್ಟಿಯಲ್ಲಿ ಸೇರಿದೆ. ಅಮೆರಿಕಾದ ಅತಿ ಪ್ರಸಿದ್ಧ ವಿಶ್ವವಿದ್ಯಾನಿಲಯಗಳಲ್ಲಿ (ಹಾರ್ವರ್ಡ್, ಸ್ಟ್ಯಾನ್‌ಫರ್ಡ್, ಯೇಲ್, ಇತ್ಯಾದಿ) ಅದು ಪಠ್ಯಪುಸ್ತಕ ಸಹ ಆಗಿದೆ.

ಹಿಂದೆ ಅವಿಭಜಿತ ಆಂಧ್ರಪ್ರದೇಶದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಒಂದು ಮಹತ್ವದ ಸಭೆ ಆಯೋಜಿಸಿದ್ದರು. ಎಂತೆಂತಹ ಮಹನೀಯರು ಅದರಲ್ಲಿ ಉಪಸ್ಥಿತರಿದ್ದರು ಗೊತ್ತೆ ? ಅಧ್ಯಕ್ಷ ಕ್ಲಿಂಟನ್, ಬಿಲ್ ಗೇಟ್ಸ್, ಧೀರುಭಾಯಿ ಅಂಬಾನಿ, ಮುಂತಾದ ಹತ್ತಾರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಖ್ಯಾತಿಯವರು. ಸಭೆಯ ಉದ್ದೇಶ “ಆಂಧ್ರಪ್ರದೇಶದ ಅಭಿವೃದ್ಧಿ.” ವಿಶೇಷತಃ ಹೈದರಾಬಾದ್ ಅಭಿವೃದ್ಧಿ. ಬೆಂಗಳೂರಿಗೆ ಸೆಡ್ಡು ಹೊಡೆದು ನಿಲ್ಲಬಲ್ಲಂತಹ ಹೈದರಾಬಾದ್ ಕಟ್ಟಬೇಕೆಂಬ ಆಶಯವಿತ್ತು. ಅಂತರರಾಷ್ಟ್ರೀಯ ಮಿಲನ

ಲೇಖಕ : ಅಜ್ಞೇಯ
ನಿರೂಪಕ : ಜಿ. ರಾಮಕೃಷ್ಣ



ಕೇಂದ್ರವಾಗಬೇಕು ಹೈದರಾಬಾದ್ ಎಂದಿದ್ದರು ನಾಯ್ಡು. ಈ ಸಭೆಯ ತರುವಾಯದಲ್ಲಿ ವಿಶ್ವ ಬ್ಯಾಂಕ್‌ನ ನಿಯೋಗ ಆಗಮಿಸಿತು. ಹೈದರಾಬಾದಿನಲ್ಲಿ ವಾರಗಟ್ಟಲೆ ಅದರ ಸದಸ್ಯರು ಮೊಕ್ಕಾಂ ಹೂಡಿದ್ದರು. ನಗರದಲ್ಲಿ ಮೂಲಸೌಕರ್ಯದ ವೃದ್ಧಿ ಮಾಡುವುದು ಹೇಗೆ ಎಂಬುದರ ಯೋಜನೆಗಳನ್ನು ಸಿದ್ಧಪಡಿಸಲಾರಂಭಿಸಿದರು. ದೊಡ್ಡ ನಗರಕೇಂದ್ರವಾಗಬೇಕು, ಬಂಡವಾಳದ ಹೂಡಿಕೆದಾರರು ಸಾಲುಸಾಲಾಗಿ ನುಗ್ಗಿಬರುವಂತಾಗಬೇಕು, ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವವರು ಓಡಿಬರಬೇಕು. ಪ್ರಪಂಚದ ಎಲ್ಲ ಕಡೆಯಿಂದಲೂ ಇವರೆಲ್ಲಾ ಬರುವಂತಿರಬೇಕು. ಹೊಸ ಉದ್ದಿಮೆಗಳು, ಉನ್ನತಮಟ್ಟದ ವಿದ್ಯಾಸಂಸ್ಥೆಗಳು, ಎಲ್ಲಾ ಬೆಳೆದು ಹೈದರಾಬಾದ್ ಕಂಗೊಳಿಸುವಂತಾಗಬೇಕು. ಅದು ಮಹದಾಶಯ.

ಇದಕ್ಕೆಲ್ಲಾ ಎಷ್ಟು ಹಣ ಬೇಕಾಗಬಹುದು ? ಏನಿಲ್ಲವೆಂದರೂ ೧೦,೦೦೦ ಕೋಟಿ ರೂಪಾಯಿಗಳು ಎಂದು ಅಂದಾಜು ಮಾಡಿದರು. ಅದು ಆ ಕಾಲದ ಮೊತ್ತ. ಈಗ ಅದು ಅದರ ಎರಡರಷ್ಟಾದರೂ ಇದ್ದೀತು. ವಿಶ್ವ ಬ್ಯಾಂಕ್‌ನ ನಿಯೋಗ ಹೇಳಿತು, "ಓಹೋ, ಅದಕ್ಕೇನಂತೆ ! ನಾವು ಅಷ್ಟು ಹಣ ಸಾಲ ಕೊಡುತ್ತೇವೆ. ಬಡ್ಡಿ ಶೇಕಡ ೧೭ ಮಾತ್ರ" ಎಂದು. ಮಾತುಕತೆಯಲ್ಲಿ ಭಾಗವಹಿಸಿದ್ದ ಆಂಧ್ರದ ಪ್ರತಿನಿಧಿಗಳು (ಅವರಲ್ಲಿ ನನ್ನ ಸ್ನೇಹಿತನೂ ಒಬ್ಬ) ಜಗ್ಗಾಟ ಆರಂಭಿಸಿ ಶೇ. ೧೩ಕ್ಕಿಂತ ಜಾಸ್ತಿ ಬಡ್ಡಿ ಸಾಧ್ಯವಿಲ್ಲವೆಂದರು. ಬೇರೆ ಹಲವು ಕಡೆಗಳಿಂದ ಪಡೆದಿರುವ ೪೦,೦೦೦ ಕೋಟಿ ರೂಪಾಯಿಗಳಿಗೆ ಕೊಡಲಾಗುತ್ತಿರುವುದು ಇದೇ ದರವೆಂದು ಪಟ್ಟು ಹಿಡಿದರು. ವಿಶ್ವ ಬ್ಯಾಂಕ್‌ನ ನಿಯೋಗದ ಪ್ರತಿಕ್ರಿಯೆ ಹೀಗಿತ್ತು : "ನೀವು ನಮ್ಮಿಂದ ೨೦,೦೦೦ ಕೋಟಿ ಹಣವನ್ನು 'ನೆರವಾಗಿ' ಪಡೆದರೆ ನೀವು ಹೇಳುವ ಬಡ್ಡಿದರಕ್ಕೆ ನಾವು ಒಪ್ಪುತ್ತೇವೆ." ಇನ್ನೊಂದು ಮಾತು ಸೇರಿಸಿದರು : "ಅದೇ ೪೦,೦೦೦ ಕೋಟಿ 'ನೆರವು' ಪಡೆಯುವುದಾದರೆ ಶೇ. ೯ರ ಬಡ್ಡಿದರಕ್ಕೆ ಅಷ್ಟು ಮೊತ್ತವನ್ನು ನಾವು ಕೊಡಲು ಸಿದ್ಧ." ಹೀಗೆ ಚೌಕಾಶಿ ಬಹಳ ಕಾಲ ನಡೆದು ಕಡೆಗೆ ಆಂಧ್ರ ಸರ್ಕಾರವು ೨೦,೦೦೦ ಕೋಟಿ ರೂಪಾಯಿಗಳ "ನೆರವನ್ನು" ಶೇ. ೭ರ ಬಡ್ಡಿದರಕ್ಕೆ ಪಡೆಯಬಹುದೆಂಬ ನಿರ್ಧಾರವನ್ನು ಪ್ರಕಟಿಸಲಾಯಿತು. ಇದು ಮಾತುಕತೆಯ ವಿವರ. ಆದರೆ ನನ್ನ ಸ್ನೇಹಿತನಿಗೆ ನಂತರ ಈ ಪ್ರಕರಣದ ಅಂತರಂಗದ ಕತೆ ತಿಳಿದುಬಂದಿತು : "ಅಗತ್ಯವಿರುವ" ದೇಶಗಳಿಗೆ ವಿಶ್ವ ಬ್ಯಾಂಕ್ ನಿಯಮಗಳ ಪ್ರಕಾರ ಬೇಕಾದರೆ ಶೇ. – ೧೦ರ ಬಡ್ಡಿದರಕ್ಕೂ "ನೆರವು" ನೀಡಲು ಸಾಧ್ಯ, ಎಂದು. ಅಂದರೆ, ನೀವು ಬಡ್ಡಿ ಕೊಡಲೇಬೇಕಾಗಿಲ್ಲ, ಅವರೇ ನಿಮಗೆ ಶೇ. ೧೦ರಷ್ಟು "ಬಡ್ಡಿಯನ್ನು" ಹಿಂದಿರುಗಿಸುತ್ತಾರೆ ! ಇದು ಹೇಗೆ ಮಾಡಲಾಗುತ್ತದೆ ? ಸಾಲದ ಮೊತ್ತವನ್ನು ಭಾಗಶಃ ಮನ್ನಾ ಮಾಡುವ ಮೂಲಕ. ಹೇಳಿ ಕೇಳಿ, ಈ ವಿಶ್ವ ಬ್ಯಾಂಕ್ ಇರುವುದೇ "ಅಭಿವೃದ್ಧಿ ಹೊಂದುತ್ತಿರುವ" ದೇಶಗಳನ್ನು ಅಮೆರಿಕಾಕ್ಕೆ ಶರಣಾಗಿಸುವುದಕ್ಕೆ ; ಅಂತಹ ಆಕಾಂಕ್ಷೆಯಿಂದ ಅಮೆರಿಕವೇ ಹುಟ್ಟುಹಾಕಿರುವ ಸಂಸ್ಥೆ ಅದು. ಆದ್ದರಿಂದ ಬ್ಯಾಂಕಿನ ನಿಯಮ ಇದು : ಯಾವುದಾದರೂ ದೇಶವು ತನ್ನ "ನೆರವನ್ನು" ಪಡೆಯಲು ಇಚ್ಛಿಸದಿದ್ದರೆ, ಹೇಗಾದರೂ ಬಲವಂತದಿಂದ ಆ ದೇಶವು "ನೆರವು" ಪಡೆಯುವಂತೆ ಮಾಡಬೇಕು. ಮುಂಚೆ ಹೇಳಿದ ಜಾನ್ ಪರ್ಕಿನ್ಸ್ ಇಂಥ ಕುಯುಕ್ತಿಯ ಕೆಲಸದಲ್ಲಿ ವಿಶ್ವ ಬ್ಯಾಂಕ್ ಅಧಿಕಾರಿಯಾಗಿ ಹತ್ತು ವರ್ಷ ಇದ್ದವನು. ಅವನ ಪುಸ್ತಕದ ಒಂದು ಭಾಗ ಹೀಗಿದೆ :

"ಆರ್ಥಿಕ ಹೊಡೆತ ನೀಡಬೇಕಾದ ನನ್ನ ಕೆಲಸಕ್ಕೆ ತರಬೇತಿ ನೀಡಲು ಸುಂದರವಾಗಿದ್ದ ಕ್ಲಾಡಿನ್ ಇದ್ದಳು. ನನ್ನ ಕೆಲಸದಲ್ಲಿ ಎರಡು ಪ್ರಮುಖ ಉದ್ದೇಶಗಳಿದ್ದುವೆಂದು ಅವಳು ತಿಳಿಯಹೇಳಿದಳು. (ಅ) ಭಾರಿ ಪ್ರಮಾಣದ ಅಂತರರಾಷ್ಟ್ರೀಯ ಸಾಲಗಳನ್ನು ಪಡೆಯಲು ಎಲ್ಲ ದೇಶಗಳನ್ನೂ ಪುಸಲಾಯಿಸಬೇಕು, ಸಮರ್ಥಿಸಬೇಕು. ಅದು ವಿಶ್ವ ಬ್ಯಾಂಕ್‌ಗೆ ಮಾತ್ರ ಹಿಂದಿರುಗುವುದಿಲ್ಲ ; ಬೆಕ್ಟೆಲ್, ಹ್ಯಾಲಿ ಬರ್ಟನ್, ಸ್ಟೋನ್ ಅಂಡ್ ವೆಬ್‌ಸ್ಟರ್, ಬ್ರೌನ್ ಅಂಡ್ ರೂಟ್, ಮುಂತಾದ ಕಂಪನಿಗಳಿಗೂ ಹರಿದುಬರುತ್ತದೆ. ಅವರಿಗೆ ಇಂಜಿನಿಯರಿಂಗ್ ಯೋಜನೆಗಳು ಮತ್ತು ನಿರ್ಮಾಣದ ಕಾಂಟ್ರಾಕ್ಟ್‌ಗಳು ಅಗಾಧವಾಗಿ ಹೆಚ್ಚುತ್ತವೆ. (ಆ) ಆಕೆ ಹೇಳಿದಂತೆ, ನನ್ನ ಕೆಲಸ ಸಾಲ ಪಡೆದ ಆ ದೇಶಗಳನ್ನು ಬರಿಗೈ ಮಾಡುವುದು. ಬ್ಯಾಂಕಿಗೆ ಮತ್ತು ಕಂಪನಿಗಳಿಗೆ ಕೊಡಬೇಕಾದ್ದನ್ನು ಕೊಟ್ಟಾದ ಮೇಲೆ ಅವರಲ್ಲಿ ಉಳಿಯುವುದು ಒಂದು ಖಾಲಿ ಒಡಕಲು ಮಡಕೆ, ಅಷ್ಟೆ. ಅಂದರೆ, ಆ ದೇಶಗಳೆಲ್ಲಾ ನಮ್ಮ ಮರ್ಜಿಯಲ್ಲಿರುತ್ತವೆ. ನಾವು ಹೇಳಿದಂತೆ ಕೇಳಬೇಕು ಮತ್ತು ಕೇಳಿದ್ದನ್ನು ಮಾಡಬೇಕು. ಮಿಲಿಟರಿ ತಾಣ ಕೇಳಿದರೂ ಕೊಡಬೇಕಾಗುತ್ತದೆ. ಆ ದೇಶಗಳ ತೈಲ ಮತ್ತು ಇತರ ಸಂಪನ್ಮೂಲಗಳು ನಮ್ಮ ಕೈಯಲ್ಲಿ ಇದ್ದಂತೆಯೇ ಆಗಬೇಕು."

ಇದರರ್ಥವೇನು ? ವಿವಿಧ ಯೋಜನೆಗಳಿಗೆಂದು ವಿಶ್ವ ಬ್ಯಾಂಕ್ ಕೊಡುವ ಸಾಲದ ಹಣವು ಯೂರೋಪ್ ಮತ್ತು ಅಮೆರಿಕಾ ದೇಶಗಳ ದೊಡ್ಡ ಕಂಪನಿಗಳಿಗೆ ಸೇರಿಹೋಗುತ್ತದೆ. ಅವರಿಂದ ತಾನೆ ಉದ್ಯಮಗಳಿಗೆ ಈ ಸಾಲಗಾರ ದೇಶಗಳು ಯಂತ್ರ ಮುಂತಾದುವನ್ನು ಕೊಳ್ಳುವುದು ! ಅರ್ಥಾತ್, "ನೆರವು" ಎಂದು ಪಡೆದ ಸಾಲ ದಂಡವಾದಂತೆಯೇ. ನಮ್ಮ ದೇಶದ ಸಂಪನ್ಮೂಲಗಳನ್ನು ಬಾಚಿಕೊಂಡು ಬಿಡುತ್ತಾರೆ, ನಮ್ಮ ದೇಶದ ಖಜಾನೆಗಳು ಪೂರ್ಣವಾಗಿ ಖಾಲಿ ಹೊಡೆಯುತ್ತವೆ. ಸಾಲ ನೀಡುವ ದೇಶಗಳಿಗೆ ಬೇಕಾದ್ದೇ ಅದು : ಅಭಿವೃದ್ಧಿ ನಿರತ ದೇಶಗಳ ಜುಟ್ಟು ಅವರ ಕೈಯ್ಯಲ್ಲಿರಬೇಕು, ಎಂದು. ನಮ್ಮ ದೇಶಗಳ ರಾಜಕೀಯ ಮತ್ತು ಆರ್ಥಿಕ ನೀತಿಗಳನ್ನು ರೂಪಿಸುವವರು ಆ ಹೊರದೇಶಗಳವರೇ ಆಗಿಬಿಡುತ್ತಾರೆ. ಇದರೊಟ್ಟಿಗೆ ಸಾಲ ನೀಡುವ ದೇಶಗಳು ನಮ್ಮ ದೇಶಗಳ "ಬುದ್ಧಿಜೀವಿ"ಗಳಿಗೆ ಬೆಂಬಲ ನೀಡಿ ಅನೇಕ ಸಂಸ್ಥೆಗಳನ್ನು ಹುಟ್ಟುಹಾಕಿಸುತ್ತವೆ. ಸಾರ್ವಜನಿಕ ನೀತಿಗಳ ಬಗೆಗೆ ಚರ್ಚೆ, ತೀರ್ಮಾನ, ಎಲ್ಲಾ ಇಲ್ಲಿ ನಡೆಯುವಂತಾಗುತ್ತದೆ. ವಿದೇಶಿ ಸರ್ಕಾರಗಳು ಮತ್ತು ಸಂಸ್ಥೆಗಳು ಈ "ಬುದ್ಧಿಜೀವಿ ಸಂಸ್ಥೆ"ಗಳಿಗೆ ಹಣಕಾಸು ಒದಗಿಸಿ ತಮಗೆ ಬೇಕಾದಂತಹ ನೀತಿ ಮತ್ತು ವಾತಾವರಣ ನಿರ್ಮಿಸಿಕೊಳ್ಳುತ್ತವೆ. ಒಮ್ಮೆ ಹೀಗೆ ಅಸ್ತಿತ್ವಕ್ಕೆ ಬಂದ ಪೋಷಿತ ಸಂಸ್ಥೆಗಳು ರದ್ದಾಗುವುದಿಲ್ಲ. ಅವು ಕಾರ್ಯನಿರತವಾಗಿಯೇ ಉಳಿಯುತ್ತವೆ. ಕೊಳ್ಳುಬಾಕತನವನ್ನು ಮತ್ತು ಮುಕ್ತ ಮಾರುಕಟ್ಟೆಯ ಆರ್ಥಿಕತೆಯನ್ನು ಹೊಗಳುತ್ತಿರುವುದೇ ಈ ಸಂಸ್ಥೆಗಳ ಕೆಲಸ. ಸಮಾಜವಾದದ ಹೆಸರು ಕೇಳಿದೊಡನೆ ಚಂಗನೆ ಹಾರಿ ಚೀರುವುದು ಇವುಗಳ ಕಾರ್ಯಶೈಲಿ. ಇಂತಹ ಸಂಸ್ಥೆಗಳಲ್ಲಿರುವ ಅರ್ಥಶಾಸ್ತ್ರಜ್ಞರು ಸುಖೀರಾಜ್ಯದ ಕಲ್ಪನೆಯನ್ನು ಸಹ ಮಾನ್ಯ ಮಾಡುವುದಿಲ್ಲ. ಅಂತಹ ಪ್ರಭುತ್ವದಡಿಯಲ್ಲಿ ಆರ್ಥಿಕ ಬೆಳವಣಿಗೆಯು ಕುಂಠಿತಗೊಳ್ಳುತ್ತದೆಂಬುದು ಅವರ ವಾದ. ಅವರು ಮುಂದು ಮಾಡುವ ಆರ್ಥಿಕ ನೀತಿಯ ಮೂಲ ಲಕ್ಷಣವೇನು ? ಬಡವರಿಗೆ ಒಂದೆರಡು ಹಿಡಿ ಆಹಾರ ಬೇಕಾದರೆ ಒದಗಿಸುವುದು ಮತ್ತು ದುಡಿಯುವ ಜನರ ಪರವಾದ ಕಾನೂನುಗಳನ್ನು ಜಾರಿಗೆ ಬರದಂತೆ ತಡೆಯುವುದು. ಅವರ ಪರವಾದ ಕಾನೂನು ಮಾಡಿ, ಆದರೆ ಅದನ್ನು ಅನುಷ್ಠಾನಕ್ಕೆ ತರಬೇಡಿ, ಎಂಬುದು ಸಿದ್ಧಾಂತ ! ಈ ನೀತಿನಿರೂಪಕ ಸಂಸ್ಥೆಗಳಿಗೆ ಭಾರತದ ಉದ್ದಿಮೆದಾರರೂ ಹಣ ನೀಡುತ್ತಾರೆ; ಆದ್ದರಿಂದ ರೈತರಿಂದ ಭೂಮಿ ಕಸಿದುಕೊಳ್ಳುವುದನ್ನು ಈ ಸಂಸ್ಥೆಗಳು ವಿರೋಧಿಸುವುದಿಲ್ಲ. ಸುಲಭವಾಗಿ ಶ್ರೀಮಂತರಾಗಲು ಇರುವ ಇನ್ನೊಂದು ಹಾದಿ ಆಸ್ತಿ ವ್ಯವಹಾರ. ಅದನ್ನು ನೀತಿನಿರೂಪಕ ಸಂಸ್ಥೆಗಳು ವಿರೋಧಿಸುವುದಿಲ್ಲ.




ಇನ್ನೊಂದು ಕತೆಯನ್ನೂ ಹೇಳಬೇಕು : ನಮ್ಮ ಮನೆಗೆ ಇತ್ತೀಚೆಗೆ ಒಬ್ಬ ಅತಿಥಿ ಬಂದಿದ್ದರು. ಸಂಜೆಯ ಊಟಕ್ಕೆ ಅವರಿಗೆ ಆಹ್ವಾನ ನೀಡಿದ್ದೆವು. ಅವರು ಭಾರತದಲ್ಲಿ ಹುಟ್ಟಿ ಬೆಳೆದವರು. ಈಗ ಅಮೆರಿಕಾದ ಒಂದು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರು. ಅವರನ್ನು ನಮ್ಮ ದೇಶದ ಒಂದು ಸಂಶೋಧನಾ ಪ್ರಯೋಗಾಲಯಕ್ಕೆ ಆಹ್ವಾನಿಸಲಾಗಿತ್ತು. ಆ ಪ್ರಯೋಗಾಲಯದ ವಿಜ್ಞಾನಿಗಳು ವಾಯು ಸೈನ್ಯಕ್ಕೆ ಬೇಕಾದ ಒಂದು ಯುದ್ಧವಿಮಾನವನ್ನು

ನಿರ್ಮಿಸುವುದರಲ್ಲಿ ನಿರತರಾಗಿದ್ದರು. ಈ ನಮ್ಮ ಪ್ರಾಧ್ಯಾಪಕ ಅತಿಥಿ ನಮ್ಮಲ್ಲಿಗೆ ಬಂದಿದ್ದಾಗ ಬಹಳ ಸಂತೋಷ ಪ್ರಕಟಿಸಿದ ; ತನ್ನ ದೇಶಕ್ಕೆ ಅಳಿಲು ಸೇವೆ ಸಲ್ಲಿಸುವ ಅವಕಾಶ ದೊರಕಿತಲ್ಲ, ಎಂದು. ಆತ ಯಾವ ಯೋಜನೆಯಡಿ ಆಹ್ವಾನಿಸಲ್ಪಟ್ಟಿದ್ದನೋ ಅದನ್ನು ರದ್ದುಮಾಡಲಾಗಿದ್ದ ಸುದ್ದಿಯನ್ನು ಕೆಲವೇ ದಿನಗಳ ಹಿಂದೆ ನಾನು ಪತ್ರಿಕೆಗಳಲ್ಲಿ ಓದಿದ್ದೆ. ಅದನ್ನು ಆತನಿಗೆ ಹೇಳಿದೆ. "ಎಲ್ಲಾದರೂ ಉಂಟೆ, ಹಾಗೇನೂ ರದ್ದುಗೊಳಿಸಿಲ್ಲ" ಎಂದು ಆತ ಉದ್ಘೋಷಿಸಿದ. ಅತಿಥಿಗಳ ಪೈಕಿ ಇತರರೂ ಅಲ್ಲೇ ಇದ್ದುದರಿಂದ ಈ ಪ್ರಾಧ್ಯಾಪಕನಿಗೆ ಮುಜುಗರ ಆಗದಿರಲೆಂದು ನಾನು ಸುಮ್ಮನಾದೆ. ಯಾರಿಗೂ ಗೊತ್ತಾಗದಂತೆ ನನ್ನ ಅಭ್ಯಾಸದ ಕೊಠಡಿಗೆ ಹೋಗಿ ನನ್ನ ಐ-ಪ್ಯಾಡ್‌ನಲ್ಲಿ ಗೂಗಲ್‌ನ ಮುಖಾಂತರ ಸದರಿ ಯೋಜನೆಯ ಸಮಾಚಾರವನ್ನು ಖಾತ್ರಿಮಾಡಿಕೊಂಡೆ. ಐ-ಪ್ಯಾಡ್ ಅನ್ನು ಹಾಗೇ ಹಿಡಿದು ಪ್ರಾಧ್ಯಾಪಕ ಮಿತ್ರನ ಬಳಿ ಹೋಗಿ ಅದನ್ನವರಿಗೆ ತೋರಿಸಿದೆ. ಆ ಯೋಜನೆಯನ್ನು ಒಂದು ತಿಂಗಳ ಮುಂಚೆಯೇ ರದ್ದುಮಾಡಲಾಗಿತ್ತು.




ನಮ್ಮ ಪ್ರಯೋಗಾಲಯದ ವಿಜ್ಞಾನಿಗಳಿಗೆ ಅದು ತಿಳಿದಿರಲಿಲ್ಲವೆ ? ಅವರು ಯೋಜನೆಯಲ್ಲಿ ಕೆಲಸ ಮಾಡುತ್ತಿದ್ದವರು ಮತ್ತು ಯೋಜನೆಯ ಮುಂದುವರಿಯಬೇಕೆಂದು ಆಶಿಸುತ್ತಿದ್ದವರು. ಆದ್ದರಿಂದ ಪ್ರಾಧ್ಯಾಪಕನಿಗೆ ರದ್ದತಿಯ ವಿಷಯವನ್ನು ಅವರು ತಿಳಿಸಿರಲಿಲ್ಲ. ಹೇಗೋ ಯೋಜನೆಗೆ ಮರುಜೀವ ತುಂಬಬೇಕೆಂಬ ಆಕಾಂಕ್ಷೆ ಅವರದು. ಐ-ಪ್ಯಾಡ್‌ನಲ್ಲಿದ್ದ ಸಮಾಚಾರ ನೋಡಿ ಅತಿಥಿ ಪ್ರಾಧ್ಯಾಪಕ ಹೌಹಾರಿದ. ಯೋಜನೆಯ ಬಗ್ಗೆ ಬೇರೆ ಬೇರೆ ಪತ್ರಿಕೆಗಳಲ್ಲಿದ್ದ ವರದಿಗಳು ಹಾಗೂ ವಿಶ್ಲೇಷಣೆಗಳು ಅಲ್ಲಿದ್ದವು. ರದ್ದತಿಯನ್ನು ಎಲ್ಲ ವರದಿಗಳೂ ಖಚಿತಪಡಿಸಿದ್ದವು. ನಾನು ನಲವತ್ತು ವರ್ಷ ಪತ್ರಿಕೆಗಳಲ್ಲಿ ಉದ್ಯೋಗಿಯಾಗಿದ್ದವನು. ಇಂತಹ ಯೋಜನೆಗಳು, ರದ್ದತಿಗಳು, ಅವುಗಳ ಹಿಂದಿನ ಮರ್ಮ, ಇತ್ಯಾದಿಗಳೆಲ್ಲಾ ನನಗೆ ಸುಪರಿಚಿತ. ಆ ಹಿನ್ನೆಲೆ ಇದ್ದುದರಿಂದ ಪ್ರಾಧ್ಯಾಪಕನಿಗೆ ಹೇಳಿದೆ : "ಈ ಯೋಜನೆಯ ರದ್ದತಿಯ ಮರ್ಮ ನಿಮಗೆ ತಿಳಿಯದು. ವಿದೇಶದಿಂದ ಅಂತಹ ಯುದ್ಧವಿಮಾನವನ್ನು ಕೊಳ್ಳುವ ತೀರ್ಮಾನವಾಗಿರುತ್ತದೆ. ಅದರ ಲಾಭವು ಯಾರಿಗೋ ದಕ್ಕುತ್ತದೆ. ಎಂಥದೋ ಕಮಿಷನ್, ಪುಕ್ಕಟೆ ವಿದೇಶ ಪ್ರವಾಸ, ಇತ್ಯಾದಿ. ಸರ್ಕಾರಿ ಅಧಿಕಾರಿಗಳಿಗೆ ಮತ್ತು ರಾಜಕಾರಣಿಗಳಿಗೆ ಅಷ್ಟಾದರೆ ಸಾಕು. ಇಂತಹ ತೀರ್ಮಾನ ಚೀಣಾದಂತಹ ದೇಶದಲ್ಲಿ ಸಾಧ್ಯವಿರುತ್ತಿತ್ತೆ ? ಆ ದೇಶವು ತಂತ್ರಜ್ಞಾನವನ್ನು ಬೇಡಿ, ಕಾಡಿ, ಕದ್ದು, ಹೇಗಾದರೂ ಪಡೆದುಕೊಳ್ಳಲು ಹಾತೊರೆಯುತ್ತಿರುತ್ತದೆ. ಇಂತಹ ಯೋಜನೆಗಳು ಯಶಸ್ಸು ಕಾಣುವವರೆಗೂ ಶತಾಯ ಗತಾಯ ಮುಂದುವರಿಸಲ್ಪಡುತ್ತವೆ."

ನಮ್ಮ ದೇಶದ ಇಂದಿನ ವಿದ್ಯಮಾನಗಳು ಹೇಗಿವೆ ? ಚಾಲಕನಿಲ್ಲದ ವಾಯುವಿಮಾನಗಳಿಗಾಗಿ ಆಗಲೆ ಕೊಳ್ಳುವ ಸೂಚನೆ ಹೊರಬಿದ್ದಿದೆ. ಅವು ಅಮೆರಿಕಾದಿಂದ ಕೊಳ್ಳಲ್ಪಡುತ್ತವೆ. ಸುಮಾರು ಒಂದು ಲಕ್ಷ ಕೋಟಿ ರೂಪಾಯಿಗಳ ವೆಚ್ಚ ತಗಲುವ ಇನ್ನೊಂದು ರಕ್ಷಣಾ ಒಪ್ಪಂದ ಇಸ್ರೇಲ್ ಜೊತೆ ಆಗಿದೆ. ಭಾರತದಲ್ಲಿ 'ಅರಿಹಂತ್' ಎಂಬ ಪರಮಾಣು ಇಂಧನದ ಜಲಾಂತರ್ಗಾಮಿ ನೌಕೆ (ಸಬ್‌ಮರೀನ್)ಯನ್ನು ನಿರ್ಮಿಸಲಾಗಿದೆ. ಅದಕ್ಕೆ ತಗುಲಿದ ವೆಚ್ಚ ಎರಡು ಬಿಲಿಯನ್ ಡಾಲರುಗಳು, ಅಂದರೆ ಸುಮಾರು ೧೫೦ ಕೋಟಿ ರೂಪಾಯಿಗಳು (ಅಥವಾ ಅದಕ್ಕೂ ಹೆಚ್ಚು). ಆದರೆ ಈಗ ಹೇಳುತ್ತಿದ್ದಾರೆ, ಆ ಸಬ್‌ಮರೀನ್ ಆಧುನಿಕ ಯುದ್ಧತಂತ್ರಗಳಿಗೆ ಒಗ್ಗುವಂಥದಲ್ಲ, ಎಂದು. ಆದ್ದರಿಂದ ಯೋಜನೆಯನ್ನು ತಿಪ್ಪೆಗೆ ಎಸೆಯುತ್ತಿದ್ದಾರೆ. ಅದೇನು ನ್ಯೂನತೆ ಇದೆಯೋ ಅದನ್ನು ಸರಿಪಡಿಸಿ ಇದೇ 'ಅರಿಹಂತ್' ಕಾರ್ಯಸಾಧುವಾಗುವಂತೆ ಸಂಶೋಧನೆ ಮಾಡಲು ನಮ್ಮ ವಿಜ್ಞಾನಿಗಳಿಗೆ, ತಂತ್ರಜ್ಞಾನಿಗಳಿಗೆ, ಸಾಧ್ಯವಿಲ್ಲವೆ ? ಸಾಧ್ಯವಿಲ್ಲದೆ ಏನು, ಅವರು ಅದಕ್ಕೆ ಸಮರ್ಥರಿದ್ದಾರೆ. ಆದರೆ ಆಗ ವಿದೇಶಗಳಿಂದ ತರಿಸಿಕೊಂಡಾಗ ಕೆಲವರಿಗೆ ದಕ್ಕುವ ಹಣದ ಗಂಟು ಇಲ್ಲವಾಗುತ್ತದಲ್ಲ ! ಜೊತೆಗೆ, ದೇಶದ ರಕ್ಷಣಾ ವೆಚ್ಚ ಎಂದಾಗ ಯಾರೂ ಅದನ್ನು ಟೀಕಿಸುವುದಿಲ್ಲ, ವಿರೋಧಿಸುವುದಿಲ್ಲ. ದೇಶದ ವೈರಿಗಳನ್ನು ಬಡಿದು ಹಾಕಬೇಕೆನ್ನುವಾಗ ವೆಚ್ಚದ ಲೆಕ್ಕ ಏತಕ್ಕೆ ? ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳು ಬಹಿರಂಗವಾಗಿ ಏನನ್ನೂ ಹೇಳುವುದಿಲ್ಲವಾದ್ದರಿಂದ ಯೋಜನೆಯನ್ನು ನಿರ್ಲಕ್ಷಿಸಿ, ಅಪಾರವಾಗಿ ವೆಚ್ಚವಾಗಿರುವ ಹಣವನ್ನು ನೀರುಪಾಲು ಮಾಡಿ, ನಾವು ಹೊರದೇಶದಿಂದ ಸಬ್‌ಮರೀನ್ ಕೊಳ್ಳುತ್ತೇವೆ. ಇದು ನಮ್ಮ ದೇಶಭಕ್ತಿ, ಮೇಕ್ ಇನ್ ಇಂಡಿಯ, ಮೇಡ್ ಇನ್ ಇಂಡಿಯ, ದುಷ್ಟ ವೈರಿಗಳ ದಮನ, ಇತ್ಯಾದಿ. ಆಮೇಲೆ ದೂರುತ್ತೇವೆ : ಹಿಂದುಸ್ತಾನ್ ಏರೊನಾಟಿಕ್ಸ್‌ನಂತಹ ಸಂಸ್ಥೆಯು ಬಿಳಿಯಾನೆ, ಯಾವ ಪ್ರಯೋಜನವೂ ಇಲ್ಲದೆ ದುಂದುವೆಚ್ಚ ಮಾಡುತ್ತಿದ್ದೇವೆ, ಅದನ್ನು ಮುಚ್ಚಿಬಿಡುವುದೇ ಲೇಸು, ಎಂದು. ಇಲ್ಲಿಯ ಇಂಜಿನಿಯರ್‌ಗಳು ಮತ್ತು ದುಡಿಮೆಗಾರರು ಮೂರೋ ನಾಲ್ಕೋ ವರ್ಷ ಸತತವಾಗಿ ಶ್ರಮಿಸಿ ಒಂದು ಮಾದರಿ ಯುದ್ಧವಿಮಾನವನ್ನು ಸಿದ್ಧಗೊಳಿಸುತ್ತಾರೆ. ಪ್ರಾಯೋಗಿಕ ಹಾರಾಟವೂ ಆಗುತ್ತದೆ. ಆ ಮಾದರಿಯ ಯುದ್ಧವಿಮಾನಗಳನ್ನು ದೊಡ್ಡ ಪ್ರಮಾಣದಲ್ಲಿ ನಿರ್ಮಿಸಬೇಕೆಂಬ ಪ್ರಸ್ತಾಪವು ದೆಹಲಿಗೆ ಹೋಗುತ್ತದೆ. ಇನ್ನೇನು ಅನುಮತಿ ದೊರೆಯಿತು ಎನ್ನುವ ವೇಳೆಗೆ ಯಾರೋ ಕೆಲವು ಅಧಿಕಾರಿಗಳು, ಕಂಟ್ರಾಕ್ಟುದಾರರು, ರಾಜಕಾರಣಿಗಳು, ಅದನ್ನು ಅನೂರ್ಜಿತಗೊಳಿಸಿಬಿಡುತ್ತಾರೆ.

ಈಗಿನ ಪ್ರಧಾನಿ ಮಾನ್ಯ ಶ್ರೀ. ಮೋದಿಯವರು ಅದ್ಭುತ ಯೋಜನೆಗಳ ಮೂಲಕ ಆಧುನಿಕ ಭಾರತದಲ್ಲಿ ಬುಲೆಟ್ ರೈಲು, ಸ್ಮಾರ್ಟ್ ಸಿಟಿ, ಮುಂತಾದವನ್ನು ನೀಡುವತ್ತ ಹೊರಡುವುದಾಗಿ ಹೇಳಿದ್ದಾರೆ. ಅದಕ್ಕೆ ತಗಲುವ ಖರ್ಚು ಬಹಳ ಹೆಚ್ಚಿನದು. ಈ ಎಲ್ಲ ಯೋಜನೆಗಳೂ ನಮ್ಮ ದೇಶವನ್ನು ಹೆಚ್ಚು ಹೆಚ್ಚಾಗಿ ಪರದೇಶಗಳಿಗೆ ಅಧೀನವನ್ನಾಗಿಸುವ ಸಾಧ್ಯತೆಯನ್ನು ಸುಮ್ಮನೆ ತಳ್ಳಿಹಾಕುವುದು ತರವಲ್ಲ. ಎಲ್ಲವೂ ವಿದೇಶಗಳು ನೀಡುವ "ನೆರವಿನಿಂದ" (ಅಂದರೆ, ಸಾಲದಿಂದ) ನಡೆಯಬೇಕಾಗುತ್ತದೆ ಎಂಬುದನ್ನು ಮರೆಯದಿರೋಣ. ಸಾಲವನ್ನು ಮುಂದಿನ ಪೀಳಿಗೆಗಳವರು ತೀರಿಸಬೇಕು. ಅವರು ಹುಟ್ಟುವ ಮೊದಲೇ ನಾವು ಅವರನ್ನು ಸಾಲಗಾರರನ್ನಾಗಿ ಮಾಡುತ್ತಿದ್ದೇವೆಂಬ ವಿವೇಕ ಅಗತ್ಯ. ಅವರು ಸಾಲ ತೀರಿಸಬೇಕಾಗುವ ವೇಳೆಗೆ ಮಾನ್ಯ ಮೋದಿಯವರು ಇರುವುದಿಲ್ಲ. ಅವರ ಪಕ್ಷ ಇರುತ್ತದೋ ಇಲ್ಲವೋ ತಿಳಿದವರಾರು ? ಆದರೆ ಇಂದಿನ ಅವರ ಯೋಜನೆಗಳಿಂದ ನಮ್ಮ ಹಳ್ಳಿಗರನ್ನು ನಿರ್ಗತಿಕರನ್ನಾಗಿಸುತ್ತೇವೆ, ಬುಡಕಟ್ಟು ಜನ ನೆಲೆಯಿಲ್ಲದವರಾಗುತ್ತಾರೆ, ಬೇರುಗಳಿಲ್ಲದ ಅಲೆಮಾರಿಗಳಾಗುತ್ತಾರೆ, ನಗರಗಳ ಕೊಳಚೆ ಪ್ರದೇಶಗಳಿಗೆ ಧಾವಿಸುತ್ತಾರೆ. ಭೂಮಿ-ಕಾಣಿಯನ್ನು ಅಷ್ಟೋ ಇಷ್ಟೋ ಉಳ್ಳ ನಮ್ಮ ರೈತ ನಾಗರಿಕ ದಿಕ್ಕಿಲ್ಲದ ದಾರಿಹೋಕನಾಗಬೇಕೆ ? ನಾಳೆ ನಗರದ ಪ್ರತಿಷ್ಠಿತರು ಅವನನ್ನು ಕಳ್ಳನೋ ಎಂಬಂತೆ ಗುಮಾನಿಯಿಂದ ಕಾಣುತ್ತಾರೆ.

ಆದ್ದರಿಂದ ಮನಸ್ಸಿಗೆ ಈ ವಿಷಯ ತುಂಬಿಕೊಳ್ಳೋಣ, ಭಾವನೆಗಳನ್ನು ಬೆಳೆಸಿಕೊಳ್ಳೋಣ : "ನೆರವು" ಎಂಬ ಹೆಸರಿನಲ್ಲಿ ನಾವು ಪಡೆಯುವ ಸಾಲವು ಅತೀವ ದೊಡ್ಡ ಹೊರೆ. ಅದನ್ನು ಬೇಕಾಬಿಟ್ಟಿ ಯಾವಾವುದಕ್ಕೋ ತೊಡಗಿಸಿ ಹಾಳುಮಾಡುತ್ತೇವೆ, ತಲೆಯ ಮೇಲೆ ಚಪ್ಪಡಿ ಎಳೆದುಕೊಳ್ಳುತ್ತೇವೆ. ಝಗಮಗಿಸುವ ವಿಮಾನ ನಿಲ್ದಾಣ, ಕನ್ನಡಿಯಂತಿರುವ ೧೬ ಲೇನ್ ರಸ್ತೆ, ಸುತ್ತಮುತ್ತ ಫ್ಲೈ ಓವರ್‌ಗಳು, ಉಪಯೋಗಿಸಬೇಕಾಗದ ಶಸ್ತ್ರಾಸ್ತ್ರಗಳು, ಎಲ್ಲಾ ಯಾವ ಮತ್ತು ಯಾರ ಪುರುಷಾರ್ಥಕ್ಕಾಗಿ ? ನೂರು ಕೋಟಿ ರೂಪಾಯಿಗಳಲ್ಲಿ ಆಗಬಹುದಾದ್ದಕ್ಕೆ ಸಾವಿರಾರು ಕೋಟಿ ರೂಪಾಯಿಗಳ ದುರ್ವ್ಯಯ ಸಮರ್ಥನೀಯವೆ ? "ಹಾಸಿಗೆ ಇದ್ದಷ್ಟು ಕಾಲು ಚಾಚು" ಎಂಬ ಗಾದೆಯನ್ನು ಹೇಳುತ್ತಿರುತ್ತೇವೆ, ಆದರೆ ಹಾಸಿಗೆಯನ್ನು "ಅಭಿವೃದ್ಧಿಗೊಳಿಸಿ" ಊರಿನುದ್ದಕ್ಕೂ ಚಾಚಿಕೊಳ್ಳಬೇಕೆಂಬ ಅಮಲಿನಲ್ಲಿದ್ದೇವೆ. ನಮ್ಮ ಮಕ್ಕಳು ಮತ್ತು ಮೊಮ್ಮಕ್ಕಳು ಸಾಲಗಾರರಾಗಿ ಹುಟ್ಟುವಂತೆ ಮಾಡುವ ಹಕ್ಕು ನಮಗಿಲ್ಲ. ಹಾಗೆ ಮಾಡುವುದು ಅಮಾನವೀಯವೆನಿಸುತ್ತದೆ.

ಲೇಖಕ : **ಅಜ್ಞೇಯ**, ನವದೆಹಲಿ   ನಿರೂಪಕ : **ಜಿ. ರಾಮಕೃಷ್ಣ** , ಬೆಂಗಳೂರು



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



**ಅಪಾಲಾ ಮತ್ತು ಘೋಷಾರಂತಹ ಕವಯಿತ್ರಿಯರಲ್ಲದೆ ಋಗ್ವೇದದಲ್ಲಿ ಯಮಿ, ಪೌಲೋಮೀ, ಸಾರ್ಪರಾಜ್ಞೀ ಸಹ ಇದ್ದಾರೆ. ಒಬ್ಬ ಕವಯಿತ್ರಿಯು ಅನಾಮಧೇಯಳಾಗಿ ಉಳಿದಿದ್ದಾಳೆ. ಅಂಥವರೆಲ್ಲರ ಸೂಕ್ತಗಳೂ ಶ್ರೇಷ್ಠಮಟ್ಟದವೆಂದು ನಾವು ಕಲ್ಪಿಸಿಕೊಳ್ಳಬೇಕಾಗಿಲ್ಲ. ಈ ಕವಯಿತ್ರಿಯರು ಪ್ರಸ್ತುತಪಡಿಸುವ ವಸ್ತುಗಳಲ್ಲದೆ ಅಪಪ್ರಸವ, ಮನಃಕ್ಲೇಶ, ದುಃಸ್ವಪ್ನ, ಇತ್ಯಾದಿ ವಿಷಯಗಳನ್ನು ಕುರಿತ ಪ್ರತಿಫಲನಗಳೂ ಋಗ್ವೇದದಲ್ಲಿವೆ. ಅವುಗಳಲ್ಲಿ ಕೆಲವನ್ನು ಈ ಇಪ್ಪತ್ತೊಂದನೆಯ ಕಂತಿನಲ್ಲಿ ಗಮನಿಸೋಣ.**

**ಜಿ. ರಾಮಕೃಷ್ಣ**

ಋಗ್ವೇದದ ಸೂಕ್ತಗಳನ್ನು ರಚಿಸಿದವರ ಹೆಸರುಗಳು ಪಾರಂಪರಿಕವಾಗಿ ಬಂದಿರುವಂಥವು. ಅಂತಹ ಕರ್ತೃಗಳ ಬಗ್ಗೆ ನಮಗೆ ತಿಳಿದುಬರುವ ಅಂಶಗಳು ಅತ್ಯಲ್ಪ. ಯಾವ ಕುಟುಂಬದವರು ಅವರು ಎಂಬುದನ್ನು ಸಾಮಾನ್ಯವಾಗಿ ಹೇಳಲಾಗಿರುತ್ತದೆ. ಜೊತೆಗೆ ವ್ಯಕ್ತಿಗಳ ಹೆಸರುಗಳನ್ನು ಹೇಳುವುದೂ ಉಂಟು. ಇಂತಹ ವಿವರಗಳು ಅನುಕ್ರಮಣಿಕೆ ಎಂಬ ಸಂಕಲನದಲ್ಲಿ ದೊರೆಯುತ್ತವೆ. ಹೆಸರುಗಳು ಲಭ್ಯ ಇಲ್ಲದಾಗ ಆಯಾ ಸೂಕ್ತಗಳಲ್ಲಿ ಬರುವ ಒಂದು ಪ್ರಮುಖ ಹೆಸರನ್ನು ಕರ್ತೃ ಎಂಬರ್ಥದಲ್ಲಿ ದಾಖಲಿಸಿರುತ್ತಾರೆ. ಸಾಯಣನ ಭಾಷ್ಯದಲ್ಲಿ ಪ್ರತಿಯೊಂದು ಸೂಕ್ತದ ಮೊದಲಲ್ಲಿ ಸೂಕ್ತದಲ್ಲಿರುವ ಮಂತ್ರಗಳ ಸಂಖ್ಯೆ, ಅವುಗಳ ಛಂದಸ್ಸು, ಯಾವ ದೇವತೆಯನ್ನುದ್ದೇಶಿಸಿದ್ದು ಮತ್ತು ಕರ್ತೃ ಯಾರು ಎಂಬ ವಿವರಗಳೊಂದಿಗೆ ಮಂತ್ರಗಳ ವಿನಿಯೋಗವನ್ನೂ ಹೇಳಲಾಗಿರುತ್ತದೆ. ಅದಕ್ಕೆ ಪೂರಕವಾಗಿ ಆಶ್ವಲಾಯನ ಶ್ರೌತ ಸೂತ್ರ, ಯಾಸ್ಕನ ನಿರುಕ್ತ, ಮುಂತಾದ ಆಕರ ಗಳಿಂದ ಉದ್ಧೃತ ಭಾಗಗಳನ್ನು ಸೇರಿಸಿರಲಾಗುತ್ತದೆ. ಹಲವು ವೇಳೆ ಸಾಯಣನು "ವಿನಿಯೋಗೋ ಲೈಂಗಿಕಃ" ಎಂದುಬಿಡುತ್ತಾನೆ. ಅಂದರೆ ಯಜ್ಞಾದಿಗಳಲ್ಲಿ ಸೂಕ್ತ ಕಂಡಂತೆ ಬಳಸಿಕೊಳ್ಳಬಹುದು ಎಂದರ್ಥ.

ಹತ್ತನೆಯ ಮಂಡಲದ ೧೫೩ನೆಯ ಸೂಕ್ತವು ಯಾರೋ ಕವಯಿತ್ರಿ ರಚಿಸಿರುವಂಥದು; ಆದರೆ ಹೆಸರು ತಿಳಿದುಬಂದಿಲ್ಲ. ಸೂಕ್ತವು ಇಂದ್ರನ ಪೌರುಷವನ್ನು ಪ್ರಸ್ತಾಪಿಸಿ ಅವನ ಮಹತ್ಸಾಧನೆಯಾದ ವೃತ್ರವಧೆಯನ್ನು ವೈಭವೀಕರಿಸುತ್ತದೆ. ಅದನ್ನು "ದೇವತೆಗಳ ಸೋದರಿಯರಾದ ಇಂದ್ರನ ತಾಯಂದಿರು" (ದೇವಾನಾಂ ಸ್ವಸೃಭೂತಾ ಇಂದ್ರಮಾತರೋ ನಾಮ ಋಷಿಕಾಃ) ರಚಿಸಿದ್ದೆಂದು ಸಾಯಣನು ಹೇಳಿದ್ದಾನೆ. ಯಾರೆಂದು ಪರಂಪರೆಯಲ್ಲಿ ದಾಖಲಾಗಿಲ್ಲದಿದ್ದಾಗ ಇಂಥದೇನನ್ನೋ ಹೇಳುವುದು ಸಾಯಣನ ರೂಢಿ. ಅಂತೂ ಅದು ಒಬ್ಬ ಕವಯಿತ್ರಿಯಿಂದ ರಚಿತವಾದದ್ದೆಂಬ ಸೂಚನೆ ಸಾಕಷ್ಟು ಸ್ಪಷ್ಟವಾಗಿಯೇ ದೊರೆಯುತ್ತದೆ.

ಈ ಸೂಕ್ತದಲ್ಲಿ ವಿಶೇಷವಾದ ಕಾವ್ಯಾಂಶವೇನೂ ಕಾಣುವುದಿಲ್ಲ; ಬದಲಾಗಿ, ಇಂದ್ರನಿಗೆ ಹಲವು ವಿಶೇಷಣ ಗಳನ್ನು ನೀಡಿ ಅವನ ಪರಾಕ್ರಮವನ್ನು ಕೊಂಡಾಡ ಲಾಗಿದೆ. ಅವನು ಜನ್ಮ ತಾಳಿದಾಗ ದೇವಪತ್ನಿಯರು ಸ್ವಸಂತೋಷದಿಂದ ಅವನನ್ನು ನೋಡಲು ಹೋಗಿದ್ದು, ಅವನ ಪರಾಕ್ರಮವನ್ನು ಗುರುತಿಸಿದ್ದರಂತೆ. ಹುಟ್ಟಿದಾಗಲೇ ಅವನನ್ನಿವರು "ವೃತ್ರಘ್ನ"ನೆಂದು ಗುರುತಿಸಿದ್ದರು. ಮಿಂಚು-ಸಿಡಿಲು ಅವನ ಸಾಧನಗಳು ಮತ್ತು ಅವನು ಸರ್ವಾಂತರ್ಯಾಮಿ. (೧೦.೧೫೩.೨ : ...ತ್ವಂ ವೃಷನ್ ವೃಷಾ ಇತ್ ಅಸಿ ॥ ೩ : ತ್ವಂ ಇಂದ್ರ ಅಸಿ ವೃತ್ರಹಾ... ೫ : ಸ ವಿಶ್ವಾ ಭುವ ಆಭವಃ).

ಮುಂದಿನ ಸೂಕ್ತವು (೧೦.೧೫೪) ಯಮನ ತಂಗಿ ಯಮಿ ರಚಿಸಿದ್ದೆಂದು ಹೇಳಲಾಗಿದೆ (ವಿವಸ್ವತೋ ದುಹಿತಾ ಯಮೀ ಋಷಿಃ). ಮೃತರ ಹಾದಿಯನ್ನು ಬಣ್ಣಿಸುವ ಈ ಸೂಕ್ತವನ್ನು ಮರಣಾನಂತರದ ಕ್ರಿಯೆ ಗಳಲ್ಲಿ ಬಳಸುತ್ತಾರೆ (ಸಾಯಣ : ಮ್ರಿಯಮಾಣಾನಾಂ ಯಜಮಾನಾದೀನಾಂ ವರ್ತನಂ ಅತ್ರ ಪ್ರತಿಪಾದ್ಯತೇ). ಹಿಂದೆ ನಾವು ಪಿತೃ ಸೂಕ್ತಗಳ ಪರಿಚಯ ಮಾಡಿಕೊಂಡಿದ್ದೇವೆ. ಪ್ರಾಚೀನರು (ಪಿತೃಗಳು) ಋಗ್ವೇದದ ಕವಿಗಳ ದೃಷ್ಟಿಯಲ್ಲಿ ಶ್ರೇಷ್ಠರು, ವೀರರು ಮತ್ತು ಪೂಜ್ಯರು. ಅವರದೇ ಒಂದು ಲೋಕವಿದೆಯೆಂದು ಕವಿಗಳು ಕಲ್ಪಿಸಿಕೊಳ್ಳುತ್ತಾರೆ ಮತ್ತು ಇದು ವಿಶ್ವದ ಎಲ್ಲ ಪ್ರಾಚೀನ ಸಮಾಜಗಳಲ್ಲೂ ಕಂಡುಬಂದಿರುವ ವಿದ್ಯಮಾನ. ನಮ್ಮ ಲೋಕದಲ್ಲಿ ಮೃತಪಟ್ಟವರು ಆ ಪ್ರಾಚೀನರ ಪಿತೃಲೋಕಕ್ಕೆ ತೆರಳುತ್ತಾರೆಂಬ ಕಥನವು ಸಹ ಎಲ್ಲ ಸಂಸ್ಕೃತಿಗಳಲ್ಲೂ ಕಾಣಬರುವ ಕಲ್ಪನೆ. ಯಮಿ ಮತ್ತು ಯಮ ಒಂದು ಸಂವಾದದಲ್ಲಿ ತೊಡಗುವ






ಸೂಕ್ತವನ್ನು (೧೦.೧೦) ಹಿಂದೆಯೇ ನಾವು ಪರಿಚಯಿಸಿಕೊಂಡಿದ್ದೇವೆ. ಅಲ್ಲಿಯ ಯಮಿಯ ವ್ಯಕ್ತಿತ್ವಕ್ಕೂ ಇಲ್ಲಿಯ ವ್ಯಕ್ತಿತ್ವಕ್ಕೂ ಸಾಮ್ಯತೆಯೇ ಇಲ್ಲದಷ್ಟು ಗಾಂಭೀರ್ಯ ಈ ಸೂಕ್ತದಲ್ಲಿ (೧೦.೧೫೪) ವ್ಯಕ್ತವಾಗಿದೆ. ಇಲ್ಲಿ ಮೃತನು ಪಿತೃಲೋಕಕ್ಕೆ ತೆರಳಲೆಂಬ ಆಶಯವೊಂದೇ ಪ್ರಮುಖವಾದ ವಸ್ತು. ಆ ಲೋಕದ ವೈಶಿಷ್ಟ್ಯವನ್ನು ಹಾಗೂ ಈಗಾಗಲೆ ಅಲ್ಲಿಗೆ ಹೋಗಿರುವವರ ಪೌರುಷದ ಸಂಗತಿಯನ್ನು ಸೂಕ್ತವು ಸಂಕ್ಷಿಪ್ತವಾಗಿ ತಿಳಿಸಿಕೊಡುತ್ತದೆ : "ಗತಿಸಿರುವ ಕೆಲವು ಪಿತೃಗಳಿಗೆ ಸೋಮರಸವನ್ನು ಕೊಡಲಾಗುತ್ತದೆ; ಇನ್ನು ಕೆಲವರು ಯಜ್ಞದಲ್ಲಿ ತುಪ್ಪವನ್ನು ಸ್ವೀಕರಿಸುತ್ತಾರೆ. ಯಾವ ಪಿತೃಗಳಿಗೆ ಮಧುವನ್ನು ಅರ್ಪಿಸಲಾಗುತ್ತದೋ ಅಂಥವರ ಜೊತೆಗೂಡಲು ಈ ಮೃತನಿಗೆ ಸಾಧ್ಯವಾಗಲಿ" (೧ : ಸೋಮ ಏಕೇಭ್ಯಃ ಪವತೇ ಘೃತಂ ಏಕೇ ಉಪ ಆಸುತೇ। ಯೇಭ್ಯಃ ಮಧು ಪ್ರಧಾವತಿ ತಾನ್ ಚಿತ್ ಏವ ಅಪಿ ಗಚ್ಛತಾತ್॥). ಆ ಪಿತೃಗಳು ತಮ್ಮ ಜೀವನವನ್ನು ಎಷ್ಟು ಆಸ್ಥೆಯಿಂದ ಕಳೆದಿದ್ದರೆಂಬುದನ್ನು ಎರಡನೆಯ ಮಂತ್ರವು ಹೇಳುತ್ತದೆ : ಅವರ ಜೀವನವು ತಪೋಯುಕ್ತವಾಗಿದ್ದಿತು, ಅಂದರೆ ಆಡಂಬರವಿಲ್ಲದ ಜೀವನ ಅವರದಾಗಿತ್ತು. ಅವರು ಅಜೇಯರು; ಕೆಟ್ಟ ಕ್ರಿಯೆ ಮತ್ತು ಯೋಚನೆ ಅವರ ಬಳಿ ಸುಳಿದಿರಲಿಲ್ಲ. ಅದರಿಂದಾಗಿಯೇ ಅವರಿಗೆ ಸ್ವರ್ಗಪದವಿ ಅಥವಾ ಪಿತೃಲೋಕ ಪ್ರಾಪ್ತಿಯು ಸಂದಿತು. ಅವರು ಯಜ್ಞ ನಿರತರಾಗಿರುತ್ತಿದ್ದರು. ಅಂಥವರನ್ನು ಈ ಮೃತನು ಸೇರಿಕೊಳ್ಳಲಿ (೨ : ತಪಸಾ ಯೇ ಅನಾಧೃಷ್ಯಾಃ ತಪಸಾ ಯೇ ಸ್ವಃ ಯಯುಃ। ತಪಃ ಯೇ ಚಕ್ರಿರೇ ಮಹಃ ತಾನ್ ಚಿತ್ ಏವ ಅಪಿ ಗಚ್ಛತಾತ್॥). ಪಿತೃಗಳು ಸೆಣಸುವುದರಲ್ಲಿ ಅಗ್ರಗಣ್ಯರಾಗಿದ್ದರು, ಜೀವವನ್ನು ಮುಡುಪಾಗಿಟ್ಟರು. ಅಂತೆಯೇ, ಯಜ್ಞಗಳಲ್ಲಿ ಅಪಾರ ಸಂಭಾವನೆಯನ್ನು ನೀಡುತ್ತಿದ್ದ ಆ ಶ್ಲಾಘನೀಯರನ್ನು ಈ ಮೃತನು ಕೂಡಿಕೊಳ್ಳಲಿ (೩ : ಯೇ ಯುಧ್ಯಂತೇ ಪ್ರಧನೇಷು ಶೂರಾಸಃ ಯೇ ತನೂತ್ಯಜಃ। ಯೇ ವಾ ಸಹಸ್ರದಕ್ಷಿಣಾಃ ತಾನ್ ಚಿತ್ ಏವ ಅಪಿ ಗಚ್ಛತಾತ್॥). ನಿಯಮ ಪಾಲನೆಯಲ್ಲಿ ಯಾವಾಗಲೂ ಮುಂದಾಗಿದ್ದ ಪಿತೃಗಳು ಶ್ರೇಷ್ಠ ಋತವನ್ನು ಪೋಷಿಸಿದವರು. ಅಂತಹ ತಾಪಸಿಗಳಾಗಿದ್ದ ಪಿತೃಗಳನ್ನು ಈ ಮೃತನು ಕೂಡಿಕೊಳ್ಳಲಿ (೪ : ಯೇ ಚಿತ್ ಪೂರ್ವೇ ಋತಸಾಪಃ ಋತವಾನಃ ಋತವೃಧಃ। ಪಿತೄನ್ ತಪಸ್ವತಃ ಯಮ ತಾನ್ ಚಿತ್ ಏವ ಅಪಿ ಗಚ್ಛತಾತ್॥).

ಪೂರ್ವಜರಾದ ಪ್ರತಿಭಾವಂತ ಪಿತೃಗಳು ಸೂರ್ಯನನ್ನು ಬೇಕಾದರೂ ರಕ್ಷಿಸುವ ಸಾಮರ್ಥ್ಯವನ್ನು (ತಮ್ಮ ನಿಯಮ ಪಾಲನೆಯಿಂದ) ಗಳಿಸಿಕೊಂಡಿದ್ದರು. ತಪಸ್ಸಿನಿಂದ ದೃಢವಾಗಿದ್ದು ಕಂಗೊಳಿಸಿದವರು ಅವರು. ಅಂಥವರನ್ನೇ ಈ ಮೃತನು ಸೇರಿಕೊಳ್ಳಲಿ (೫ : ಸಹಸ್ರನೀಥಾಃ ಕವಯಃ ಯೇ ಗೋಪಾಯಂತಿ ಸೂರ್ಯಂ। ಋಷೀನ್ ತಪಸ್ವತಃ ಯಮ ತಪೋಜಾನ್ ಅಪಿ ಗಚ್ಛತಾತ್॥).

ಕಡೆಯ ಎರಡು ಮಂತ್ರಗಳಲ್ಲಿ ಬಂದಿರುವ **'ಯಮ'** ಎಂಬ ಪದವು ಕ್ರಿಯಾಪದ; **'ಹೋಗು'**, ಹೋಗಲಿ, ಎಂದು ಅದರರ್ಥ. ಯಮನನ್ನು ಸಂಬೋಧಿಸಿ ಏನನ್ನೋ ಹೇಳಲಾಗಿದೆಯೆಂದು ಭಾವಿಸಬಾರದು. (ಗ್ರಿಫ್ಲಿತ್ ಹಾಗೆ ಮಾಡಿದ್ದಾನೆ). ಈ ಸೂಕ್ತದ ಸಂದರ್ಭದಲ್ಲಿ ಎರಡಂಶಗಳನ್ನು ಗಮನಿಸಬೇಕು : (ಅ) ಒಬ್ಬ ಕವಯಿತ್ರಿ ಸಹ ಪಿತೃಗಳ ಬಗೆಗಿನ ಸೂಕ್ತವನ್ನು ರಚಿಸಲು ಋಗ್ವೇದದ ಕಾಲದಲ್ಲಿ ನಿರ್ಬಂಧವಿರಲಿಲ್ಲ. ಮಹಿಳೆಯರು ಶ್ರಾದ್ಧಕರ್ಮ ಮಾಡಕೂಡದೆಂಬ ಪದ್ಧತಿ ಯಾವಾಗಿನಿಂದ ಜಾರಿಗೆ ಬಂದಿತೋ ತಿಳಿಯದು ಮತ್ತು ಋಗ್ವೇದದ ಕಾಲದಲ್ಲಿ ಶ್ರಾದ್ಧಕರ್ಮ ಒಂದಿದ್ದಿತೆ ಮತ್ತು ಹಾಗಿದ್ದರೆ ಅದರ ಸ್ವರೂಪವೇನಾಗಿತ್ತು ಎಂಬುದೂ ನಮಗೆ ತಿಳಿಯದು; (ಆ) ಪಿತೃಗಳು ಪೂರ್ವಜರು, ಪ್ರಾಚೀನರು; ಬುಡಕಟ್ಟು ಸಮಾಜವು ವಿಘಟನೆಗೊಳ್ಳುವುದಕ್ಕೆ ಮುಂಚಿನವರು; ಬುಡಕಟ್ಟಿನ ನೀತಿಯಾದ 'ಋತ'ವು ಅವರ ಮೌಲ್ಯವಾಗಿದ್ದಿತು. ನಂತರದ ಕಾಲದಲ್ಲಿ ಆ ಹಿಂದಿನ ವ್ಯವಸ್ಥೆಯನ್ನು ಗೌರವ ಮತ್ತು ಸಂತಸದಿಂದ ನೆನೆಯುವುದು ರೂಢಿಗೆ ಬಂದಿದ್ದಿತು. ಹಿಂದಿನ ಋತವು ಕಾಣೆಯಾಗಿ ಸಮುದಾಯದ ವರ್ತನೆಯಲ್ಲಿ ಅನೇಕ ಬದಲಾವಣೆಗಳುಂಟಾಗಿದ್ದವು.

ಇನ್ನೊಬ್ಬ ಕವಯಿತ್ರಿ ಪೌಲೋಮೀ, ಅಂದರೆ ಪುಲೋಮನ ಮಗಳು ಶಚೀ. ನಂತರದ ಪುರಾಣಗಳಲ್ಲಿ ಶಚಿಯು ದೇವೇಂದ್ರನ ಪತ್ನಿ. ಋಗ್ವೇದದಲ್ಲಿಯೂ ಅವಳನ್ನು ಇಂದ್ರನ ಪತ್ನಿಯೆಂಬಂತೆ ಒಂದೆರಡು ಬಾರಿ ಕಾಣಿಸಲಾಗಿದೆ, ಆದರೆ **'ಶಚೀ'** ಎಂಬ ಪದವನ್ನು ಶಕ್ತಿ, ಪ್ರಾಬಲ್ಯ, ಎಂಬರ್ಥದಲ್ಲೂ ಬಳಸಿರುವುದುಂಟು. ಅವಳನ್ನು ಋಗ್ವೇದದಲ್ಲಿ ಹೆಚ್ಚಾಗಿ ಇಂದ್ರಾಣಿ ಎಂದು ಕರೆಯಲಾಗಿದೆ. ಕವಯಿತ್ರಿಯು ಸ್ವತಃ ಇಂದ್ರನ ಪತ್ನಿಯಂತೂ ಅಲ್ಲ, ಏಕೆಂದರೆ ಇಂದ್ರನು ಒಬ್ಬ ಕಲ್ಪಿತ ದೇವತೆ. ಕವನ ರಚಿಸಿರುವ ವ್ಯಕ್ತಿ ಯಾರೇ ಆಗಿರಲಿ, ಅವನು ಅಥವಾ ಅವಳು ಕಲ್ಪಿತ ವ್ಯಕ್ತಿಯಾಗಿರಲು ಶಕ್ಯವಿಲ್ಲ. ಇನ್ನೊಂದು ವಿಶೇಷವೆಂದರೆ ಕವಯಿತ್ರಿಯು ಈ ಸೂಕ್ತದಲ್ಲಿ ಯಾವ ದೇವತೆಯನ್ನೂ ಕುರಿತು ಹೇಳುವಂಥದೇನೂ ಇಲ್ಲ. ಅವಳು ಹೆಚ್ಚಾಗಿ ಹೇಳಿಕೊಳ್ಳುವುದು ಅವಳ ಬಗೆಗೇ. ಅನುಕ್ರಮಣಿಯಲ್ಲೂ ಅದನ್ನು ಗುರುತಿಸಲಾಗಿದೆ (...ಪೌಲೋಮೀ ಶಚೀ ಆತ್ಮಾನಂ ತುಷ್ಟಾವ...). ಅಂತಹ ಸೂಕ್ತಕ್ಕೆ ಸಹಜವಾಗಿಯೇ ವಿಶೇಷ ವಿನಿಯೋಗವೇನೂ ಇರಲಾರದು. ಒಬ್ಬ ಹೆಣ್ಣು ತನ್ನನ್ನು ತಾನು ಅಸಾಮಾನ್ಯಳೆಂದು ಹೇಳಿಕೊಳ್ಳುವಾಗಬೇಕಾದರೆ ಈ ಸೂಕ್ತದ ಒಂದೆರಡು ಮಂತ್ರಗಳು ಉಪಯೋಗಕ್ಕೆ ಬಂದಾವು. ಪುರಾಣೋಕ್ತ ಇಂದ್ರನು ಮಹಾ ಕಾಮುಕನೆಂದು ಚಿತ್ರಿತನಾಗಿದ್ದಾನೆ. ಅದರ ಛಾಯೆ ಋಗ್ವೇದದಲ್ಲಿ ಆಗಲೆ ಇದೆ, ಏಕೆಂದರೆ ಪೌಲೋಮಿಯು ಈ ಸೂಕ್ತದಲ್ಲಿ ಇಂದ್ರನ ಪತ್ನಿ ತಾನೊಬ್ಬಳೇ ಎಂದು ಹೇಳಿಕೊಳ್ಳುತ್ತಾಳಲ್ಲದೆ ಸಹಪತ್ನಿಯರನ್ನು ಅಟ್ಟಿಬಿಟ್ಟಿರುವುದಾಗಿಯೂ ಹೇಳುತ್ತಾಳೆ. ಇದನ್ನು ಗಮನಿಸಿ ಆಪಸ್ತಂಬನು ಈ ಸೂಕ್ತಕ್ಕೆ ಒಂದು ವಿನಿಯೋಗ ಹೇಳಿದ್ದಾನೆ : 'ಸಪತ್ನೀನಾಶನ'ಕ್ಕೆ ಈ ಸೂಕ್ತವನ್ನು ಬಳಸಬಹುದು, ಎಂದು. ಸೂರ್ಯನ ಆರಾಧನೆಯ ಭಾಗವಾಗಿ ಅದನ್ನು ಸೇರಿಸಿದ್ದಾನೆ ಎಂಬುದನ್ನು ಸಾಯಣನು ದಾಖಲಿಸಿದ್ದಾನೆ. ಆದರೆ ಅಷ್ಟೇ ಮುಖ್ಯವಾಗಿ ಸೂಕ್ತವು ಇಂದ್ರನ ಪೌರುಷವನ್ನು ವೈಭವೀಕರಿಸುತ್ತದೆ. ಕವಯಿತ್ರಿಯು ತಾನೇ ಶಚಿಯೆಂದು ಭಾವಿಸಿಕೊಂಡು ಸೂಕ್ತವನ್ನು ರಚಿಸಿರುವುದೊಂದು ವಿಶೇಷ. ಅದರಿಂದ ತನ್ನ ಸಪತ್ನಿಯರನ್ನು ಹಿಮ್ಮೆಟ್ಟಿಸಿದಳೋ ಇಲ್ಲವೋ ತಿಳಿಯದು. ಇಂದ್ರಾಣಿಗೆ ಸಪತ್ನಿಯರಿದ್ದಿರಬಹುದು, ಆದರೆ ಪೌಲೋಮಿಯ ಹೆಸರನ್ನು ಆವಾಹಿಸಿಕೊಂಡು ಸೂಕ್ತವನ್ನು ರಚಿಸಿರುವ ಕವಯಿತ್ರಿಗೆ ಸಪತ್ನಿಯರಿದ್ದರು ಎಂದು ನಾವು ಊಹಿಸಿಕೊಳ್ಳಬೇಕಾಗಿಲ್ಲ. ತಮಗಿಲ್ಲದ ಪ್ರೇಯಸಿಯರಿಗೆ ಪ್ರೇಮಕಾವ್ಯ ರಚಿಸುವ ಕವಿಗಳಿದ್ದರೆ ತನಗಿಲ್ಲದ ಸಪತ್ನಿಯರ ಬಗೆಗೆ ಪೌಲೋಮೀ ಕವನವನ್ನೇಕೆ ರಚಿಸಬಾರದು! ಇಂದ್ರನ ಪೌರುಷದ ಶ್ಲಾಘನೆ ಸಹಜವಾಗಿಯೇ ಗಮನಾರ್ಹ ಪ್ರಮಾಣದಲ್ಲಿ ತುಂಬಿಕೊಂಡಿದೆ. ಸೂರ್ಯನು ಉದಯಿಸುತ್ತಿದ್ದಂತೆಯೇ ಪೌಲೋಮಿಯ ಸ್ಥಿತಿ–ಸಂಪತ್ತು ಮುಗಿಲೆತ್ತರಕ್ಕೇರಿದೆ. ಸೂರ್ಯನ ಪ್ರಭೆಯಂತೆ ತನ್ನ ಜೀವನದಲ್ಲೊಂದು ಪ್ರಭೆ ಮೂಡಿದೆ : ತನ್ನ ಗಂಡನನ್ನು ಪೂರ್ತಿ ತನಗಾಗಿಯೇ ಪಡೆದುಕೊಂಡಿರುವುದೇ ಅವಳ ಜೀವನ ಪ್ರಭೆ (೧೦.೧೫೯.೧:ಉತ್ ಅಸೌ ಸೂರ್ಯಃ ಅಗಾತ್ ಉತ್ ಅಯಂ ಮಾಮಕಂ ಭಗಃ। ಅಹಂ ತತ್ ವಿದ್ವಲಾ ಪತಿಂ ಅಭಿ ಅಸಾಕ್ಷಿ ವಿಷಾಸಹಿಃ॥). ಇಂದ್ರನಂತಹವನ ಪತ್ನಿಗೆ ಉಂಟಾಗಬಹುದಾದ ವಿಹ್ವಲವನ್ನು ಕವಯಿತ್ರಿಯು ಆಳವಾಗಿ ಭಾವಿಸಿಕೊಂಡು ಈ ಸೂಕ್ತವನ್ನು ರಚಿಸಿದ್ದಾಳೆಂಬುದನ್ನು ನಾವು ಮರೆಯಬಾರದು. ಋಗ್ವೇದದ ಕಡೆಯ ಹಂತದಲ್ಲಿ ರಚಿತವಾದ ಸೂಕ್ತ ಇದು. ಬುಡಕಟ್ಟು ಸಮಾಜ ಎಂದೋ ಶಿಥಿಲವಾಗಿ ಹೋಗಿದ್ದಿತು. ಕುಟುಂಬಗಳಲ್ಲಿ ಇಂದ್ರನಂತಹ ಕಾಮುಕ ವ್ಯಕ್ತಿಗಳು ಇರಬಹುದಾಗಿದ್ದ ಸಾಧ್ಯತೆಯನ್ನು ನಾವು ಊಹಿಸಿಕೊಳ್ಳಬೇಕು. ನಮ್ಮ ಸಮಕಾಲೀನ ಸಂದರ್ಭದಲ್ಲಿ ಒಬ್ಬ ಕವಯಿತ್ರಿಗೆ ಇಂತಹ ಕವನವನ್ನು ಬರೆಯಬೇಕಾದ ಸಂದರ್ಭ ಒದಗಿ ಬರಬಾರದೆಂದೇನೂ ಇಲ್ಲ. ಶಚಿ ಪೌಲೋಮಿಯಂತೂ ಉತ್ಸಾಹ–ಉಲ್ಲಾಸಗಳ ಚಿಲುಮೆಯಾಗಿ ಹೋಗಿದ್ದಾಳೆ. ಏಕೆಂದರೆ ತಾನೀಗ ಕೌಟುಂಬಿಕವಾಗಿ ಬೆಟ್ಟದ ತುದಿಯಲ್ಲಿ ನಿಂತು ಗೆಲುವಿನ ಬಾವುಟ ಹಾರಿಸುತ್ತಿದ್ದಾಳೆ. "ನಾನು ಪತಾಕೆಯಂತೆ ಆಗಿದ್ದೇನೆ, ನಾನು ಶಿಖರವನ್ನೇರಿದ್ದೇನೆ, ನಾನು ನನ್ನ ಪತಿಯನ್ನು ಅ–ಯಿಂದ ಳ–ವರೆಗೆ ಚೆನ್ನಾಗಿ ಓದಬಲ್ಲೆ. ಗೆಲುವು ಸಾಧಿಸಿರುವ ನಾನು ಪತಿಯನ್ನು ನನ್ನ ಇಚ್ಛೆಯಂತೆ ನಡೆಯುವಂತೆ ಮಾಡಿಕೊಂಡಿರುವೆ." (೨ : ಅಹಂ ಕೇತುಃ ಅಹಂ ಮೂರ್ಧಾ ಅಹಂ ಉಗ್ರಾ ವಿವಾಚನೀ। ಮಮ ಇತ್ ಅನು ಕ್ರತುಂ ಪತಿಃ ಸೇಹಾನಾಯಾಃ ಉಪ ಆಚರೇತ್॥). ತಾನು 'ಮೂರ್ಧಾ' (ಶಿರಸ್ಸು) ಎಂದು ಭಾವಿಸುವಾಗ ತನ್ನ ಪಾತ್ರವು ಪ್ರಧಾನವಾಗಲಿದೆಯೆಂಬ ಸೂಚನೆ ಧ್ವನಿಸುತ್ತದೆ. ಅದನ್ನು ತನ್ನದೇ ರೀತಿಯಲ್ಲಿ ಸಾಯಣನು ಗುರುತಿಸಿದ್ದಾನೆ. ತಾನು ಮತ್ತು ತನ್ನವರು ಇನ್ನು ಉನ್ನತ ಪಥದಲ್ಲಿ ಸಾಗಬಹುದೆಂಬ ಭರವಸೆ ಅವಳಲ್ಲಿ ಮೂಡಿದೆ : "ನನ್ನ ಮಕ್ಕಳು ಶತ್ರುಗಳನ್ನು ಜಯಿಸುತ್ತಾರೆ (ಅಂದರೆ, ಈವರೆಗೆ ಅವರಿಗೂ ಮಂಕು ಕವಿದಿದ್ದಿತು), ನನ್ನ ಮಗಳು ಸಾಮ್ರಾಜ್ಞಿಯಂತಿರುತ್ತಾಳೆ. ಸ್ವತಃ ನಾನು ಅದ್ಭುತ ವಿಜಯಿಯಾಗಿದ್ದೇನೆ. ನನ್ನ ಮಾತೇ ನನ್ನ ಪತಿಗೆ ಯಶಸ್ಸು (ಅಂದರೆ, ಅವನು ನನ್ನ ಅಂಕೆಯಲ್ಲಿರುತ್ತಾನೆ, ನನ್ನ ಮಾತು ಮೀರಿ ನಡೆಯಲಾರ)." (೩ : ಮಮ ಪುತ್ರಾಃ ಶತ್ರುಹನಃ ಅಥೋ ಮೇ ದುಹಿತಾ ವಿರಾಟ್। ಉತ ಅಹಂ ಅಸ್ಮಿ ಸಂಜಯಾ ಪತ್ಯೌ ಮೇ ಶ್ಲೋಕಃ ಉತ್ತಮಃ॥). ಹೊಸ ಲೋಕವಂದು ಅವಳಿಗೆ ತೆರೆದುಕೊಂಡಿದೆ, ಮಾನಸಿಕ ಒತ್ತಡವಿಲ್ಲ, ಕುಟುಂಬದಲ್ಲಿ ಪ್ರಕಾಶಮಾನವಾದ

ಬೆಳಕು ಮೂಡುತ್ತಿದೆ. ಒಂದು ಯಜ್ಞ ಮಾಡಿ ಹವಿಸ್ಸು ನೀಡುವಂತೆ ಗಂಡನು ನಿಜ ಜೀವನದಲ್ಲಿ ಮಹತ್ವದ ಹೆಜ್ಜೆ ಇರಿಸಿದ್ದಾನೆ, ಅದರಿಂದಾಗಿ ಅವಳು ಪುಲಕಿತಳಾಗಿದ್ದಾಳೆ. "ಹವಿಸ್ಸು ನೀಡಿ ಇಂದ್ರನು ಕೃತಾರ್ಥನಾಗಿದ್ದಾನೆ (ಅಂದರೆ, ಮಹತ್ವದ ಕೊಡುಗೆ ನೀಡಿದ್ದಾನೆ; ಉಪಪತ್ನಿಯರನ್ನೆಲ್ಲಾ ತೊರೆಯುವುದು ಅಂತಹ ಗಣನೀಯವಾದ ತ್ಯಾಗ). ಅದರಿಂದಾಗಿ ಅವನ ಹೊಳಪು ಹೆಚ್ಚಿದೆ, ಉತ್ಕೃಷ್ಟನಾಗಿದ್ದಾನೆ. ಓ ದೇವತೆಗಳೆ, ನಾನು ನನ್ನ ಸಪತ್ನಿಯರನ್ನು ಅರ್ಪಿಸಿದ್ದೇನೆ, ಪ್ರತಿಯೊಬ್ಬ ಸಪತ್ನಿಯಿಂದಲೂ ಬಿಡುಗಡೆ ಹೊಂದಿ ನಿಸೂರಾಗಿದ್ದೇನೆ." ಮನಸ್ಸಿನ ಮೇಲಿನ ಹೊರೆ ಎಷ್ಟು ಭಾರವಾಗಿದ್ದಿತೆಂಬುದನ್ನು ಮತ್ತು ಅದು ಕಳೆದುಹೋದಾಗಿನ ಸಮಾಧಾನವನ್ನು ಈ ಮಂತ್ರವು ಚೆನ್ನಾಗಿ ನಿರೂಪಿಸುತ್ತದೆ. (೪ : ಯೇನ ಇಂದ್ರಃ ಹವಿಷಾ ಕೃತ್ವೀ ಅಭವತ್ ದ್ಯುಮ್ನೀ ಉತ್ತಮಃ। ಇದಂ ತತ್ ಅಕ್ರಿ ದೇವಾಃ ಅಸಪತ್ನಾ ಕಿಲ ಅಭೂವಂ॥). ಶಚಿಯನ್ನು ಮರೆತು ಒಬ್ಬ ಸಾಮಾನ್ಯ ಹೆಣ್ಣಿನ ಮನಸ್ಸನ್ನು ಒಳಹೊಕ್ಕು ನೋಡಿದರೆ ಸಪತ್ನಿಯರಿಲ್ಲದ ಭಾವದ ಇರುವಿಕೆಯ ಹುಮ್ಮಸ್ಸನ್ನು ಈ ಸೂಕ್ತವು ಎಷ್ಟು ಘನವಾಗಿ ನಿರೂಪಿಸಿದೆಯೆಂದು ತಿಳಿಯಬಹುದು. ಮುಕ್ತವಾದ ಹಕ್ಕಿಯು ಹಾರುವಂತೆ ಅವಳ ಮನಸ್ಸು ಹಗುರವಾಗಿ ತೇಲಾಡುತ್ತಿದೆ. "ಸಪತ್ನಿಯರನ್ನು ತೊಡೆದುಹಾಕಿ ನಾನೀಗ (ನನ್ನ ವಲ್ಲಭನಿಗೆ) ಏಕ ಪತ್ನಿಯಾಗಿರುವೆ. ಎಂತಹ ವಿಜಯ, ಎಂತಹ ಪರಾಕ್ರಮ ! ಬೇರೆ ಪತ್ನಿಯರ ವರ್ಚಸ್ಸು, ಸಂಪತ್ತು, ಎಲ್ಲವನ್ನೂ ಬುಡಮೇಲು ಮಾಡಿದ್ದೇನೆ. ಸ್ಥಿರವಾಗಿ ಕಾದಾಡಲು ಅಶಕ್ತರಾದ ಶತ್ರುಗಳನ್ನು ಹಿಮ್ಮೆಟ್ಟಿಸುವಂತೆ ನನ್ನ ಸಪತ್ನಿಯರನ್ನು ಭಗ್ನಗೊಳಿಸಿದ್ದೇನೆ." (೫ : ಅಸಪತ್ನಾ ಸಪತ್ನಘ್ನೀ ಜಯಂತೀ ಅಭಿಭೂವರೀ। ಆ ಅವೃಕ್ಷಂ ಅನ್ಯಾಸಾಂ ವರ್ಚಃ ರಾಧಃ ಅಸ್ಥೇಯಸಾಂ ಇವ॥). ಮಂತ್ರದಲ್ಲಿ "ಆ ಅವೃಕ್ಷಂ" ಎಂಬ ಪ್ರಯೋಗವು ಮನೋಜ್ಞವಾಗಿದೆ. ಮರವಾಗಿ ಬೆಳೆದಿದ್ದ ಜಿಗುಪ್ಸೆಯನ್ನು ಬುಡಸಮೇತ ಕಿತ್ತು ತುಂಡರಿಸಿರುವ ಅಮೋಘ ತೃಪ್ತಿ ಈ ಕುಟುಂಬಿನಿಯದು. ಸ್ಪರ್ಧಿಗಳಾಗಿದ್ದ ಎಲ್ಲ ಸಪತ್ನಿಯರನ್ನೂ ಹೀಗೆ ಮಣಿಸಿ ವೀರನಾದ ತನ್ನ ಪತಿಯೊಡನೆ ರಾರಾಜಿಸುವ ವಿಹಗ (ಪಕ್ಷಿ) ತಾನೆಂಬ ಸಂತಸ ಅವಳಲ್ಲಿ ವಿಜೃಂಭಿಸುತ್ತಿದೆ (೬ : ಸಂ ಅಜೈಷಂ ಇಮಾಃ ಅಹಂ ಸಪತ್ನೀಃ ಅಭಿಭೂವರೀ। ಯಥಾ ಅಹಂ ಅಸ್ಯ ವೀರಸ್ಯ ವಿರಾಜಾನಿ ಜನಸ್ಯ ಚ॥).

ಋಗ್ವೇದದ ಹಲವು ಸೂಕ್ತಗಳು ಉತ್ತಮ ಮಟ್ಟದ ಕವನಗಳೆಂಬುದಕ್ಕೆ ಈ ಸೂಕ್ತವು ಒಂದು ಒಳ್ಳೆಯ ನಿದರ್ಶನ. ಅತಿ ಪ್ರಾಚೀನರ ಕಾವ್ಯದಲ್ಲಿ ಎಂತೆಂತಹ ಸುಳುಹುಗಳಿವೆ ಎಂಬುದನ್ನು ತಿಳಿದು ಆಹ್ಲಾದವನ್ನು ಸವಿಯುವುದನ್ನು ಬಿಟ್ಟು ಋಗ್ವೇದವನ್ನು ಯಜ್ಞಕ್ಕೆ ಪೂರಕವಾದ ಅತಿ ಸಾಮಾನ್ಯ ಸಾಹಿತ್ಯವೆಂದು ಓದಿಕೊಳ್ಳುವುದು, ಇಲ್ಲವೆ ಅದರಲ್ಲಿ ಯಾರಿಗೂ ತಿಳಿಯಲಾಗದ ನಿಗೂಢಾರ್ಥ ಇದೆಯೆಂದು ಗಳಹುವುದು (ಅಂದರೆ, ವ್ಯರ್ಥಾಲಾಪ ಮಾಡುವುದು) ಶೋಚನೀಯ ಮನಃಸ್ಥಿತಿ ಎನಿಸುತ್ತದೆ. ವಿಮಾನಗಳನ್ನೋ ಅಂತರ-ಗ್ರಹ ಸಂಚಾರದ ಅದ್ಭುತ ವಾಹನಗಳನ್ನೋ ಋಗ್ವೇದದಲ್ಲಿ ಅರಸುವುದಂತೂ ಅತ್ಯಂತ ಹೀನಾಯ ಬಾಲಿಶತನವೆನ್ನದೆ ಇನ್ನೇನೆನ್ನಬೇಕು ! ಇಂದ್ರನ ಪತ್ನಿ ಶಚಿಯು ನಿಜಕ್ಕೂ ತನ್ನ ಪತಿ ಇಂದ್ರನಿಗೆ ದಾಟಲಾಗದ ಗೆರೆಯನ್ನು ಹಾಕಲು ಅಸಮರ್ಥಳಾದಳು, ಅವನ ಲಂಪಟತನವನ್ನು ಬಿಡಿಸಲಾರದೆ ನೊಂದಳು. ಈ ಸೂಕ್ತದ ಕವಯಿತ್ರಿಯು ತನ್ನ ಸಮಾಜದಲ್ಲಿ ಯಾರಿಗೂ ಸಪತ್ನೀಕಳಾದ ಶಚಿಯ ವ್ಯಥೆ ಬಾಧಿಸದಿರಲೆಂಬ ಆಸೆಯನ್ನು ಹೊತ್ತಿದ್ದಾಳೆ. ಕಳೆದ ೩೫೦೦ ವರ್ಷಗಳಲ್ಲಿ ಈ ಕವನದ ನಂತರ ಇಂತಹವು ಎಷ್ಟು ಬಂದುಹೋಗಿವೆಯೋ ತಿಳಿದವರಾರು ! ವ್ಯಕ್ತವಾಗದೆ ಉಳಿದುಹೋಗಿರುವ ಕವನಗಳಿಗಂತೂ ಲೆಕ್ಕವೇ ಇರಲಾರದು.

ಕಡೆಯ ಕವಯಿತ್ರಿ ಸಾರ್ಪರಾಜ್ಞೀ ಮೂರೇ ಮಂತ್ರಗಳಿರುವ ಒಂದು ಸೂಕ್ತದ (೧೦.೧೮೯) ಕರ್ತೃ. ಋಗ್ವೇದದಲ್ಲಿ ಈ ಸೂಕ್ತದ ನಂತರ ಇನ್ನೆರಡು ಸೂಕ್ತಗಳಿವೆ, ಅಷ್ಟೆ. ಸಾರ್ಪರಾಜ್ಞಿಗೆ (ಅಂದರೆ, ಸರ್ಪಗಳ ರಾಣಿಗೆ) ಕದ್ರು ಎಂಬ ಹೆಸರಿದೆ. ಸೂರ್ಯನನ್ನು ಕುರಿತ ಈ ಸೂಕ್ತದಲ್ಲಿ ಪ್ರತಿಮೆಗಳ ಬಳಕೆಯು ಒಂದು ವಿಶೇಷ. ಉಷಸ್ ಮತ್ತು ಸೂರ್ಯ ದಿನದ ಆರಂಭದಲ್ಲಿ ಒಬ್ಬರ ನಂತರ ಒಬ್ಬರು ಪ್ರತ್ಯಕ್ಷರಾಗುತ್ತಾರೆ. ಬೆಳಕು ಹರಿಯುವುದು ಮತ್ತು ಸೂರ್ಯೋದಯವಾಗುವುದು ಮತ್ತೊಂದು ದಿನಕ್ಕೆ ಪ್ರತಿನಿತ್ಯದ ನಾಂದಿ. ಸೂರ್ಯ ಹುಟ್ಟುವುದಕ್ಕೆ ಮುಂಚೆ ಕತ್ತಲು ಮಬ್ಬಾಗಿ ನಿಧಾನವಾಗಿ ಬೆಳಕು ಹರಿಯುತ್ತದೆ. ಆ ಸಮಯವು ಉಷಃಕಾಲ. ಅದಿಲ್ಲದೆಯೇ ಥಟಕ್ಕನೆ ಸೂರ್ಯನ ಕಿರಣಗಳು ಮೂಡುವುದಿಲ್ಲ. ಉಷಃಕಾಲವಿಲ್ಲದೆ ಸೂರ್ಯಕಿರಣಗಳು ನೇರವಾಗಿ ಮೂಡುವುದು ಚಂದ್ರನಲ್ಲಿ ಎಂದು ಹೇಳುತ್ತಾರೆ. ನಮ್ಮ ಸೂರ್ಯನು "ಮೂಡುವನು ಮತ್ತು ಕತ್ತಲೊಡನೆ ಜಗಳಾಡುವನು." ಆ ಜಗಳಕ್ಕೆ ಪೂರ್ವರಂಗವು ಉಷೋದೇವತೆಯಿಂದ ನಿರ್ಮಾಣವಾಗುತ್ತದೆ. ಸೂರ್ಯನು ಸದಾ ಅವಳನ್ನು ಹಿಡಿಯಲು ಯತ್ನಿಸುತ್ತಿರುತ್ತಾನೆ ಮತ್ತು ವಿಫಲನಾಗುತ್ತಾನೆ ಎಂದು ಋಗ್ವೇದದಲ್ಲಿ ಹಲವು ಬಾರಿ ಪ್ರಸ್ತಾಪಿಸಲಾಗಿದೆ. ಸಾರ್ಪರಾಜ್ಞಿಯು ಉಷಸ್ಸು ಸೂರ್ಯನ ತಾಯಿ ಎಂಬ ಪ್ರತಿಮೆಯನ್ನು ಬಳಸಿದ್ದಾಳೆ. ಉಷಸ್ಸು ಅವನಿಗೆ ಜನ್ಮ ನೀಡುವ ತಾಯಿ. ಅವಳಿಲ್ಲದೆ ಅವನ ಬರುವಿಕೆ ಇಲ್ಲ. ಅವನು ಬರುವಾಗ ಒಂದು ಬಣ್ಣ ಧರಿಸಿರುತ್ತಾನೆ ಮತ್ತು ನಂತರ ಅದನ್ನು ಬದಲಾಯಿಸಿಕೊಳ್ಳುತ್ತಾನೆ. ಚಲಿಸುವ (ಮಂತ್ರದಲ್ಲಿ ಇದನ್ನು 'ಗೌಃ' ಎಂಬ ಪದದಿಂದ ಸೂಚಿಸಲಾಗಿದೆ) ಸೂರ್ಯನನ್ನು ಬಹುವರ್ಣದವನೆಂದು ಬಣ್ಣಿಸಲು ಇದು ಕಾರಣ. ಅವನು ಉದಯಾಚಲವನ್ನು ಸಮೀಪಿಸುತ್ತಾನೆ. ಅಂದರೆ, ಪೃಥ್ವಿಯ ಮೇಲೆ ಬೆಳಕಿನ ಕಿರಣ ಹರಿಸಲಾರಂಭಿಸುತ್ತಾನೆ. ಪೂರ್ವ ದಿಗಂತದಲ್ಲಿ ಅವನು ಭೂಮಿತಾಯಿಯನ್ನು ಸ್ಪರ್ಶಿಸುತ್ತಾನೆ ಮತ್ತು ದ್ಯುಲೋಕದತ್ತ ಪಯಣವನ್ನು ಆರಂಭಿಸುತ್ತಾನೆ. ಆ ಪಯಣವು ಭೂಮಿತಾಯಿಯ ಬಳಿಯಿಂದ ದ್ಯುಲೋಕವೆಂಬ ಪಿತನ ಕಡೆಗೆ. (೧೦.೧೮೯.೧ : ಆ ಅಯಂ ಗೌಃ ಪೃಶ್ನಿಃ ಅಕ್ರಮೀತ್ ಅಸದತ್ ಮಾತರಂ ಪುರಃ। ಪಿತರಂ ಚ ಪ್ರಯನ್ ಸ್ವಃ॥). ಸೂರ್ಯನು ಕಾಣಿಸಿಕೊಳ್ಳುವ


Statement about ownership and other particulars about newspaper

**FORM IV**

**1. Place of publication : Bengaluru**

**2. Periodicity of its publication : Monthly**

**3. Printer's Name : R. S. Rajaram**

**Nationality : Indian**

**Address : Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001**

**4. Publisher's Name : R. S. Rajaram**

**Nationality : Indian**

**Address : Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001**

**5. Editor's Name : Dr. Siddanagouda Patil**

**Nationality : Indian**

**Address : Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001**

**6. Name and address of individuals who own the newspaper and partners and shareholders holding more than one percent of the total capital : Navakarnataka Publications (P) Ltd., Embassy Centre, Crescent Road P. B. No. 5159 Bengaluru - 560 001 (Sole Proprietors)**

**I, R. S. Rajaram, hereby declare that the particulars given above are true to the best of my knowledge and belief.**

Sd/-
R. S. Rajaram
Publisher

Date : 28-2-2015

ಮುಂಚಿನ ಉಷೋದೇವತೆ ಎಲ್ಲಿ ಹೋದಳು ? ಅವಳು ಗೋಚರಳಲ್ಲ, ಸೂರ್ಯನ ಪ್ರಭೆಯು ಅವಳನ್ನು ಮುಚ್ಚಿಹಾಕಿಬಿಡುತ್ತದೆ. ಆದರೆ ಎಲ್ಲೋ ಒಂದೆಡೆ ಅವಳು ಇರಬೇಕಲ್ಲವೆ ? ಅದನ್ನು ಕವಯಿತ್ರಿಯು ಎರಡನೆಯ ಮಂತ್ರದಲ್ಲಿ ಪ್ರಸ್ತಾಪಿಸುತ್ತಾಳೆ. ಸೂರ್ಯನು ಗೋಚರಿಸುವುದೆಂದರೆ ಜೀವತಳೆದು ಉಸಿರಾಡುವುದಕ್ಕೆ ಸಮಾನ. ಅವನ ಉಸಿರಾಟ ಆರಂಭವಾದ ಕೂಡಲೆ ಉಷೋದೇವತೆಯ (ಅಂದರೆ, ಸೂರ್ಯನ ಅಮ್ಮನ) ಉಸಿರು ಅಡಗುತ್ತದೆ. ಹಾಗೆ "ಮೃತಳಾದ" ಉಷಸ್ಸು ಅಗೋಚರವಾದ ಅಂತರಿಕ್ಷದಲ್ಲಿ ಸಂಚರಿಸುತ್ತಾಳೆ ಮತ್ತು ಸ್ವಸ್ಥಾನಕ್ಕೆ ಹಿಂದಿರುಗಿ ಮತ್ತೆ ಮಾರನೆಯ ದಿನ ಗೋಚರವಾಗುತ್ತಾಳೆ. ಆದ್ದರಿಂದ ನಿಜಾರ್ಥದಲ್ಲಿ ಅವಳು ಮೃತಳಾಗುವುದಿಲ್ಲ. ಮತ್ತು, ಸೂರ್ಯನು ತನ್ನ ದೀಪ್ತಿಯನ್ನು ಬೆಳಗುತ್ತಾ ನಿಧಾನವಾಗಿ ದ್ಯುಲೋಕದತ್ತ ಹೆಜ್ಜೆ ಹಾಕುತ್ತಾನೆ. ಅವನ ಗಂಭೀರ ನಡೆಯನ್ನು ಸೂಚಿಸಲು "ಮಹಿಷಃ" ಎಂಬ ಗುಣವಾಚಕವನ್ನು ಕವಯಿತ್ರಿ ನೀಡಿದ್ದಾಳೆ. ಸೂರ್ಯನು ಗಾಂಭೀರ್ಯದ ನಡೆ ಉಳ್ಳವನು ಎಂಬುದು ಅದರ ಇಂಗಿತ. (೨ : ಅಂತಃ ಚರತಿ ರೋಚನಾ ಅಸ್ಯ ಪ್ರಾಣಾತ್ । ಅಪ ಅನತೀ । ವಿ ಅಖ್ಯತ್ ಮಹಿಷಃ ದಿವಂ ॥). ಮಂತ್ರದ ತಾತ್ಪರ್ಯವನ್ನು ವಿವರಿಸಲು ಸಾಯಣನು ಪ್ರಾಣ, ನಾಡಿ, ಇತ್ಯಾದಿ ಪರಿಭಾಷೆಗೆ ಮೊರೆಹೋಗಿದ್ದಾನೆ. ಉಚ್ಛ್ವಾಸ ಮತ್ತು ನಿಃಶ್ವಾಸ ಎಂಬ ಪದಗಳನ್ನು ಉಪಯೋಗಿಸದೆ ಆ ಕ್ರಿಯೆಗಳನ್ನು ಪ್ರಸ್ತಾಪಿಸಿರುವುದು ಅವನ ವ್ಯಾಖ್ಯಾನದಲ್ಲಿದೆ. ಬಹುಶಃ ಪ್ರಾಣ, ಅಪಾನ, ನಾಡಿ, ಇವೆಲ್ಲಾ ಮಂತ್ರದಲ್ಲಿ ಹೊಂದುವುದಿಲ್ಲವೆನಿಸುತ್ತದೆ.

ಸೂರ್ಯನಿಂದಾಗಿ ಭೂಮಿಯ ಮೇಲಿನ ಎಲ್ಲ ವಸ್ತುಗಳೂ ದೀಪ್ತಿಯಿಂದ ಹೊಳೆಯುತ್ತವೆ. (ಎಲ್ಲ ಭಾಗಗಳು ಎಂಬುದನ್ನು ಸೂಚಿಸಲು ಕವಯಿತ್ರಿಯು "ಮೂವತ್ತು ಪ್ರದೇಶಗಳು" ಎಂಬ ಪ್ರಯೋಗ ಮಾಡಿದ್ದಾಳೆ). 'ಪ್ರದೇಶ' (ಧಾಮ) ಎನ್ನುವುದು ಮುಹೂರ್ತ, ಅಂದರೆ ಕಾಲದ ಮಾಪನದಲ್ಲಿನ ಒಂದು ಭಾಗ, ಎಂಬರ್ಥವನ್ನು ಹೊಂದಿದೆಯೆಂದು ಸಾಯಣ ವ್ಯಾಖ್ಯಾನಿಸಿದ್ದಾನೆ. "ಇಡೀ ಲೋಕವು ದೀಪ್ತಿಯಿಂದ ಕೂಡಿದೆ" ಎಂಬುದು ಮುಖ್ಯಾರ್ಥ.

ಮುಂದಿನ ಪ್ರತಿಮೆ ಸೂರ್ಯನನ್ನು ಒಂದು ಪಕ್ಷಿಯೊಡನೆ ಸಮೀಕರಿಸುವುದಾಗಿದೆ. ಆ ಪಕ್ಷಿಯನ್ನು ಭೂಮಿಯ ಮೇಲಿನ ಜನ ಸ್ತುತಿಸುತ್ತಿರುತ್ತಾರೆ. (೩ : ತ್ರಿಂಶತ್ ಧಾಮ ವಿ ರಾಜತಿ ವಾಕ್ ಪತಂಗಾಯ ಧೀಯತೇ । ಪ್ರತಿ ವಸ್ತೋಃ ಅಹ ದ್ಯುಭಿಃ ॥).

ಅನನ್ಯವಾದ ಕಾವ್ಯಾಂಶವು ಇಲ್ಲದಿದ್ದರೂ ಈ ಸೂಕ್ತದಲ್ಲಿ ಪ್ರತಿಮೆಗಳನ್ನು ಬಳಸಿ ಅರ್ಥ ಸೂಚಿಸಿರುವುದು ಒಂದು ಕಾವ್ಯವಿಶೇಷ ಎನ್ನಬಹುದು. ಋಗ್ವೇದದಲ್ಲಿ ೧೦೨೮ ಸೂಕ್ತಗಳಿವೆ, ಆದರೆ ಕರ್ತೃಗಳ ಪೈಕಿ ಬೆರಳೆಣಿಕೆಯಷ್ಟು ಮಂದಿ ಮಾತ್ರ ಕವಯಿತ್ರಿಯರು. ಅವರಲ್ಲಿ ಘೋಷಾ, ಅಪಾಲಾ ಮತ್ತು ಪೌಲೋಮಿಯರಂತಹ ಉಜ್ವಲ ಕವಯಿತ್ರಿಯರಿರುವುದು ಗಮನಾರ್ಹವಾಗಿದೆ.

ಕವಯಿತ್ರಿಯರಿಗೆ ನೇರವಾಗಿ ಸಂಬಂಧಿಸಿಲ್ಲದ ಒಂದೆರಡು ಸೂಕ್ತಗಳನ್ನು ಈ ಸಂದರ್ಭದಲ್ಲಿ ಪರಾಮರ್ಶಿಸುವುದು ಅನೌಚಿತ್ಯವೆನಿಸಲಾರದು. ಹತ್ತನೆಯ ಮಂಡಲದ ೧೬೨ನೆಯ ಸೂಕ್ತವು ಅಪಪ್ರಸವವನ್ನು ತಪ್ಪಿಸಬೇಕೆಂಬ ಆಶಯವನ್ನು ಹೊತ್ತಿರುವ ಸೂಕ್ತ. ಗರ್ಭರಕ್ಷಣೆಗಾಗಿ ಅಗ್ನಿಯನ್ನು ಬೇಡುವ ಈ ಸೂಕ್ತವು ರಕ್ಷೋಹಾ ಎಂಬುವನ ಕೃತಿಯೆಂದು ಹೇಳಲಾಗಿದೆ. ಇಲ್ಲಿ ಗರ್ಭಧಾರಣೆ ಮತ್ತು ಶಿಶುವಿನ ಜನನದಲ್ಲಿನ ಶರೀರಶಾಸ್ತ್ರದ ಅರಿವು ಹಾಗೂ ವಿಸ್ಮಯವು ಗೌಣವಾಗಿದ್ದು, ಜನನ ಸಮಯದಲ್ಲಿ ಶಿಶುವು ದುರಂತಕ್ಕೀಡಾಗಬಹುದಾದ ಭಯವು ಹೆಚ್ಚಿನ ಆದ್ಯತೆ ಪಡೆದಿದೆ. ಶರೀರದ ರಚನೆಯನ್ನು ಕುರಿತಾದಂತೆ ಋಗ್ವೇದದ ಕವಿಗಳು ಅತಿಮೂಢರೇನೂ ಆಗಿರಲಿಲ್ಲ ಎಂಬುದು ಮುಂದಿನ ಸೂಕ್ತದಿಂದ (೧೦.೧೬೩) ಸ್ಪಷ್ಟವಾಗುತ್ತದೆ. ಅದು ಯಕ್ಷ್ಮರೋಗ ನಿವಾರಣೆಯ ಉದ್ದೇಶವನ್ನು ಹೊಂದಿರುವ ಸೂಕ್ತ. ಅದರ ಕರ್ತೃ ವಿವೃಹಾ ಎಂಬುವನು. ಶರೀರದ ಭಾಗಗಳನ್ನು ಸಾಕಷ್ಟು ವಿವರವಾಗಿ ಹೆಸರಿಸಿರುವ ಈ ಸೂಕ್ತವು ಪ್ರಾಚೀನ ಮಾಂತ್ರಿಕತೆಯ ಛಾಯೆಯನ್ನು ಹೊಂದಿದೆ. ಇಂತಹ ಸೂಕ್ತಗಳು ಅಥರ್ವವೇದದಲ್ಲಿ ಹೇರಳವಾಗಿವೆ. ಪ್ರಾಚೀನ ಮಾಂತ್ರಿಕತೆಯೆಂದರೆ ಮಂತ್ರೋಚ್ಚಾರಣೆ ಅಥವಾ ಮಂತ್ರಶಕ್ತಿಯಿಂದ ಕೆಡುಕನ್ನು ತೊಡೆದುಹಾಕುವುದು ಮತ್ತು ಒಳಿತನ್ನು ಸಂಭಾಳಿಸುವುದು ಎಂದಲ್ಲ. ಪ್ರಕೃತಿ ನಿಯಮ, ಶರೀರಶಾಸ್ತ್ರದ ನಿಯಮ, ಇವುಗಳ ಸಾದ್ಯಂತ ತಿಳಿವಳಿಕೆ ಇಲ್ಲದ ಸಂದರ್ಭ ಇಂದಿಗೂ ಇದೆ. ಋಗ್ವೇದದ ಕಾಲದಲ್ಲಿ ಅಂತಹ ತಿಳಿವಳಿಕೆಯ ಕೊರತೆ ಇನ್ನೂ ಹೆಚ್ಚಿನ ಮಟ್ಟದ್ದಾಗಿದ್ದಿತು. ಆದರೂ ಶರೀರದ ಅಂಗಾಂಗಗಳ ಹೆಸರುಗಳನ್ನು ನಿರ್ದಿಷ್ಟವಾಗಿ ಪ್ರತ್ಯೇಕಿಸಿ ಹೇಳಿರುವುದು ಗಮನಾರ್ಹವಾಗಿದೆ. ಮಾಂತ್ರಿಕತೆಯು ವಸ್ತುನಿಷ್ಠ ವಾಸ್ತವವನ್ನು ಅನುಕರಿಸುವುದರ ಮುಖಾಂತರ ವಾಸ್ತವದ ಮೇಲೆ ಹತೋಟಿ ಸಾಧಿಸಿಕೊಳ್ಳ ಬಹುದೆಂಬ ತತ್ವದ ಆಧಾರವನ್ನು ಹೊಂದಿದೆ. ಮಳೆ ಇಲ್ಲದಾಗ "ಹುಯ್ಯೋ ಹುಯ್ಯೋ ಮಳೆರಾಯ" ಎಂದು ಹಾಡುತ್ತಾ ಗುಡುಗು, ಮಳೆ, ಮಳೆ ಸುರಿಯುವ ಪರಿ, ಇವನ್ನೆಲ್ಲಾ ಅನುಕರಿಸುವ ಆಚರಣೆಯು ಪ್ರಾಚೀನ ಮಾಂತ್ರಿಕತೆಯ ಒಂದು ನಿದರ್ಶನ. ಇದಲ್ಲದೆ ಇನ್ನೊಂದು ಮಾಂತ್ರಿಕ ವಿಧಾನವಿದೆ; ಅವನ್ನು ಅಥರ್ವವೇದದಲ್ಲಿ ಬಹುವಾಗಿ ಮತ್ತು ಋಗ್ವೇದದಲ್ಲಿ ಅಲ್ಲಲ್ಲಿ ಕಾಣುತ್ತೇವೆ. ರಾಜಯಕ್ಷ್ಮವನ್ನು ಹೋಗಲಾಡಿಸುವ ಉದ್ದೇಶ ಹೊಂದಿರುವ ಒಂದು ಋಗ್ವೇದ ಸೂಕ್ತವನ್ನು ಪರಿಚಯಿಸಿಕೊಳ್ಳುವಾಗ ನಾವದನ್ನು ಹಿಂದೆಯೇ ಪ್ರಸ್ತಾಪಿಸಿದ್ದೇವೆ. ಅದೇ ಮಾದರಿಯ ಸೂಕ್ತ ಇದು (೧೦.೧೬೩) ಸಹ. ಕ್ಷಯರೋಗ ನಿವಾರಣೆ ಇಲ್ಲಿಯ ಆಕಾಂಕ್ಷೆ. ನಿವಾರಣೆಯ ವಿಧಾನ ಬಹಳ ಸರಳವಾದದ್ದು : "ನೀನು ಹೋಗು, ರೋಗಿಗೆ ತ್ರಾಸ ಉಂಟುಮಾಡಬೇಡ; ಶರೀರದ ಭಾಗಗಳಿಂದ ಕ್ರಮೇಣ ಇಲ್ಲವಾಗುತ್ತಾ ಹೋಗು," ಹೀಗೆ ಆಜ್ಞೆ ನೀಡುವುದಷ್ಟೆ ರೋಗನಿವಾರಣ ಕ್ರಿಯೆ. ಪ್ರಸ್ತುತ ಸೂಕ್ತದಲ್ಲಿ ಶರೀರದ ಯಾವ ಭಾಗಗಳಿಂದ ಕ್ಷಯ ರೋಗವು ಕ್ಷಯಿಸುತ್ತಾ ಹೋಗಬೇಕೆಂಬುದನ್ನು ಪಟ್ಟಿ ಮಾಡಲಾಗಿದೆ. ಅದರಿಂದಾಗಿ ಶರೀರದ ಭಾಗಗಳ ಉಲ್ಲೇಖವು ನಮಗೆ ಲಭ್ಯವಾಗುತ್ತದೆ : "ರೋಗಿಷ್ಠನೆ, ನಿನ್ನ ಕಣ್ಣುಗಳಿಂದ, ಮೂಗು ಹೊಳ್ಳೆಗಳಿಂದ, ಕಿವಿಗಳಿಂದ, ಗಲ್ಲದಿಂದ, ತಲೆಯಿಂದ, ಮಿದುಳಿನಿಂದ, ನಾಲಿಗೆಯಿಂದ, ರೋಗವನ್ನು ಓಡಿಸುತ್ತಿದ್ದೇನೆ" ಎಂದು ಮೊದಲ ಮಂತ್ರ ಹೇಳುತ್ತದೆ. ಮುಂದಿನ ಮಂತ್ರದಲ್ಲಿ (೨) ಕುತ್ತಿಗೆಯ ಮಾಂಸಖಂಡಗಳು ಮತ್ತು ಕುತ್ತಿಗೆ, ಎದೆಗೂಡಿನ ಮೂಳೆಗಳು, ಮೂಳೆಗಳ ಸಂಧಿಗಳು, ಬೆನ್ನುಹುರಿ, ಭುಜ ಮತ್ತು ಅದರ ಕೆಳಗಿನ ಕೈ ಭಾಗಗಳು ಹೆಸರಿಸಲಾಗಿವೆ. ಆಮೇಲೆ (೩) ಜಠರ (ಆಂತ್ರೇಭ್ಯಃ), ಗುದಸ್ಥಾನ, ಹೃದಯ, ಮೂತ್ರಪಿಂಡಗಳು (ಮತಸ್ನಾಭ್ಯಾಂ), ಪಿತ್ತಜನಕಾಂಗ (ಯಕ್ನಃ=ಯಕೃತ್), ಗುಲ್ಮ (ಪ್ಲಾಶಿಭ್ಯಃ) ಹೆಸರಿಸಲಾಗಿವೆ. ನಾಲ್ಕನೆಯ ಮಂತ್ರದಲ್ಲಿ ತೊಡೆಗಳು, ಮಂಡಿಗಳು (ಅಷ್ಠೀವದ್ಭ್ಯಾಂ), ಹಿಮ್ಮಡಿಗಳು (ಪಾರ್ಷ್ಣಿಭ್ಯಾಂ), ಪಾದಗಳು, ಸೊಂಟ, ನಡು, ಇವೆಲ್ಲಾ ಪ್ರಸ್ತಾಪಿಸಲ್ಪಟ್ಟಿವೆ. ನಂತರ ಮೂತ್ರ ವಿಸರ್ಜನಾಂಗ (ಮೇಹನಾತ್ ವನಂಕರಣಾತ್), ಕೂದಲು, ಉಗುರುಗಳು, ಉಲ್ಲೇಖಗೊಂಡಿವೆ (ಮಂತ್ರ ೫). ಹೀಗೆ, "ಪ್ರತಿಯೊಂದು ಅಂಗದಿಂದಲೂ, ಕೂದಲಿನಿಂದಲೂ, ಮೂಳೆಯ ಸಂಧಿಗಳಿಂದಲೂ, ಇಡಿಯಾಗಿ ನಿನ್ನಿಂದಲೂ ಯಕ್ಷ್ಮವನ್ನು ತೊಲಗಿಸುತ್ತೇನೆ (ಮಂತ್ರ ೬)" ಎನ್ನುತ್ತಾ ಸೂಕ್ತವು ಮುಕ್ತಾಯವಾಗಿದೆ. ಒಟ್ಟಿನಲ್ಲಿ, ಮಾನವ ಶರೀರದ ಭಾಗಗಳನ್ನು ಪ್ರತ್ಯೇಕಿಸಿ ಗುರುತಿಸುವ ಸಾಮರ್ಥ್ಯವನ್ನು ಪಡೆಯುವ ಪ್ರಕ್ರಿಯೆ ಅಂದಿಗೇ ಜಾರಿಯಲ್ಲಿತ್ತು.

ಶರೀರದ ಭಾಗಗಳನ್ನು ಹೆಸರಿಸುವುದರಿಂದಲೇ ಶಿಶುಜನನದ ಬಗೆಗಿನ ಸರ್ವಸ್ವವೂ ತಿಳಿಯುವುದಿಲ್ಲ ಮತ್ತು ಉಂಟಾಗಬಹುದಾದ ದುರಂತವನ್ನು ತಡೆಯಲಾಗುವುದಿಲ್ಲ. ಆಗ ಅಗ್ನಿಯಂತಹ ದೇವತೆಗೆ ಮೊರೆಹೋಗಿ ಅನಾಹುತವನ್ನು ತಪ್ಪಿಸುವಂತೆ

ಕೇಳಿಕೊಳ್ಳುವುದೊಂದೇ ಉಳಿದ ಮಾರ್ಗ. ಅದನ್ನು ಪ್ರಸ್ತುತ ಸೂಕ್ತದಲ್ಲಿ (೧೦.೧೬೨) ಮಾಡಲಾಗಿದೆ. ಮೊದಲೆರಡು ಮಂತ್ರಗಳು ಗರ್ಭಿಣಿಯನ್ನುದ್ದೇಶಿಸಿ ಹೇಳಲಾಗಿವೆ : "ಅಗ್ನಿಯು ರಕ್ಕಸರನ್ನು ಹನನ ಮಾಡುವಂಥವನು. ಅವನನ್ನು ನಾನೀಗ ಕೇಳಿಕೊಳ್ಳುವೆ. ರೋಗರೂಪದಲ್ಲಿ ನಿನ್ನ ಗರ್ಭಕ್ಕೆ ಲಗ್ಗೆಯಿಟ್ಟಿರುವ ರಕ್ಕಸನನ್ನು ಅವನು ನಾಶಮಾಡಲಿ" (೧ : ಬ್ರಹ್ಮಣಾ ಅಗ್ನಿಃ ಸಂವಿದಾನಃ ರಕ್ಷೋಹಾ ಬಾಧತಾಂ ಇತಃ। ಅಮೀವಾ ಯಃ ತೇ ಗರ್ಭಂ ದುರ್ನಾಮಾ ಯೋನಿಂ ಆಶಯೇ ॥). ಗರ್ಭದಲ್ಲಿರುವ ಮಗುವು ಅಗ್ನಿಯದೇ. (ಕಾಮಾಗ್ನಿಯ ಫಲ ಅದೆಂದು ಕವಿಯ ಆಶಯವಿದ್ದೀತು). ಆದ್ದರಿಂದ ರೋಗವು ಮಗುವಿಗೆ ಹಾನಿಯುಂಟುಮಾಡಿದರೆ ಅದು ಅಗ್ನಿಯ ಮಾಂಸವನ್ನು ನಾಶಗೊಳಿಸಿದಂತೆಯೇ ಸರಿ. ಆದ್ದರಿಂದ ಮಗು ಮತ್ತು ತಾಯಿಯ ಗರ್ಭವನ್ನು ಅಗ್ನಿಯು ಸಂರಕ್ಷಿಸಬೇಕು. (೨ : ...ಅಗ್ನಿಃ ತಂ ಬ್ರಹ್ಮಣಾ ಸಹ ನಿಃ ಕ್ರವ್ಯಾದಂ ಅನೀನಶತ್ ॥). ರೋಗವನ್ನು ನಾಶಪಡಿಸುವಂತೆ ಅಗ್ನಿಯನ್ನು ಕೇಳಿಕೊಂಡ ನಂತರ ತಾಯಿಯ ಗರ್ಭವನ್ನು ದುಷ್ಟಶಕ್ತಿಗಳಿಂದ ರಕ್ಷಿಸಬೇಕೆಂದು ಮುಂದಿನ ಎರಡು ಮಂತ್ರಗಳಲ್ಲಿ ಕೋರಲಾಗಿದೆ. "ಗರ್ಭದಲ್ಲಿ ಇರಿಸಲಾಗಿರುವ ರೇತಸ್ಸನ್ನು ಕೇಡು ಬಯಸುವ ಶಕ್ತಿಯು ಹಾನಿಗೊಳಿಸಬಹುದು ಮತ್ತು ಬೆಳೆಯಬೇಕಾದ ಮಗುವನ್ನು ಕೊಲ್ಲಬಹುದು. ಅಂತಹ ದುಷ್ಟಶಕ್ತಿಯನ್ನು ನಾವು ಉಚ್ಚಾಟಿಸುತ್ತೇವೆ" (೩ : ಯಃ ತೇ ಹಂತಿ ಪತಯಂತಂ ನಿಷತ್ಸ್ನುಂ ಯಃ ಸರೀಸೃಪಂ। ಜಾತಂ ಯಃ ತೇ ಜಿಘಾಂಸತಿ ತಂ ಇತಃ ನಾಶಯಾಮಸಿ ॥). ಇಲ್ಲಿ 'ಸರೀಸೃಪ' ಎಂದರೆ "ಬೆಳೆಯುವ ಸ್ವಭಾವವಿರುವ" ರೇತಸ್ಸು ಎಂದರ್ಥ. ನಾಲ್ಕನೆಯ ಮಂತ್ರವು ಗ್ರಿಫಿತ್‌ನಂತಹವರಿಗೆ ಮುಜುಗರ ಉಂಟುಮಾಡಿರುವುದರಿಂದ ಅವನು ಇಡೀ ಸೂಕ್ತವನ್ನು ಅನುಬಂಧದ ಭಾಗಕ್ಕೆ ತಳ್ಳಿಬಿಟ್ಟಿದ್ದಾನೆ. ಋಗ್ವೇದದ ಕವಿಗೆ ಅಂತಹ ಪ್ರಸಂಗವನ್ನು ಹೇಳುವುದು ಅಸಭ್ಯವೆನಿಸಿಲ್ಲ. "ಆ ದುಷ್ಟಶಕ್ತಿ ಇದೆಯಲ್ಲಾ ಅದು ಗರ್ಭಿಣಿಯ ಕಾಲುಗಳನ್ನು ಅಗಲಿಸಿ ದಂಪತಿಗಳ ನಡುವೆ ತನ್ನ ಪ್ರವೇಶ ಮಾಡಲು ಮುನ್ನುಗ್ಗುತ್ತದೆ, ಮತ್ತು ಯೋನಿಯಲ್ಲಿ ಪತಿಯು ಇರಿಸಿರುವ ರೇತಸ್ಸನ್ನು ನೆಕ್ಕಿಹಾಕಿಬಿಡಲು ಹವಣಿಸುತ್ತದೆ. ಅಂತಹ ದುಷ್ಟಶಕ್ತಿಯನ್ನು ನಾವು ನಾಶಗೈಯ್ಯುತ್ತೇವೆ" (೪ : ಯಃ ತೇ ಊರೂ ವಿಹರತಿ ಅಂತರಾ ದಂಪತೀ ಶಯೇ। ಯೋನಿಂ ಯಃ ಅಂತಃ ಆರೇಳ್ಹಿ ತಂ ಇತಃ ನಾಶಯಾಮಸಿ ॥).

ಋಗ್ವೇದದ ಎಷ್ಟೋ ಶತಮಾನಗಳ ತರುವಾಯದಲ್ಲಿ ಬಂದ ಪುರಾಣ ಕತೆಗಳಲ್ಲಿ ಸ್ತ್ರೀಯ ಮಾನಹಾನಿ ಮಾಡುವ ರಾಕ್ಷಸ ಶಕ್ತಿಗಳು ವಿವಿಧ ವೇಷಗಳಲ್ಲಿ ಅವಳನ್ನು ಕೂಡಿಕೊಳ್ಳುತ್ತವೆ. (ಅಂಥವರಿಗೆ ಬಹುಶಃ ಇಂದ್ರನೇ ಮಾರ್ಗದರ್ಶಿ. ಆದರೆ ಅವನು ಋಗ್ವೇದದ ಇಂದ್ರನಲ್ಲ, ನಂತರದ ಪೌರಾಣಿಕ ಪಾತ್ರದಲ್ಲಿರುವ ಇಂದ್ರ). ಹೀಗೆ "ವೇಷಮರೆಸಿ ಬಂದು ಮಹಿಳೆಯ ಗರ್ಭಕ್ಕೆ ಹಾನಿಯುಂಟುಮಾಡುವ ದುಷ್ಟಶಕ್ತಿಗಳನ್ನು ನಾವು ಸಂಹಾರ ಮಾಡುತ್ತೇವೆ" ಎಂಬ ಆಶ್ವಾಸನೆಯನ್ನು ಗರ್ಭಿಣಿಗೆ ನೀಡಲಾಗಿದೆ. ವೇಷಮರೆಸಿ ಬರುವವನು ಸೋದರನಂತೆ, ಪತಿಯಂತೆ, ಅಥವಾ ಪ್ರೇಮಿಯಂತೆ ಕಾಣಿಸಿಕೊಳ್ಳಬಹುದು. (೫ : ಯಃ ತ್ವಾ ಭ್ರಾತಾ ಪತಿಃ ಭೂತ್ವಾ ಜಾರಃ ಭೂತ್ವಾ ನಿಪದ್ಯತೇ। ಪ್ರಜಾಂ ಯಃ ತೇ ಜಿಘಾಂಸತಿ ತಂ ಇತಃ ನಾಶಯಾಮಸಿ ॥). ಗರ್ಭಿಣಿಯನ್ನು ಮೋಸಗೊಳಿಸಲು ಬರುವ ದುಷ್ಟಶಕ್ತಿಯು ಆಕೆ ನಿದ್ರಿಸುತ್ತಿರುವಾಗ ಕತ್ತಲಲ್ಲಿ ಬಂದು ಅವಳೊಡನೆ ಕೂಡಿಕೊಳ್ಳುವ ಸಂಭವವೂ ಇದೆ. ಅದು ಗರ್ಭದ ನಾಶಕ್ಕೆ ಕಾರಣವಾಗುತ್ತದೆ. ಅಂತಹ ಶಕ್ತಿಯನ್ನು ನಾಶಮಾಡುವುದಾಗಿ ಹೇಳುತ್ತಾ ಸೂಕ್ತವು ಅಂತ್ಯವಾಗುತ್ತದೆ. (೬ : ಯಃ ತ್ವಾ ಸ್ವಪ್ನೇನ ತಮಸಾ ಮೋಹಯಿತ್ವಾ ನಿಪದ್ಯತೇ। ...ತಂ ಇತಃ ನಾಶಯಾಮಸಿ ॥).

ಗರ್ಭಿಣಿಯೊಬ್ಬಳಿಗೆ ಇರಬಹುದಾಗಿದ್ದ ಅನಿರೀಕ್ಷಿತ ಹಾನಿ, ಅದಕ್ಕೆ ಅಗೋಚರ ಶಕ್ತಿಗಳ ಕೈವಾಡವೇ ಕಾರಣವೆಂಬ ಭಾವನೆ, ಅಂತಹ ಶಕ್ತಿಗಳನ್ನು ತಾವು ನಿಗ್ರಹಿಸಬೇಕೆಂಬ ಆಕಾಂಕ್ಷೆ ಮತ್ತು ಅದಕ್ಕೆ ತಾವು ಸಮರ್ಥರೆಂಬ ಭರವಸೆ, ಹೀಗೆ ಅನಿಶ್ಚಿತತೆಯಿಂದ ಮೂಡುವ ಸವಾಲನ್ನು ಎದುರಿಸುವುದಾಗಿ ಋಗ್ವೇದದ ಕವಿಯು ಈ ಸೂಕ್ತದಲ್ಲಿ ಅಭಿವ್ಯಕ್ತಿಸಿದ್ದಾನೆ. ಋಗ್ವೇದದ "ಋಷಿಗಳು" ಸರ್ವಜ್ಞರು ಮತ್ತು ಸರ್ವಶಕ್ತರು ಎಂಬ ತಪ್ಪು ಕಲ್ಪನೆಯನ್ನು ಆಧುನಿಕ ಮನಸ್ಸುಗಳಲ್ಲಿ ಅಂಕುರಿಸುವಂತೆ ಮಾಡಲು ಹವಣಿಸುವ ಜಡ್ಡುಮನಸ್ಸಿನ ವಿದ್ವಾಂಸರು ಇಂತಹ ಸೂಕ್ತಗಳನ್ನು ಬಿಚ್ಚುಮನಸ್ಸಿನಿಂದ ಅಧ್ಯಯನ ಮಾಡಿ ವ್ಯಾಖ್ಯಾನಿಸಿಕೊಳ್ಳುವುದು ಆರೋಗ್ಯಕರ. ಋಗ್ವೇದದ ಕವಿಯ ಆತಂಕ, ಭಯ, ಹತಾಶೆ, ಇವೆಲ್ಲವೂ ಅಸಹಜವಾದುವೇನಲ್ಲ. ಇಂದಿನ ಆಕಸ್ಮಿಕಗಳಿಗೆ ಹೋಲಿಸಿದರೆ ಅಂದಿನ ಆಕಸ್ಮಿಕಗಳು ಇನ್ನೂ ಗಾಢವಾಗಿದ್ದುವೆಂಬುದನ್ನು ತಿಳಿಯವುದು ಉತ್ತಮ.

ದುಃಸ್ವಪ್ನವು ಬಾಧಿಸದಿರಲೆಂದು ಏನೋ ಭರವಸೆಗಳನ್ನು ಕೊಟ್ಟುಕೊಂಡು ತನ್ನನ್ನು ತಾನು ಹುರಿದುಂಬಿಸಿಕೊಳ್ಳುವ ಕವಿಯನ್ನು ಕೂಡ ನಾವು ಋಗ್ವೇದದಲ್ಲಿ ಕಾಣಬಹುದು. ರಾಮ, ಸ್ಕಂದ (ಷಣ್ಮುಖ), ಹನುಮಂತ, ಗರುಡ ಮತ್ತು ಭೀಮ, ಇವರನ್ನು ನೆನೆಯುತ್ತಾ ಮಲಗಿದವರಿಗೆ ದುಃಸ್ವಪ್ನದ ಪೀಡೆ ಬಾಧಿಸುವುದಿಲ್ಲವೆಂದು ಆಶ್ವಾಸನೆ ನೀಡುವ ಸಂಸ್ಕೃತ ಶ್ಲೋಕವೊಂದಿದೆ. ಋಗ್ವೇದದ ಕವಿಗಳಿಗೆ ರಾಮ ಇತ್ಯಾದಿಗಳು ತಿಳಿದಿರಲಿಲ್ಲ. ಆದ್ದರಿಂದ ಅವರು ತಮ್ಮ ಮನಸ್ಸುಗಳ ಯಜಮಾನನನ್ನು ದೂರ ಹೊರಟುಹೋಗೆಂದು ಆಗ್ರಹಿಸುತ್ತಾರೆ; ಜೀವಂತವಾದ ಮನಸ್ಸು ಬಹುವಿಧವಾದುದೆಂಬ ಗ್ರಹಿಕೆ ಅವರಿಗಿದೆ. ಪ್ರಚೇತಸ್ ಎಂಬುವನದೆನ್ನಲಾದ ಒಂದು ಸೂಕ್ತವು (೧೦.೧೬೪) ಇದನ್ನು ಅಭಿವ್ಯಕ್ತಿಸಿದೆ (೧ : ಅಪೇಹಿ ಮನಸಃ ಪತೇ ಅಪ ಕ್ರಾಮ ಪರಃ ಚರ। ಪರಃ ನಿರ್ಋತ್ಯೈ ಆ ಚಕ್ಷ್ವ ಬಹುಧಾ ಜೀವತಃ ಮನಃ ॥). ಹಾಗೆ ದುಗುಡಗಳಿಲ್ಲದ ಮನಸ್ಸು ಎಷ್ಟು ವರಪ್ರದವಾದುದೆಂದು ಕವಿಯು ಅದನ್ನು ಅರಸುತ್ತಾನೆ (೨ : ಭದ್ರಂ ವೈ ವರಂ ವೃಣತೇ ಭದ್ರಂ ಯುಂಜಂತಿ ದಕ್ಷಿಣಂ). ತಿಳಿದೋ ತಿಳಿಯದೆಯೋ ತಾವು ಎಸಗಿರಬಹುದಾದ ಅಕೃತ್ಯಗಳಿಂದಾಗಿ ಮನಸ್ಸಿಗೆ ಕ್ಲೇಶವುಂಟಾಗಿದೆ, ಅಂತಹ ಅಕೃತ್ಯಗಳನ್ನು ಅಗ್ನಿಯು ದೂರಕ್ಕೆ ತೊಲಗಿಸಬೇಕೆಂಬುದು ಕವಿಯ ಆಶಯ (೩ : ಯತ್ ಆಶಸಾ ನಿಃಶಸಾ ಅಭಿಶಸಾ ಉಪಾರಿಮ ಜಾಗ್ರತಃ ಯತ್ ಸ್ವಪಂತಃ। ಅಗ್ನಿಃ ವಿಶ್ವಾನಿ ಅಪ ದುಷ್ಕೃತಾನಿ ಅಜುಷ್ಟಾನಿ ಆರೇ ಅಸ್ಮಾತ್ ದಧಾತು ॥).

ಋಗ್ವೇದದ ಕವಿಗಳ ಮನಸ್ಸನ್ನು ನಾವು ಹೊಕ್ಕಾಗ ವಿಭಿನ್ನವಾದ ಕಾಲ–ದೇಶ–ಮನಸ್ಸುಗಳ ಪರಿಚಯ ಎಷ್ಟು ಆಳವಾಗಿ ದೊರೆಯುತ್ತದೆಂಬುದು ಇಂತಹ ಸೂಕ್ತಗಳಿಂದ ತಿಳಿದುಬರುತ್ತದೆ. ಅದನ್ನು ಮಾಡದೆ ನಿಗೂಢತೆಯನ್ನು ಋಗ್ವೇದಕ್ಕೆ ಅಂಟಿಸಿ ಹಾದಿತಪ್ಪಿಸುವ ಪಂಡಿತರು ವೈದಿಕ ಋಷಿಗಳಿಗೆ ಅಪಚಾರ ಮಾಡುತ್ತಾರೆ, ಅಂದಿನ ನೈಜ ಸಂದರ್ಭವನ್ನು ತಿಳಿಯದೆ ಶುಷ್ಕ ಪಾಂಡಿತ್ಯದಿಂದ ಮುಗ್ಗರಿಸುತ್ತಿರುತ್ತಾರೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

## ವಸು ಮಳಲಿ ನಿಧನ



ಸಂವೇದನಾಶೀಲ ಮನಸಿನ, ಕ್ರಿಯಾಶೀಲ ವ್ಯಕ್ತಿತ್ವದ ಚಿಂತಕಿ, ಉಪನ್ಯಾಸಕಿ ಡಾ॥ ವಸು ಮಳಲಿ ನಿಧನರಾಗಿದ್ದಾರೆ. ರಾಜ್ಯದ ವೈಚಾರಿಕ ಲೋಕಕ್ಕೆ, ಪ್ರಗತಿಪರ ಚಳುವಳಿಗೆ ತಮ್ಮ ಚಿಂತನೆ ಹಾಗೂ ನಿರಂತರ ಚಟುವಟಿಕೆಗಳ ಮೂಲಕ ಅಪಾರ ಕಾಣಿಕೆ ಸಲ್ಲಿಸಿದ್ದ ವಸು ನಿಧನ ಆಘಾತ ತಂದಿದೆ. ಎಡಪಂಥೀಯ ಚಳುವಳಿಗಳ ಜೊತೆ ನಿಕಟವಾದ ಸಂಪರ್ಕವಿರಿಸಿಕೊಂಡಿದ್ದ ಅವರು ಇತಿಹಾಸ, ಸಾಹಿತ್ಯ ಹಾಗೂ ಸಾಂಸ್ಕೃತಿಕ ವಿಷಯಗಳಲ್ಲಿ ವಿಶೇಷ ಆಸಕ್ತಿ ಹೊಂದಿದ್ದರು. ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಪ್ರಾಧ್ಯಾಪಕಿಯಾಗಿದ್ದ ಅವರು ತಮ್ಮ ಅಂಕಣ ಬರಹಗಳ ಮೂಲಕ, ಸಾಮಾಜಿಕ ಚಳುವಳಿಗಳಲ್ಲಿ ಭಾಗವಹಿಸುವ ಮೂಲಕ ನಾಡಿನಾದ್ಯಂತ ಚಿರಪರಿಚಿತರಾಗಿ ಆತ್ಮೀಯ ಬಳಗವನ್ನು ಹೊಂದಿದ್ದರು. ಕಿರಿಯ ವಯಸ್ಸಿನಲ್ಲಿ ನಿಧನರಾದ ಡಾ॥ ವಸು 'ಹೊಸತು' ಬಳಗದ ಬರಹಗಾರರಲ್ಲಿ ಒಬ್ಬರಾಗಿದ್ದರು. ಪ್ರಗತಿಪರ ಮನೋಭಾವದ ಡಾ॥ ವಸು ನಿಧನಕ್ಕೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗ ನೋವಿನಿಂದ ಅಂತಿಮ ನಮನಗಳನ್ನು ಸಲ್ಲಿಸುತ್ತದೆ.

## ಸ್ವಾತಂತ್ರ್ಯಾನಂತರದ ಭಾರತ – ೧೫

# ಮೂರನೇ ಸಹಸ್ರಮಾನದ ಪ್ರಾರಂಭ – ಭಾರತದಲ್ಲಿ ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ

ಸಿ. ಆರ್. ಕೃಷ್ಣರಾವ್

**ಮೂ**ರನೇ ಸಹಸ್ರಮಾನದ ಪ್ರಾರಂಭ ಯಾವಾಗ? ೨೦೦೦ವೇ, ೨೦೦೧ದೇ. ಈ ಬಗ್ಗೆಯೇ ಸಾಕಷ್ಟು ವಾದವಿವಾದಗಳಿದ್ದುವು. ಅದೇನೇ ಇರಲಿ ಮೂರನೇ ಸಹಸ್ರಮಾನದ ಪ್ರಾರಂಭ. ಹೊಸ ಇಪ್ಪತ್ತೊಂದನೇ ಶತಮಾನ ಭಾರತದ ಮಟ್ಟಿಗೆ ಸಮ್ಮಿಶ್ರ ಸರಕಾರದ ಯುಗದ ಪ್ರಾರಂಭ. ದೇಶೀಯವಾಗಿ, ಅಂತರರಾಷ್ಟ್ರೀಯವಾಗಿ ಅತ್ಯಂತ ಮುಹತ್ವಪೂರ್ಣ ಘಟನೆಗಳಿಂದ ಕೂಡಿದ್ದುದು ಇಪ್ಪತ್ತನೆಯ ಶತಮಾನ. ಒಂದು ನೂರು ವರ್ಷಗಳಲ್ಲಿ ಜಗತ್ತು ಕಂಡ ಬೆಳವಣಿಗೆಗಳು ಅಪಾರ. ವಿಜ್ಞಾನ ತಂತ್ರಜ್ಞಾನ ತಂದ ಬದಲಾವಣೆಗಳು ಒಂದು ತೆರನಾದುದಾದರೆ, ರಾಜಕೀಯ ಬದಲಾವಣೆಗಳು ಪ್ರಪಂಚದ ಚಹರೆಯನ್ನೇ ಬದಲಾಯಿಸಿದವು. ಎರಡು ಮಹಾಯುದ್ಧಗಳನ್ನೂ, ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ಅಭಿವೃದ್ಧಿಯನ್ನೂ ಕಂಡ ಜಗತ್ತು, ಅನಿಷ್ಟವಾದ ವಸಾಹತು ನಿರ್ಮೂಲನವನ್ನು ಸ್ವತಂತ್ರ ರಾಷ್ಟ್ರಗಳ ಉದಯವನ್ನೂ, ಅತ್ಯಂತ ನೀಚವಾದ, ಅಮಾನುಷವಾದ ವರ್ಣಭೇದದ ಅಂತ್ಯವನ್ನೂ ಕಂಡಿತು. ಭಾರತದ ಸ್ವಾತಂತ್ರ್ಯ ಹೋರಾಟ ಯಶಸ್ವಿಗೊಂಡು ಸ್ವತಂತ್ರ ಭಾರತ ಉದಯವಾದ್ದೂ ಇಪ್ಪತ್ತನೇ ಶತಮಾನದ ಪೂರ್ವಾರ್ಧದ ಕೊನೆಯಲ್ಲಿಯೇ. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ರಾಂತಿಗಳನ್ನು ಉಂಟುಮಾಡಿದ ಇಪ್ಪತ್ತನೆಯ ಶತಮಾನದ ಅಂತ್ಯ ಪ್ರಪಂಚದಲ್ಲಿ ಏಕ ಕೇಂದ್ರೀಯ ವ್ಯವಸ್ಥೆಯ ಆಗಮನವನ್ನೂ, ಜಾಗತೀಕರಣ, ಉದಾರೀಕರಣ, ಆರ್ಥಿಕ ಹೊಂದಾಣಿಕೆಯ ನೀತಿಗಳ ಆಚರಣೆಯನ್ನೂ ಜಾರಿಗೆ ತಂದಿತು.

ಈ ಹಿನ್ನೆಲೆಯಲ್ಲಿ ಪ್ರಾರಂಭವಾದ ಹೊಸ ಶತಮಾನ ತಂದದ್ದು ಜಾಗತಿಕ ಭಯೋತ್ಪಾದನೆ. ಆವರೆಗೆ ಭಾರತ ಮತ್ತು ಕೆಲ ದೇಶಗಳಿಗೆ ಮಾತ್ರ ಸೀಮಿತವಾಗಿದ್ದ ಭಯೋತ್ಪಾದನೆ ಅಂತರರಾಷ್ಟ್ರೀಯ ವ್ಯಾಪ್ತಿ ಪಡೆಯಿತು. ೨೦೦೧ರ ಸೆಪ್ಟೆಂಬರ್ ೧೧ರಂದು ಅಮೆರಿಕದ ನ್ಯೂಯಾರ್ಕ್ ನಗರದ ವರ್ಲ್ಡ್ ಟ್ರೇಡ್ ಸೆಂಟರ್‌ನ ಮೇಲೆ ನಡೆದ ಭಯೋತ್ಪಾದನಾ ದಾಳಿ ಅಂತರರಾಷ್ಟ್ರೀಯ ವ್ಯಾಪ್ತಿಗೆ ಸೂಚಕವಾಗಿತ್ತು. ಸೌದಿ ಅರೇಬಿಯ ಮೂಲದ ಒಸಾಮಾ ಬಿನ್ ಲಾಡೆನ್ ನೇತೃತ್ವದ ಅಲ್‌ಖೈದಾ ಭಯೋತ್ಪಾದನಾ ಸಂಘಟನೆ ನಡೆಸಿದ ಆತ್ಮಾಹುತಿ ವೈಮಾನಿಕ ದಾಳಿಯಲ್ಲಿ ಮಡಿದವರ ಸಂಖ್ಯೆ ೬೦೦೦ಕ್ಕೂ ಅಧಿಕ. ಅದು ಅಮೆರಿಕದಲ್ಲಿ ಜರುಗಿದ ಮೊದಲ ಭಯೋತ್ಪಾದನಾ ದಾಳಿ. ಭಯೋತ್ಪಾದಕರು ಅಮೆರಿಕದ ರಕ್ಷಣಾ ಮಂತ್ರಾಲಯ ಪೆಂಟಗನ್ ಹಾಗೂ ಅಮೆರಿಕ ಅಧ್ಯಕ್ಷರ ನಿವಾಸ ಶ್ವೇತಭವನದ ಮೇಲೂ ಸಂಚು ರೂಪಿಸಿದ್ದರು. ಆದರೆ ಅದು ಫಲಕಾರಿಯಾಗಲಿಲ್ಲ. ಇದರ ಪರಿಣಾಮ ಭಯೋತ್ಪಾದನೆಯ ವಿರುದ್ಧ ಅಮೆರಿಕದಿಂದ ಸಮರದ ಘೋಷಣೆ. ಇದರಿಂದ ಪ್ರಪಂಚದಲ್ಲಿ ಆತಂಕ ಹೆಚ್ಚಾಗಿದೆಯೇ ಹೊರತು ಕಮ್ಮಿಯಾಗಿಲ್ಲ. ಭಯೋತ್ಪಾದನೆ ಕಮ್ಮಿಯೇನಾಗಲಿಲ್ಲ. ಕಾರಣಗಳೇನೇ ಇರಲಿ, ವಿವರ ಇಲ್ಲಿ ಬೇಡ. ಇದರ ಜೊತೆಗೇ ಪ್ರಪಂಚ ಹೊಸ ಶತಮಾನದ ಪ್ರಾರಂಭದಲ್ಲಿಯೇ ಅನುಭವಿಸಿದ್ದು ಆರ್ಥಿಕ ಹಿಂಜರಿತ. ಇಪ್ಪತ್ತನೇ ಶತಮಾನದ ಮೊದಲ ದಶಕಗಳಲ್ಲಿ ಕಂಡ ಪರಿಸ್ಥಿತಿಯೇ ಮರುಕಳಿಸಿತ್ತು. ಮೊದಲಿನಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರವನ್ನು ಬಾಧಿಸಿದ ಈ ಆರ್ಥಿಕ ಕುಸಿತ ಇತರ ಕ್ಷೇತ್ರಗಳಿಗೂ ವ್ಯಾಪಿಸಿತು. ಬಂಡವಾಳಶಾಹಿ ವ್ಯವಸ್ಥೆಯಲ್ಲಿನ ಆರ್ಥಿಕ ಶಿಥಿಲತೆಗೆ ಅದು ದ್ಯೋತಕವಾಗಿತ್ತು. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯಲ್ಲಿ ಕ್ರಮಬದ್ಧವಾಗಿ ಆಗಾಗ್ಗೆ ಆರ್ಥಿಕ ಬಿಕ್ಕಟ್ಟು ಸಂಭವಿಸುತ್ತದೆ ಎಂಬ


ಗಗನಚುಂಬಿ ಕಟ್ಟಡ


ಎಲ್ಲೆಲ್ಲೂ ಇರುವ ಮಾಲ್

ಕಾರ್ಲ್ ಮಾರ್ಕ್ಸ್‌ರ ಚಿಂತನೆಯನ್ನು ಅದು ಸಾಬೀತುಗೊಳಿಸಿತು.

ಈ ಅಂತರರಾಷ್ಟ್ರೀಯ ಬೆಳವಣಿಗೆಗಳನ್ನು ಗಮನದಲ್ಲಿರಿಸಿಕೊಂಡು ಭಾರತದ ಬೆಳವಣಿಗೆಗಳನ್ನು ಗಮನಿಸೋಣ. ಜಾಗತಿಕ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ತಲೆದೋರಿದ ಆರ್ಥಿಕ ಹಿಂಜರಿತದ ಬಿಸಿ ಭಾರತದ ಅರ್ಥವ್ಯವಸ್ಥೆಗೆ ತಟ್ಟಿತಾದರೂ ಅದನ್ನು ಪಲ್ಲಟಗೊಳಿಸಲಿಲ್ಲ. ಸರಕಾರದ ಹಿಡಿತದಲ್ಲಿದ್ದ ಬ್ಯಾಂಕಿಂಗ್ ವ್ಯವಹಾರ ಹಾಗೂ ಸಾರ್ವಜನಿಕ ಒಡೆತನದಲ್ಲಿದ್ದ ಉದ್ಯಮಗಳಿಂದಾಗಿ ಆರ್ಥಿಕ ದುಷ್ಪರಿಣಾಮಗಳನ್ನು ತಡೆದುಕೊಳ್ಳಲು ಸಾಧ್ಯವಾಯಿತು. ಅದಾಗ್ಯೂ ಜಾಗತೀಕರಣದ ಭರಾಟೆಯ ಪರಿಣಾಮಗಳು ಗಮನಾರ್ಹವಾಗಿದ್ದುವು. ಕಾರ್ಪೊರೇಟ್ ವಲಯದ ವೇಗದ ವರ್ಧನೆ, ಬಡವರು ಮತ್ತು ಶ್ರೀಮಂತರ ಮಧ್ಯೆ ವಿಸ್ತಾರವಾಗುತ್ತಿದ್ದ ಅಂತರ, ಕೋಟ್ಯಾಧೀಶರುಗಳ ಸಂಖ್ಯೆಯ ದಿಢೀರ್ ಏರಿಕೆ, ಹಿಗ್ಗುತ್ತಿದ್ದ ನಗರೀಕರಣ, ಬಡರೈತರ ಆತ್ಮಹತ್ಯೆ ಪ್ರಕರಣಗಳು, ಭ್ರಷ್ಟಾಚಾರದ ವರ್ಧನೆ ಮೊದಲಾದವು ಕಣ್ಣಿಗೆ ಬಡಿಯುವಂಥದ್ದಾಗಿದ್ದುವು. ನಗರ ಕೇಂದ್ರಿತ ಕೈಗಾರಿಕಾಭಿವೃದ್ಧಿಯಿಂದಾಗಿ ನಗರಗಳ ವೇಗವಾದ ವರ್ಧನೆ, ಹೊಸ ಬಡಾವಣೆಗಳ ಸೃಷ್ಟಿ , ನಗರಗಳತ್ತ ಹೆಚ್ಚುತ್ತಿದ್ದ ವಲಸೆ ಇವೆಲ್ಲ ಕಳೆದ ಶತಮಾನದ ಎಂಭತ್ತರ ದಶಕದಲ್ಲೇ ಪ್ರಾರಂಭವಾಗಿತ್ತು. ಅದು ಹೊಸ ಶತಮಾನದ ಪ್ರಾರಂಭದ ಹೊತ್ತಿಗೆ ಇನ್ನಷ್ಟು ಅಧಿಕಗೊಂಡಿತ್ತು. ಬೆಳೆಯುತ್ತಿದ್ದ ನಗರೀಕರಣ, ಜನಸಂಖ್ಯೆಯ ಒತ್ತಡ, ಮಧ್ಯಮವರ್ಗದ, ವಿದ್ಯಾವಂತರ ಸಂಖ್ಯೆಯಲ್ಲಿ ಹೆಚ್ಚಳ ಇವೆಲ್ಲ ಗ್ರಾಮೀಣ ಭಾರತದ ಚಹರೆಯನ್ನೇ ಬದಲಿಸಿದುವು. ನಗರಗಳು ಮತ್ತು ಗ್ರಾಮಗಳ ಮಧ್ಯೆ ಅಂತರ ಮತ್ತಷ್ಟು ಹೆಚ್ಚಿತು. ಅದರ ಜೊತೆಗೇ ಮಾರುಕಟ್ಟೆಯ ವ್ಯವಸ್ಥೆಯಲ್ಲಿ, ಕಟ್ಟಡಗಳ ನಿರ್ಮಾಣದಲ್ಲಿ ಮಾರ್ಪಾಟುಗಳಾದವು. ಬಹುಮಹಡಿ ಕಟ್ಟಡಗಳು, ಗಗನಚುಂಬಿ ವಸತಿ ಸಮುಚ್ಚಯಗಳು, ಬೃಹತ್ ವ್ಯಾಪಾರ ಮಳಿಗೆಗಳು, ಮಾಲ್‌ಗಳು, ಮದ್ಯವ್ಯಸನಿಗಳನ್ನು ತಣಿಸಲು 'ಪಬ್' ಸಂಸ್ಕೃತಿ ಇವೆಲ್ಲ ನಗರಗಳ ಅವಿಭಾಜ್ಯ ಅಂಗಗಳಾದುವು. ಭಾರತದಲ್ಲಿ ವೇಗವಾಗಿ ಬೆಳೆದ ನಗರಗಳು ಎಂದರೆ ದೆಹಲಿ, ಗುಡಗಾಂವ್, ನೋಯ್ಡಾ, ಹೈದರಾಬಾದ್, ಭೋಪಾಲ್, ಚೆನ್ನೈ, ಕೊಯಮತ್ತೂರು, ಬೆಂಗಳೂರು, ಅಹಮದಾಬಾದ್, ಸೂರತ್ ಮೊದಲಾದವುಗಳು.

ಬೆಂಗಳೂರು ನಗರದ ಬೆಳವಣಿಗೆಯನ್ನೇ ಉದಾಹರಣೆಯಾಗಿ ತೆಗೆದುಕೊಳ್ಳೋಣ. ಭಾರತದಲ್ಲಿ ಐ.ಟಿ ಉದ್ಯಮಕ್ಕೆ ಕೇಂದ್ರ, ಸಿಲಿಕಾನ್ ಸಿಟಿ ಎಂದೆಲ್ಲ ಹೆಸರು ಗಳಿಸಿರುವ ಈ ನಗರದ ಜನಸಂಖ್ಯೆ ಕಳೆದ ಮೂರು ದಶಕಗಳಲ್ಲಿ ದ್ವಿಗುಣಗೊಂಡಿರುವುದು ಅದರ ತ್ವರಿತ ಬೆಳವಣಿಗೆಗೆ ಸಾಕ್ಷಿ . ಒಂದು ಕಾಲದಲ್ಲಿ ಮಹಡಿಮನೆಗಳೇ ಅಪರೂಪವಾಗಿದ್ದು, ದೊಡ್ಡ ಕಾಂಪೌಂಡಿನ ವಿಶಾಲವಾದ ಬಂಗಲೆಗಳು, ಸುತ್ತಲೂ ಹಸಿರು ವನಗಳ ಬೀಡಾಗಿದ್ದ ಬೆಂಗಳೂರು ಈಗ ಕಾಂಕ್ರೀಟ್ ಕಟ್ಟಡಗಳ ಕಾಡಾಗಿ ಬೆಳೆದಿದೆ. ಎಲ್ಲೆಲ್ಲೂ ಗಗನಚುಂಬಿ ಕಟ್ಟಡಗಳು, ಮಾಲ್‌ಗಳು, ಬೃಹತ್ ವ್ಯಾಪಾರೀ ಮಳಿಗೆಗಳು, ಹೊಸ ಹೊಸ ಬಡಾವಣೆಗಳು ಗೋಚರಿಸುತ್ತವೆ. ಸಾವಿರದ ಒಂಭೈನೂರ ಐವತ್ತರ ದಶಕದಲ್ಲಿ ಹತ್ತು ಲಕ್ಷಕ್ಕೂ ಕಡಿಮೆ ಜನಸಂಖ್ಯೆಯನ್ನು ಹೊಂದಿದ್ದ ಈ ನಗರದ ಜನಸಂಖ್ಯೆ ಈಗ ಒಂದು ಕೋಟಿಯಾಗಿದೆ. ನಗರದ ವಿಸ್ತೀರ್ಣ ಹತ್ತೊಂಭತ್ತನೇ ಶತಮಾನದ ಪ್ರಾರಂಭದಲ್ಲಿ ೨೮.೮೫ ಚ.ಕಿ.ಮೀ. ಇದ್ದುದು ೧೯೫೧ರಲ್ಲಿ ೬೯.೯೩ ಚ.ಕಿ.ಮೀ.ಗೆ ಹೆಚ್ಚಿದ್ದು ಈಗ ೮೦೦ ಚ.ಕಿ.ಮೀ. ತಲಪಿದೆ. ಅಂದರೆ ನಗರ ಎಷ್ಟು ವಿಸ್ತಾರಗೊಂಡಿದೆ ಎಂಬುದನ್ನು ಊಹಿಸಿಕೊಳ್ಳಬಹುದು. ಇಂಥದೇ ಬೆಳವಣಿಗೆಯನ್ನು


ಪ್ರಮಾಣ ವಚನ ಸ್ವೀಕರಿಸುತ್ತಿರುವ ವಾಜಪೇಯಿ

ಭಾರತದ ಎಲ್ಲ ಪ್ರಮುಖ ನಗರಗಳಲ್ಲಿಯೂ ಕಾಣಬಹುದು. ೧೯೮೨ರಲ್ಲಿ ೭೦ ಸಾವಿರ ಕಂಪೆನಿಗಳಿದ್ದುದು ಈಗ ೨೦೧೪ರಲ್ಲಿ ಎಂಟು ಲಕ್ಷ ದಾಟಿರುವುದು ಕಾರ್ಪೊರೇಟ್ ವಲಯದ ಬೆಳವಣಿಗೆಯನ್ನು ತೋರಿಸುತ್ತದೆ. ಈ ಬೆಳವಣಿಗೆ ದೇಶದ ರಾಜಕೀಯದ ಮೇಲೂ ಪರಿಣಾಮ ಉಂಟುಮಾಡಿದೆ. ಭ್ರಷ್ಟಾಚಾರ ಬೇರೂರಿ ಬೃಹದಾಕಾರವಾಗಿ ಬೆಳೆದಿದೆ. ನಗರಗಳು ವಿಸ್ತಾರಗೊಂಡ ಹಾಗೆ ಭೂ ಕಬಳಿಕೆ, ಭೂ ಮಾಫಿಯ, ರಿಯಲ್ ಎಸ್ಟೇಟ್ ದಂಧೆ, ಶಿಕ್ಷಣದ ವ್ಯಾಪಾರೀಕರಣ ಇವೆಲ್ಲ ನಿತ್ಯ ವ್ಯವಹಾರಗಳಾಗಿ ಪರಿಣಮಿಸಿವೆ. ದೇಶದ ಪ್ರಮುಖ ಕಾರ್ಪೊರೇಟ್ ಸಂಸ್ಥೆಗಳಾದ ಟಾಟಾ, ಬಿರ್ಲಾ, ಅಂಬಾನಿ, ಅದಾನಿ, ಮೊದಲಾದವರ ನೇತೃತ್ವದಲ್ಲಿರುವ ಕಂಪೆನಿಗಳೂ ರಿಯಲ್ ಎಸ್ಟೇಟಿನಿಂದ ಹಿಡಿದು ಸಾಂಬಾರ ಪದಾರ್ಥಗಳ ಮಿಶ್ರಣ, ಮಸಾಲೆಗಳು, ತರಕಾರಿ ವ್ಯಾಪಾರದವರೆಗೆ ಎಲ್ಲ ಕ್ಷೇತ್ರಗಳನ್ನೂ ಆವರಿಸಿಕೊಂಡಿವೆ. ದೇಶದ ರಾಜಕೀಯ ವ್ಯವಸ್ಥೆಯ ಮೇಲೆ ಕಾರ್ಪೊರೇಟ್ ವಲಯದ ನಿಯಂತ್ರಣ ಎಷ್ಟು ಗಾಢವಾಗಿದೆ ಎಂಬುದನ್ನು ಇತ್ತೀಚೆಗೆ, ಎಂದರೆ ೨೦೧೪ರ ಚುನಾವಣೆಗಳಲ್ಲಿ ಕಂಡಿದ್ದೇವೆ.

ಈ ಎಲ್ಲ ಬೆಳವಣಿಗೆಗಳೂ ದೇಶದಲ್ಲಿ ಬಲಪಂಥೀಯ ರಾಜಕಾರಣದ ವರ್ಧನೆಗೆ ವೇದಿಕೆ ನಿರ್ಮಿಸಿತು. ಇದನ್ನು ಕಾಂಗ್ರೆಸ್ ಆಡಳಿತದ ಕಾಲದಲ್ಲಿಯೇ ಗುರ್ತಿಸಿದ್ದೇವೆ. ೧೯೮೦ರ ನಂತರದ ಘಟನೆಗಳೇ ಅದಕ್ಕೆ ಸಾಕ್ಷಿ . ಜಾಗತೀಕರಣವನ್ನು ಅಪ್ಪಿಕೊಂಡ ಕಾಂಗ್ರೆಸ್ಸಿನ ನರಸಿಂಹರಾವ್ ಸರಕಾರ ಕೊನೆಗೊಳ್ಳುತ್ತಿದ್ದ ಹಾಗೆಯೇ ದೇಶದಲ್ಲಿ ಮತೀಯವಾದಿ, ಹಿಂದುತ್ವ ಪ್ರತಿಪಾದಕ ಭಾರತೀಯ ಜನತಾಪಕ್ಷ ಪ್ರಬಲಗೊಂಡಿರುವ ಸೂಚನೆ ಕಂಡುಬಂದಿತ್ತು. ೧೯೯೯ರ ಅಕ್ಟೋಬರ್‌ನಲ್ಲಿ ನಡೆದ ಲೋಕಸಭಾ ಚುನಾವಣೆಗಳಲ್ಲಿ ಭಾರತೀಯ ಜನತಾಪಕ್ಷದ ನೇತೃತ್ವದಲ್ಲಿ ಸ್ಥಾಪನೆಗೊಂಡ ರಾಷ್ಟ್ರೀಯ ಪ್ರಜಾಪ್ರಭುತ್ವವಾದಿ ಒಕ್ಕೂಟ (ಎನ್‌ಡಿಎ) ಸರಕಾರ ಅಸ್ತಿತ್ವಕ್ಕೆ ಬಂದಿತು. ಭಾಜಪದ ನಾಯಕ ಅಟಲ್ ಬಿಹಾರಿ ವಾಜಪೇಯಿ ಪ್ರಧಾನಮಂತ್ರಿಯಾಗಿ ಅಧಿಕಾರ ವಹಿಸಿಕೊಂಡು ಐದು ವರ್ಷ ಅವಧಿ ಪೂರೈಸಿದರು. ಚುನಾವಣೆಗಳಲ್ಲಿ ಭಾಜಪದ ಲೋಕಸಭಾ ಸ್ಥಾನಗಳು ೧೯೯೮ರಲ್ಲಿ ಪಡೆದಷ್ಟೇ ಅಂದರೆ, ೧೮೨ ಆಗಿದ್ದರೂ ಮಿತ್ರ ಪಕ್ಷಗಳ ಜೊತೆಗೂಡಿ ಸರಕಾರ ರಚಿಸುವುದರಲ್ಲಿ ಯಶಸ್ವಿಯಾಯಿತು. ೨೧ ಸ್ಥಾನಗಳನ್ನು, ಪಡೆದಿದ್ದ ಜನತಾದಳ (ಸಂಯುಕ್ತ), ೧೫ ಸ್ಥಾನಗಳನ್ನು ಪಡೆದಿದ್ದ ಶಿವಸೇನೆ, ದ್ರಾವಿಡ ಮುನ್ನೇತ್ರ ಕಳಗಂ, ಬಿಜು ಜನತಾದಳ, ತೃಣಮೂಲ ಕಾಂಗ್ರೆಸ್ ಭಾಜಪದ ಜೊತೆ ಕೈಜೋಡಿಸಿದುವು. ಒಂದೇ ಪಕ್ಷ ಕಾಂಗ್ರೆಸ್ಸಿನ ಆಡಳಿತ ಅಂತ್ಯಗೊಂಡು ಭಾರತದಲ್ಲಿ ಸಮ್ಮಿಶ್ರ ಸರಕಾರದ ಕಾಲ ಪ್ರಾರಂಭವಾಯಿತು. ಕಾಂಗ್ರೆಸ್ ಕೇವಲ ೧೧೪ ಸ್ಥಾನಗಳನ್ನು ಅದರ ಮಿತ್ರ ಪಕ್ಷ ಶರದ್ ಪವಾರ್ ನಾಯಕತ್ವದ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ (ಎನ್‌ಸಿಪಿ) ೩೦ ಸ್ಥಾನಗಳನ್ನು ಪಡೆಯಿತು. ಎಡಪಕ್ಷಗಳು, ಎಂದರೆ ಸಿಪಿಎಂ ೩೩ ಸ್ಥಾನಗಳನ್ನು, ಸಿಪಿಐ ೪ ಸ್ಥಾನಗಳನ್ನು ಪಡೆದವು. ಇತರ ಪಕ್ಷಗಳು ಉಳಿದ ಸ್ಥಾನಗಳನ್ನು ಪಡೆದವು.

ಭಿನ್ನವಾದ, ಶಿಸ್ತುಬದ್ಧವಾದ, ಪ್ರಾಮಾಣಿಕ, ಆದರ್ಶವಾದಿ ಪಕ್ಷ ಎಂದು ಕೊಚ್ಚಿಕೊಳ್ಳುತ್ತಿದ್ದ ಭಾಜಪದ ನಿಜವಾದ ಬಣ್ಣ ಬಹುಬೇಗನೆ ಬಯಲಾಯಿತು. ಭಾಜಪದ ಮಾತೃಸಂಸ್ಥೆ ರಾಷ್ಟ್ರೀಯ ಸ್ವಯಂಸೇವಕ ಸಂಘ, ಅದರ ಅಂಗಸಂಸ್ಥೆಗಳಾದ ವಿಶ್ವ ಹಿಂದೂ ಪರಿಷತ್ತು ಭಜರಂಗ ದಳ ಮೊದಲಾದವು ಗರಿಗೆದರಿಕೊಂಡು ತಮ್ಮ ಚಟುವಟಿಕೆಗಳನ್ನು ಹೆಚ್ಚಿಸಿದವು. ವಾಜಪೇಯಿ ಸರಕಾರದಲ್ಲಿ ಲಾಲ್‌ಕೃಷ್ಣ ಆದ್ವಾನಿ ಗೃಹ ಸಚಿವ, ಕಟ್ಟಾ ಆರೆಸ್ಸೆಸ್ ಅನುಯಾಯಿ ಮುರಳಿ ಮನೋಹರ ಜೋಷಿ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಅರ್ಥಾತ್ ಶಿಕ್ಷಣ ಇಲಾಖೆಯ ಸಚಿವ, ಜಾರ್ಜ್ ಫರ್ನಾಂಡಿಸ್ (ಸಮಾಜವಾದಿ ಪಕ್ಷದ ನೇತಾರ) ರಕ್ಷಣಾ ಸಚಿವ, ಯಶವಂತ ಸಿನ್ಹಾ ಹಣಕಾಸಿನ ಸಚಿವ, ಜಸ್ವಂತ್ ಸಿಂಗ್ ವಿದೇಶಾಂಗ ಸಚಿವ. ಹೊಸದಾಗಿ ನಿರ್ಮಾಣಗೊಂಡ ಸಚಿವಾಲಯ ಎಂದರೆ ಸಾರ್ವಜನಿಕ ವಲಯದ ಉದ್ಯಮಗಳ ಬಂಡವಾಳ ಹರಣದ ಸಚಿವಾಲಯ. ಅರುಣ್ ಶೌರಿ ನೇತೃತ್ವದಲ್ಲಿದ್ದ ಈ ಸಚಿವಾಲಯದ ಉದ್ದೇಶ ಸಾರ್ವಜನಿಕ ವಲಯ ಉದ್ಯಮಗಳ ಖಾಸಗೀಕರಣ. ೧೯೯೯ರ ಕೊನೆಯಲ್ಲಿ ಅಧಿಕಾರ ವಹಿಸಿಕೊಂಡ ವಾಜಪೇಯಿ ನೇತೃತ್ವದ ಎನ್‌ಡಿಎ ಸರಕಾರ ಪ್ರಾರಂಭದಲ್ಲೇ ಭ್ರಷ್ಟಾಚಾರದ ಸುಳಿಯಲ್ಲಿ ಸಿಕ್ಕಿಕೊಂಡು ಹಲವು ಹಗರಣಗಳ, ಮತೀಯವಾದಿ ಘರ್ಷಣೆಗಳ, ವಿವಾದಾತ್ಮಕ ನಡಾವಳಿಗಳ ಬೀಡಾಯಿತು.

ಸಿ. ಆರ್. ಕೃಷ್ಣರಾವ್
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ.-೮೫

ನಾಗೇಶ ನಾಯ್ಕ

# ರಂಗಭೂಮಿ ಕಲಾವಿದೆಯರ ಸಮಸ್ಯೆಗಳು ಮತ್ತು ಸವಾಲುಗಳು



ರಂಗಭೂಮಿಗೆ ಮಹಿಳೆಯರ ಕೊಡುಗೆ ಮಹತ್ತರವಾದುದು. ಒಂದು ಸಮಯದಲ್ಲಿ ತನಗೆ ನಿಷಿದ್ಧವಾಗಿದ್ದ ಈ ಪ್ರಕಾರದಲ್ಲಿ ಮಹಿಳೆ ತಡವಾಗಿ ಪ್ರವೇಶಿಸಿಯೂ ತಾನು ಅನಿವಾರ್ಯವೆಂಬಂತೆ ತನ್ನದೇ ಸ್ಥಾನವನ್ನು ಸಾಧಿಸಿಕೊಳ್ಳುವುದು ಸುಲಭದ ಮಾತಲ್ಲ. ಆಕೆ ಅದಕ್ಕಾಗಿ ಅನೇಕ ಸವಾಲು ಸಮಸ್ಯೆಗಳನ್ನು ಎದುರಿಸುತ್ತಾ, ಒಂದು ಅರ್ಥದಲ್ಲಿ ಬೆಂಕಿಯ ಬಲೆಯನ್ನೇ ದಾಟಿ ಬಂದಿರುತ್ತಾಳೆ. ರಂಗಭೂಮಿ ಒಂದು ಪ್ರದರ್ಶನ ಕಲೆ. ಇಲ್ಲಿ ಅಭಿವ್ಯಕ್ತಿ ಪ್ರಧಾನ ಅಂಶ. ರಂಗಭೂಮಿಯ ಎಲ್ಲಾ ವಲಯಗಳಲ್ಲೂ ಮಹಿಳೆಯರ ಅಭಿವ್ಯಕ್ತಿ ಸಾಮರ್ಥ್ಯ ಏನೆಂಬುದು ಹಲವು ಹಂತಗಳಲ್ಲಿ ಇಂದು ಚರ್ಚೆಯ ವಿಷಯವಾಗಿದೆ. ಅವಳು ಅದೆಷ್ಟು ಅನಿವಾರ್ಯವಾದಾಗಲೂ ಆಕೆಯನ್ನು ಎರಡನೇ ದರ್ಜೆಯಲ್ಲಿಯೇ ನಿಲ್ಲಿಸುವ ಜಾಯಮಾನವನ್ನು ಇಂದಿಗೂ ಬಿಟ್ಟಿಲ್ಲ. ಆದರೂ ಆಕೆ ತನ್ನ ಅಭಿವ್ಯಕ್ತಿ ಸಾಮರ್ಥ್ಯದಿಂದಲೇ ತನ್ನ ಶಕ್ತಿ ಮತ್ತು ಮಿತಿ, ಅದಾಗಲೇ ಇರುವ ಚೌಕಟ್ಟಿನ ಪರಿಮಿತಿಯನ್ನು ಮನವರಿಕೆ ಮಾಡಿಕೊಂಡು ಸಿಕ್ಕಿರುವುದಷ್ಟಕ್ಕೆ ಸಂಭ್ರಮಿಸಿ ಮೈಮರೆಯದೆ, ಈ ಹಿನ್ನೆಲೆಯಲ್ಲಿ ರಂಗಭೂಮಿಯನ್ನು ಪ್ರವೇಶಿಸಿ ಅಚ್ಚಳಿಯದಂತೆ ತಮ್ಮ ಹೆಜ್ಜೆಗುರುತನ್ನು ಮೂಡಿಸಿ, ಅಭಿನಯದ ಮೂಲಕ ಎಲ್ಲರಿಂದಲೂ ಭೇಷ್ ಎನಿಸಿಕೊಂಡ ಹಲವಾರು ಕಲಾವಿದೆಯರು ಪ್ರಸಿದ್ಧಿ ಪಡೆದು ಕೀರ್ತಿಶೇಷರಾಗಿದ್ದಾರೆ. ಅಲ್ಲದೆ, ಅಂತಹ ಇನ್ನೂ ಕೆಲವರು ಇಂದಿಗೂ ನಮ್ಮ ನಡುವೆ ಸಾಕಷ್ಟು ಮಂದಿ ಇದ್ದಾರೆ. ಆದರೆ ಅವರೆಲ್ಲರ ವೃತ್ತಿ ಅನುಭವಗಳನ್ನು ದಾಖಲಿಸಿರುವ ದಾಖಲೆಗಳ ರಚನೆಗಳು ಗಮನಾರ್ಹವಾಗಿ ಆಗಿಲ್ಲ. ಅಂತಹವರಲ್ಲಿ ಕೆ. ನಾಗರತ್ನಮ್ಮ (ಮರಿಯಮ್ಮನಹಳ್ಳಿ ರಂಗಸಿರಿ) ಮಳವಳ್ಳಿ ಸುಂದರಮ್ಮ (ಅಭಿನಯ ವಿಶಾರದೆ) ಮಾಲತಶ್ರೀ ಮೈಸೂರು (ತೆರೆ ಸರಿಯಿತು) ಮತ್ತು ಪ್ರೇಮಾ ಕಾರಂತ (ಸೋಲಿಸಬೇಡ ಗೆಲಿಸಯ್ಯ) ಮೊದಲಾದವರು ತಮ್ಮ ಅನುಭವಗಳನ್ನು ದಾಖಲಿಸುವ ಪ್ರಯತ್ನವನ್ನು ಆತ್ಮಕಥೆಯ ಮೂಲಕ ಮಾಡಿದ್ದಾರೆ. ಇವರ ಆತ್ಮಕಥೆಯ ಅಧ್ಯಯನವು ಕನ್ನಡ ರಂಗಭೂಮಿಯಲ್ಲಿ ಮಹಿಳೆಯರ ಅಸ್ತಿತ್ವವನ್ನು ಕುರಿತು ಅಧ್ಯಯನ ಮಾಡಲು ಸಹಾಯಕವಾಗುವ ದೃಷ್ಟಿಯಿಂದ ಆತ್ಮಕಥೆಗಳು ಪ್ರಸ್ತುತವೆನಿಸುತ್ತವೆ.

**ನಮ್ಮ ಸಮಾಜ ಕಲಾವಿದೆಯರನ್ನು ಶೋಷಣೆಗೆ ಗುರಿಮಾಡಿದೆ. ಅವರನ್ನು ತುಚ್ಛವಾಗಿ ಕಾಣುತ್ತಿದೆ. ನಾಗರತ್ನಮ್ಮನವರು ಅವರ ಆತ್ಮಕಥೆಯಲ್ಲಿ ನಾಟಕ ಆಡಲು ಊರೊಂದಕ್ಕೆ ಹೋದಾಗ ಅಲ್ಲಿನ ಗೌಡ ಕಲಾವಿದೆಯರನ್ನು ಅಪಹರಿಸಲು ಮಾಡಿದ ಪ್ರಯತ್ನ ಮತ್ತು ಅದರಿಂದ ತಪ್ಪಿಸಿಕೊಂಡ ಬಗ್ಗೆ ಹೇಳಿದ್ದಾರೆ. ಅವರ ಅಸಹಾಯಕ ಪರಿಸ್ಥಿತಿಯ ಲಾಭ ಪಡೆದು ಅವರನ್ನು ಹಾದರಕ್ಕೆ ಕರೆಯುವವರೂ ಇದ್ದರು. ಅಲ್ಲದೆ, ತಾವೇ ಹೇಳಿದಂತೆ ಕುಣಿಯುವಂತೆ ಒತ್ತಾಯ ಮಾಡುವ, ಮಾಡದಿದ್ದರೆ ಹೇಗೆ ಹೋಗುತ್ತೀರಿ, ಹೋದರೆ ಇಲ್ಲೇ ಹೂತುಬಿಡುತ್ತೇವೆ ಎಂದು ದಬ್ಬಾಳಿಕೆ ನಡೆಸಿದವರೂ ಇದ್ದಾರೆ. ಕಲಾವಿದರನ್ನು ಗೌರವದಿಂದ ನೋಡುವ ವರ್ಗ ಇರುವಂತೆ ಅವರನ್ನು ನೋವಿಗೆ ಈಡು ಮಾಡುವ ವರ್ಗ ಕೂಡ ಇದೆ. ಈ ಪರಿಸ್ಥಿತಿ ಇಂದಿಗೂ ಬದಲಾಗಿಲ್ಲ. ಕಲಾವಿದೆಯರ ಅಸಹಾಯಕತೆಯನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಕಲಾವಿದೆಯರು ತಮ್ಮ ಕಲಾಪ್ರತಿಭೆಯನ್ನು ಪ್ರದರ್ಶಿಸುವ ಜೊತೆಗೆ ಅಲ್ಲಿನ ಹೊರ ಪ್ರಪಂಚದಲ್ಲಿ ತಮ್ಮನ್ನು ಗುರಿಯಾಗಿಸಿಕೊಂಡು ದೌರ್ಜನ್ಯವೆಸಗಲು ಕಾಯುತ್ತಿರುವವರ ಕುರಿತು ಕೂಡ ಜಾಗೃತರಾಗಬೇಕಾಗುತ್ತದೆ.**






## ಏನೆಂದು ಹೇಳಲಿ ನಾ...

ಹೇಳಲಿ ನಾ ಯಾರಿಗೆ ಶುಭಾಶಯವ
ಕೊಳೆತು ನಾರುತ್ತಿರುವ ರಾಜಕೀಯದ ಮಧ್ಯೆ ;
ತಾಂಡವವಾಡುತ್ತಿರುವ ಬಡತನದ ಮಧ್ಯೆ ;
ಅನ್ನ–ಅರಿವೆಗಾಗಿ ಗುಳೆ ಹೊಂಟವರ ಮಧ್ಯೆ ;
ನಾಳೆ ಹೇಗಿದೆಯೋ ತಿಳಿಯದ ನಿರ್ಗತಿಕರ ಮಧ್ಯೆ ;
ಏನೆಂದು ಹೇಳಲಿ ನಾ ಶುಭಾಶಯವಾ ?

ಹೇಳಲಿ ನಾ ಯಾರಿಗೆ ಶುಭಾಶಯವ
ಉದ್ಯೋಗವನ್ನರಸುವ ನಿರುದ್ಯೋಗಿಗಳ ಮಧ್ಯೆ ;
ಬೆಳೆದ ಬೆಳೆಗೆ ಬೆಲೆಯಿಲ್ಲದೆ ಕಂಗಾಲಾದ ರೈತರ ಮಧ್ಯೆ ;
ತುಂಡು ಭೂಮಿ ಉಳಿಸಿಕೊಳ್ಳಲು ಹೆಣಗುವ ಹಿಡುವಳಿದಾರರ ಮಧ್ಯೆ ;
ಮರ್ಯಾದೆಗಾಗಿ ಹತರಾಗುತ್ತಿರುವ ಪ್ರೇಮಿಗಳ ಮಧ್ಯೆ ;
ಏನೆಂದು ಹೇಳಲಿ ನಾ ಶುಭಾಶಯವಾ ?

ಹೇಳಲಿ ನಾ ಯಾರಿಗೆ ಶುಭಾಶಯವ
ಭ್ರಷ್ಟರಿಂದ ತುಂಬಿ ತುಳುಕುತ್ತಿರುವ ವ್ಯವಸ್ಥೆಯ ಮಧ್ಯೆ ;
ಅನ್ಯಾಯಕ್ಕೊಳಗಾದ ಶೋಷಿತರ ಮಧ್ಯೆ ;
ಮಡಿವಂತಿಕೆಗಾಗಿ ಮತಿಹೀನರಾದ ಮೌಢ್ಯರ ಮಧ್ಯೆ ;
ಹಗಲಿರುಳೂ ಗದ್ದುಗೆಗಾಗಿ ಸೆಣಸಾಡುವ
ಮಂತ್ರಿ–ಮಹೋದಯರ ಮಧ್ಯೆ ;
ಏನೆಂದು ಹೇಳಲಿ ನಾ ಶುಭಾಶಯವಾ ?

**ಗುರುಬಸವರಾಜ ಆರ್. ಬಿ.**
ಹೊಳಗುಂದಿ ಪೋಸ್ಟ್, ಹೂವಿನ ಹಡಗಲಿ ತಾಲೂಕು
ಬಳ್ಳಾರಿ ಜಿಲ್ಲೆ – ೫೮೩ ೨೧೯

ಕಲಾವಿದೆಯರಿಗೆ ರಂಗಭೂಮಿಯ ಹೊರಗೆ ಮತ್ತು ರಂಗಭೂಮಿಯಲ್ಲಿ ಸಮಸ್ಯೆಗಳು ಕಾಡುತ್ತಿವೆ. ರಂಗಭೂಮಿಯ ಹೊರಗಿನ ಸಮಸ್ಯೆ ಎಂದಾಗ ಅದು ಕಲಾವಿದೆಯರ ಕುಟುಂಬ ಮತ್ತು ಅವರನ್ನು ಸುತ್ತವರಿದಿರುವ ಸಮಾಜ, ಸಂಸ್ಕೃತಿ, ರಾಜಕೀಯ ಮೊದಲಾದ ಅಂಶಗಳನ್ನು ಒಳಗೊಂಡಿರುತ್ತದೆ.

ಕಲಾವಿದೆಯರನ್ನು ಕೌಟುಂಬಿಕ ಸಮಸ್ಯೆಗಳೇ ಕಾಡುವುದು ಹೆಚ್ಚು. ಬಹುತೇಕ ಕಲಾವಿದೆಯರು ಆರ್ಥಿಕ ಚೈತನ್ಯವಿಲ್ಲದ ಬಡತನದ ಕುಟುಂಬದಿಂದ ಬಂದವರು. ತಮ್ಮನ್ನು ಬಾಲ್ಯದಲ್ಲಿ ಪಾಲನೆ ಪೋಷಣೆ ಮಾಡಬೇಕಾದ ತಂದೆತಾಯಿಯರ ಅಲಕ್ಷ್ಯ ಹಾಗೂ ಬಾಲ್ಯದಲ್ಲೇ ತಂದೆತಾಯಿಯರ ವಿಯೋಗದಿಂದ ನರಳಿದ ಇವರಿಗೆ ಸರಿಯಾದ ಆಸರೆ ನೀಡುವವರ ಕೊರತೆಯಿಂದಾಗಿ ಅನಿವಾರ್ಯತೆ ಎಂಬಂತೆ ರಂಗಭೂಮಿಯ ಪ್ರವೇಶ ಮಾಡಿದವರೇ ಹೆಚ್ಚು. ಕೆ. ನಾಗರತ್ನಮ್ಮ ಅವರ ಆತ್ಮಕಥೆಯಲ್ಲಿ ಹೇಳುವಂತೆ 'ಮನೆಯ ಸ್ಥಿತಿ ಹದಗೆಟ್ಟಿತ್ತು. ಅನೇಕ ಬಾರಿ ಉಪವಾಸ ಬೀಳ ಬೇಕಾಗಿತ್ತು. ತಂದೆ ಅಸ್ತಮಾದಿಂದ ನರಳುತ್ತಿದ್ದರು. ಕೂಲಿ ಕೆಲಸಕ್ಕಾಗಿ ತಂಗಿಯನ್ನು ಶಾಲೆ ಬಿಡಿಸಿ ತಾಯಿ ಕರೆದುಕೊಂಡು ಹೋಗುತ್ತಿದ್ದಳು' ಎನ್ನುವರು. ಮಾಲತಶ್ರೀ ಮೈಸೂರವರು ಎಳವೆಯಲ್ಲಿ ಹೆತ್ತವರನ್ನು ಕಳೆದುಕೊಂಡ ಅಕ್ಕನ ಆಶ್ರಯದಲ್ಲಿ ಬೆಳೆದಳು. ಅಕ್ಕನಿಗೆ ಎಷ್ಟು ದಿನ ಹೊರೆಯಾಗಿರುವುದು ಎಂದು ಆಲೋಚಿಸಿ ರಂಗಭೂಮಿಯನ್ನು ಸೇರಿದರು. ಹೊಟ್ಟೆಪಾಡಿಗಾಗಿ ರಂಗಭೂಮಿ ಸೇರಿದರೆ ಅದು ಅವರನ್ನು ಉಳಿಸಿತು, ಬೆಳೆಸಿತು. ಕೌಟುಂಬಿಕ ಸಮಸ್ಯೆಯಿಲ್ಲದಿದ್ದರೆ ರಂಗಭೂಮಿಯತ್ತ ಇವರು ಒಲವು ತೋರುತ್ತಿದ್ದರೋ ಇಲ್ಲವೋ ಅಥವಾ ಬೇರೆ ಯಾವುದಾದರೂ ವೃತ್ತಿಯನ್ನೋ ಆಯ್ಕೆ ಮಾಡಿಕೊಳ್ಳುತ್ತಿದ್ದರೇನೋ ? ರಂಗಭೂಮಿಯ ಅವರ ಆಯ್ಕೆ ಒಂದರ್ಥದಲ್ಲಿ ಅಗತ್ಯವಾಗಿತ್ತು. ಅಲ್ಲದೇ ಇವರಲ್ಲಿ ಅನೇಕರು ರಂಗಭೂಮಿಯ ತರಬೇತಿ ಪಡೆದು ನಾಟಕರಂಗ ಪ್ರವೇಶಿಸಿದವರಲ್ಲ. ನೋಡಿ ಕಲಿತವರು. ನೋಡಿದ ಅನುಭವವೇ ಅವರಿಗೆ ಗುರುವಾಗಿ ಗುರಿಯತ್ತ ಒಯ್ಯಿತು.

ಸಾಮಾನ್ಯವಾಗಿ ತಂದೆತಾಯಿಯರು ಮಗಳು ನಾಟಕ ಕಲಾವಿದೆಯಾಗುವುದನ್ನು ಇಷ್ಟಪಡುವುದಿಲ್ಲ. ಮಕ್ಕಳು ಎಲ್ಲಿ ದಾರಿ ತಪ್ಪುವರೋ ಎನ್ನುವ ಭೀತಿ ಅವರದು. ಹೀಗಾಗಿ ನಾಟಕಕ್ಕೆ ಸೇರುವವರನ್ನು ಪ್ರೋತ್ಸಾಹಿಸುವುದಿರಲಿ, ವಿರೋಧಿಸುವವರೇ ಹೆಚ್ಚು. ಕೆಲವರು ಒಂದು ವೇಳೆ ಪ್ರೋತ್ಸಾಹಿಸಿದರೂ ಮದುವೆಯ ನಂತರ ದಾಂಪತ್ಯ ಸಮರಸಕ್ಕಾಗಿ ರಂಗಭೂಮಿಯನ್ನು ತ್ಯಜಿಸಿದ ತಮ್ಮ ಸಮಕಾಲೀನ ಕಲಾವಿದೆಯರ ಬಗ್ಗೆ ಕೆ. ನಾಗರತ್ನಮ್ಮನವರು ತಮ್ಮ ಆತ್ಮಕಥೆಯಲ್ಲಿ ಹೇಳಿದ್ದಾರೆ. ಕೆಲವರು ನಾಟಕದಲ್ಲಿ ಅಭಿನಯಿಸುವ ಕಲಾವಿದೆಯನ್ನು ಹೊಗಳುತ್ತಲೇ ಅವಳನ್ನು ಮದುವೆಯಾಗುತ್ತಾರೆ. ಆಕೆ ತನ್ನ ಕಲೆಯನ್ನು ಪ್ರೋತ್ಸಾಹಿಸುವ ಗಂಡ ಸಿಕ್ಕಿದನಲ್ಲ ಎನ್ನುತ್ತಿರುವಾಗಲೇ ಆತನಿಂದ ರಂಗಭೂಮಿಯನ್ನು ತೊರೆಯುವಂತೆ ಒತ್ತಾಯ. ಪರಿಣಾಮವಾಗಿ, ಆಸಕ್ತಿಯಿದ್ದರೂ ಕಲೆಗಿಂತ ಕುಟುಂಬದ ಹಿತ ಮುಖ್ಯವಾಗಿ ರಂಗಭೂಮಿಯನ್ನು ತೊರೆಯಬೇಕಾಗುತ್ತದೆ. ಹೀಗೆ ಕುಟುಂಬದ ಬಗ್ಗೆ ನಿಷ್ಠೆ ತೋರುವ ಸಲುವಾಗಿ ಕಲೆ ಕಮರಿಹೋಗುತ್ತದೆ. ಇನ್ನೊಂದು ಸಮಸ್ಯೆಯೆಂದರೆ ಮದುವೆಯಾಗಿ ಮಗುವಾದಾಗ ನೋಡಿಕೊಳ್ಳಲು ಯಾರೂ ಇಲ್ಲದಿದ್ದಾಗ ರಂಗಭೂಮಿಯಿಂದ ದೂರವಾಗಬೇಕಾಗುತ್ತದೆ. ನಾಗರತ್ನಮ್ಮ ತಮ್ಮ ಮಗುವನ್ನು ನಾಟಕವಾಡಲು ಹೋಗುವಾಗ ಎತ್ತಿಕೊಂಡು ಊರೂರು ಸುತ್ತಿ ಪ್ರಯಾಸಪಟ್ಟ ಬಗೆಯನ್ನು ಹೇಳಿಕೊಂಡಿದ್ದಾರೆ. ಮಾಲತಶ್ರೀ ಮೈಸೂರು ಅವರು ನಾಟಕದಲ್ಲಿ ತೊಡಗಿಕೊಂಡು ಮಗುವಿನ ಕಡೆ ಗಮನಕೊಡಲಾಗದೆ ಅದು ಜ್ವರದಿಂದ ತೀರಿಹೋದ ಬಗ್ಗೆ, ನಂತರದ ಮಗುವಿಗೆ ತೊಂದರೆಯಾಗದಿರಲೆಂದು ರಂಗಭೂಮಿಯಿಂದ ಸ್ವಲ್ಪಸಮಯ ದೂರವಿದ್ದ ಬಗ್ಗೆ ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ. ಮಗುವನ್ನು ಅನ್ಯರ ಕೈಗೊಪ್ಪಿಸಿ ತಾನು ಹೋದರೆ ತನ್ನ ಕರ್ತವ್ಯವನ್ನು ತಾನು ಮಾಡಲಿಲ್ಲವೆಂಬ ಪಾಪಪ್ರಜ್ಞೆ ಕಾಡುವ ಅತಿಯಾದ ಕುಟುಂಬದ ಬಗೆಗಿನ ಭಾವುಕತೆ ಅವರನ್ನು ರಂಗಭೂಮಿಯಿಂದ ವಿಮುಖವಾಗುವಂತೆ ಮಾಡಿತು ಎನ್ನಬಹುದು.

ನಮ್ಮ ಸಮಾಜ ಕಲಾವಿದೆಯರನ್ನು ಶೋಷಣೆಗೆ ಗುರಿಮಾಡಿದೆ. ಅವರನ್ನು ತುಚ್ಛವಾಗಿ ಕಾಣುತ್ತಿದೆ. ನಾಗರತ್ನಮ್ಮನವರು ಅವರ ಆತ್ಮಕಥೆಯಲ್ಲಿ ನಾಟಕವಾಡಲು ಊರೊಂದಕ್ಕೆ ಹೋದಾಗ ಅಲ್ಲಿನ ಗೌಡ ಕಲಾವಿದೆಯರನ್ನು ಅಪಹರಿಸಲು ಮಾಡಿದ ಪ್ರಯತ್ನ ಮತ್ತು ಅದರಿಂದ ತಪ್ಪಿಸಿಕೊಂಡ ಬಗ್ಗೆ ಹೇಳಿದ್ದಾರೆ. ಅವರ ಅಸಹಾಯಕ ಪರಿಸ್ಥಿತಿಯ ಲಾಭ ಪಡೆದು ಅವರನ್ನು ಹಾದರಕ್ಕೆ ಕರೆಯುವವರೂ ಇದ್ದರು. ಅಲ್ಲದೆ, ತಾವೇ ಹೇಳಿದಂತೆ ಕುಣಿಯುವಂತೆ ಒತ್ತಾಯ ಮಾಡುವ, ಮಾಡದಿದ್ದರೆ ಹೇಗೆ



ಹೋಗುತ್ತೀರಿ, ಹೋದರೆ ಇಲ್ಲೇ ಹೂತುಬಿಡುತ್ತೇವೆ ಎಂದು ದಬ್ಬಾಳಿಕೆ ನಡೆಸಿದವರೂ ಇದ್ದಾರೆ. ಕಲಾವಿದರನ್ನು ಗೌರವದಿಂದ ನೋಡುವ ವರ್ಗ ಇರುವಂತೆ ಅವರನ್ನು ನೋವಿಗೆ ಈಡು ಮಾಡುವ ವರ್ಗ ಕೂಡ ಇದೆ. ಈ ಪರಿಸ್ಥಿತಿ ಇಂದಿಗೂ ಬದಲಾಗಿಲ್ಲ. ಕಲಾವಿದೆಯರ ಅಸಹಾಯಕತೆಯನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಕಲಾವಿದೆಯರು ತಮ್ಮ ಕಲಾಪ್ರತಿಭೆಯನ್ನು ಪ್ರದರ್ಶಿಸುವ ಜೊತೆಗೆ ಅಲ್ಲಿನ ಹೊರ ಪ್ರಪಂಚದಲ್ಲಿ ತಮ್ಮನ್ನು ಗುರಿಯಾಗಿಸಿಕೊಂಡು ದೌರ್ಜನ್ಯವೆಸಗಲು ಕಾಯುತ್ತಿರುವವರ ಕುರಿತು ಕೂಡ ಜಾಗ್ರತರಾಗಬೇಕಾಗುತ್ತದೆ. ಭಯದ ನೆರಳಿನಲ್ಲೇ ಅಭಿನಯಿಸಬೇಕಾಗುತ್ತದೆ. ಇದರಿಂದ ನಾಟಕದಲ್ಲಿ ಸಂಪೂರ್ಣವಾಗಿ ತನ್ಮಯವಾಗಲು ಸಾಧ್ಯವಾಗುವುದಿಲ್ಲ. ಇದು ಕಲೆಯ ನಾಶವೂ ಹೌದು ಕಲಾವಿದೆಯರ ನಾಶವೂ ಹೌದು. ಇಂತಹ ಸನ್ನಿವೇಶಗಳು ನಿಲ್ಲಬೇಕು. ಕಲಾವಿದೆಯರಿಗೆ ನಾಟಕಗಳಲ್ಲಿ ಮುಕ್ತವಾಗಿ ತೊಡಗಿಕೊಳ್ಳಲು ಸಾಧ್ಯವಾಗುವಂತೆ ನೋಡಿಕೊಳ್ಳಬೇಕು.

ರಂಗಭೂಮಿಯಲ್ಲಿ ಮಹಿಳೆಯನ್ನು ತಮ್ಮ ಸಮಾನರು ಎಂದು ಪುರುಷರು ಗ್ರಹಿಸುತ್ತಿಲ್ಲ. ನಾಗರತ್ನಮ್ಮ ಅವರ ಆತ್ಮಕಥೆಯಲ್ಲಿ ಒಂದು ಘಟನೆಯನ್ನು ಉಲ್ಲೇಖಿಸುತ್ತಾರೆ. ಕೊಟ್ಟೂರಿನ ಸಮೀಪದ ಐನಳ್ಳಿ ಎಂಬಲ್ಲಿ 'ಮಾತಂಗ ಕನ್ಯಾ' ಎಂಬ ನಾಟಕವಿತ್ತು. ಇಲ್ಲಿ ನಾಯಕಿ ದ್ರುಮನಾಳ ಪಾತ್ರ ನಾಗರತ್ನಮ್ಮನವರದು. ದ್ರುಮನಾಳ ತಂದೆ ಶ್ರೀಮಂತನಲ್ಲಿ ಸಾಲ ಮಾಡಿ ಸಾಲ ತೀರಿಸಲಾಗದೇ ಇದ್ದಾಗ ಕರೆದು ಹೊಡೆಯುವ ದೃಶ್ಯ ಮತ್ತು ಮಗಳು ಅದನ್ನು ತಡೆಯುವ ದೃಶ್ಯ. ನಾಟಕದಲ್ಲಿ ದ್ರುಮನಾಳಿಗೆ ಹೊಡೆಯುವವನ ಪಾತ್ರ ಹವ್ಯಾಸಿ ಕಲಾವಿದನದಾಗಿತ್ತು. ಆದರೆ ಆತ ನಿಜವಾಗಿ ಬಲವಾಗಿಯೇ ಛಾಟಿಯಿಂದ ಎರಡು ಹೊಡೆದ. ಆಗ ಕೈಯ ಚರ್ಮ ಸುಲಿದು ರಕ್ತ ಸುರಿಯಿತು, ಬಾತು ಬಂತು. ಆಗ ಅಲ್ಲಿನ ಜನ ಆತನನ್ನು ಬೈದರು. ನಂತರ ಸಂತೋಷದ ಸನ್ನಿವೇಶವಿದ್ದರೂ ಛಾಟಿಯೇಟಿನಿಂದ ನೋವುಂಡ ನಾಗರತ್ನಮ್ಮನವರಿಗೆ ದುಃಖ ಉಮ್ಮಳಿಸಿ ಬಂತು. ಆದರೆ ಅದನ್ನು ತೋರ್ಪಡಿಸುವಂತಿರಲಿಲ್ಲ. ಅಂತೆಯೇ ಮತ್ತೊಂದು ಘಟನೆ, ಹಡಗಲಿ ತಾಲೂಕಿನ ಮಾಗಳದಲ್ಲಿ 'ಯಾರು ದೊಡ್ಡವರು' ಎಂಬ ನಾಟಕ ಮಾಡುವಾಗ ನಾಯಕಿ ಬಡವನೊಬ್ಬನನ್ನು ಪ್ರೀತಿಸುತ್ತಾಳೆ. ಅದಕ್ಕಾಗಿ ತಂದೆ ಆಕೆಯನ್ನು ಹೊಡೆಯುವಾಗ, ಅದೇ ಸಂದರ್ಭದಲ್ಲಿ ಅನುಚರನಿಂದ ಪೆಟ್ರೋಲ್ ಬಂಕಿಗೆ ಬೆಂಕಿ ಬಿದ್ದಿದೆ ಎಂಬ ಮಾತನ್ನು ಕೇಳಿ ಹೊಡೆಯುವುದನ್ನು ನಿಲ್ಲಿಸಿ, ಬೆಂಕಿ ಬಿದ್ದಲ್ಲಿಗೆ ದೌಡಾಯಿಸಬೇಕಾದ ಸನ್ನಿವೇಶವಾಗಿತ್ತು. ಆದರೆ ಅನುಚರ ಪಾತ್ರಧಾರಿ ಬಂದು ಹೇಳುವುದು ನಿಧಾನವಾಯಿತು. ಹಾಗಾಗಿ ಹೊಡೆಯುವ ವ್ಯಕ್ತಿ ನಾಲ್ಕು ಪೆಟ್ಟನ್ನು ಜಾಸ್ತಿಯೇ ಹೊಡೆದಿದ್ದ. ಅಭಿನಯವೆಂಬುದನ್ನು ಮರೆತು ನಿಜವಾಗಿ ಹೊಡೆದಿದ್ದ. ಇದರಿಂದ ಅತ್ತುಬಿಟ್ಟೆ ಎಂದು ಹೇಳುತ್ತಾರೆ. "ಪೆಟ್ರೋಲ್ ಬಂಕಿಗೆ ಬೆಂಕಿ ಬೀಳುವ ಬದಲು ನಮ್ಮಪ್ಪನಿಗೆ ಯಾರಾದರೂ ಪೆಟ್ರೋಲ್ ಸುರಿದು ಬೆಂಕಿ ಹಚ್ಚಿದ್ದರೆ ನನಗೆ ಈ ಕಷ್ಟವೇ ಇರುತ್ತಿರಲಿಲ್ಲ" ಎಂದಾಗ ಜನರು ಗಟ್ಟಿಯಾಗಿ ಚಪ್ಪಾಳೆ ತಟ್ಟುವುದರ ಮೂಲಕ ನನ್ನ ನೋವಿಗೆ ಸ್ಪಂದಿಸಿದರು. ಹೀಗೆ ವೃತ್ತಿಪರ ಮತ್ತು ಹವ್ಯಾಸಿ ಕಲಾವಿದರ ನಡುವೆ ಹೊಂದಾಣಿಕೆಯೇ ಸಮಸ್ಯೆಯಾಗುತ್ತಿತ್ತು. ವೃತ್ತಿಪರರು ನಾಟಕವನ್ನೇ ಹೊಟ್ಟೆಪಾಡಿನ ವೃತ್ತಿಯನ್ನಾಗಿಸಿಕೊಂಡಿದ್ದರೆ, ಹವ್ಯಾಸಿ ಕಲಾವಿದರು ತಮ್ಮ ಸಂತೋಷಕ್ಕಾಗಿ ಆಡುತ್ತಾರೆ. ಸಾಮಾನ್ಯವಾಗಿ ಹವ್ಯಾಸಿಗರಿಗೆ ನಾಟಕದ ಅಭಿನಯದ ಅಭ್ಯಾಸದ ಕೊರತೆ ಇರುತ್ತದೆ. ಇದರಿಂದಾಗಿ ಇವರೀರ್ವರಲ್ಲಿ ಹೊಂದಾಣಿಕೆಯಾಗದೇ ಕೆಲವೊಮ್ಮೆ ಇಂತಹ ಅವಘಡಗಳು ಘಟಿಸುತ್ತವೆ. ಅಲ್ಲದೆ, ಪುರುಷ ಅಹಂಕಾರ ಮಹಿಳೆಯನ್ನು ಯಾವ ಬಗೆಯಲ್ಲಿ ಗೋಳಾಡಿಸುತ್ತದೆ ಅನ್ನುವುದನ್ನು ಕಾಣಬಹುದು. ಮಹಿಳೆಯೆನ್ನುವ ಕಾರಣಕ್ಕೆ ಪುರುಷ ಕಲಾವಿದ ನೀಡುವ ಕಿರುಕುಳವನ್ನು ಸಹ ಸಹಿಸಿಕೊಳ್ಳಬೇಕಾಗುತ್ತದೆ. ಅಭಿನಯಿಸುವಾಗ ಅಗತ್ಯಕ್ಕಿಂತ ಜಾಸ್ತಿ ಮೈಮುಟ್ಟುವುದು, ಹೊಡೆಯುವುದು ಮಾಡಿದಾಗ ಅದನ್ನು ಅನಿವಾರ್ಯವಾಗಿ ಸಹಿಸಿಕೊಳ್ಳಬೇಕು. ನಾಟಕರಂಗದಲ್ಲಿ ಅಭಿನಯಿಸುವಾಗ ಕೆಲವೊಮ್ಮೆ ಸಹಕಲಾವಿದರಿಂದ ನೋವಾದರೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಕಲಾವಿದೆ ಕಲಾಸೇವೆಯೇ ತನ್ನ ಜೀವನದ ಧ್ಯೇಯ ಎಂದುಕೊಳ್ಳಬೇಕು. ಅವರೊಂದಿಗೆ ವೈಮನಸ್ಯವನ್ನು, ದ್ವೇಷವನ್ನು ಸಾಧಿಸದೆ ಸ್ನೇಹವನ್ನು ಬಯಸುವ ಸಂಯಮದ ಬದುಕು ಹೊಂದಿರಬೇಕು. ಇನ್ನೊಂದು ಸಮಸ್ಯೆಯೆಂದರೆ, ಪುರುಷನು ನಿರ್ಭಿಡೆಯಿಂದ ಕುಟುಂಬ, ಸಮಾಜ, ಸಂಸ್ಕೃತಿ, ವ್ಯವಸ್ಥೆಯನ್ನು ಟೀಕಿಸಿ ಮಾತನಾಡಿದಾಗ ಚಪ್ಪಾಳೆ ತಟ್ಟುವ ಜನ ಕಲಾವಿದೆಯೊಬ್ಬಳು ಟೀಕಿಸಿದಾಗ ಸಹಿಸುವುದಿಲ್ಲ. ಇಂತಹ ಹಲವಾರು ಸಮಸ್ಯೆಗಳು ಆಕೆಯ ಬಾಯಿಗೆ ಬೀಗ ಹಾಕಿಸಿದೆ. ರಂಗಭೂಮಿಯಲ್ಲಿ ಪುರುಷನಿಗಿರುವ ಮುಕ್ತ ವಾತಾವರಣ ಸಾಮಾನ್ಯವಾಗಿ ಸ್ತ್ರೀಯರಿಗೆ ಇರುವುದಿಲ್ಲ. ಅಂತಹ ವಾತಾವರಣ ಲಭ್ಯವಾದರೆ ಆಕೆಯ ಪ್ರದರ್ಶನ ಉತ್ತಮಗೊಳ್ಳಲು ಸಾಧ್ಯವಾಗುತ್ತದೆ.

ಇವೆಲ್ಲ ಸಮಸ್ಯೆಗಳನ್ನು ಅನುಭವಿಸುತ್ತ ಸೋಲುತ್ತ ಜಯವನ್ನು ಕಂಡ ಕಲಾವಿದೆಯರು ಹಲವಾರು ಮಂದಿ ನಮ್ಮಲ್ಲಿದ್ದಾರೆ. ರಂಗಭೂಮಿಯಲ್ಲಿ ಕೆಲವರು ಮೂರು ನಾಲ್ಕು ದಶಕಗಳ ಕಾಲ ಉಳಿದಿದ್ದೇ ದೊಡ್ಡ ಸಾಧನೆ. ಪುರುಷರೇ ನಾಟಕ ಮಂಡಳಿಯನ್ನು ನಡೆಸಿಕೊಂಡು ಹೋಗುತ್ತಿದ್ದ ಕಾಲದಲ್ಲಿ ಶ್ರೀ ಚಾಮುಂಡೇಶ್ವರಿ ನಾಟಕ ಮಂಡಳಿಯನ್ನು ನಡೆಸಿದ ಹಿರಿಮೆ ಮಳವಳ್ಳಿ ಸುಂದರಮ್ಮ ಅವರದು. ಅದೇ ರೀತಿ ಪ್ರೇಮಾ ಕಾರಂತರು 'ಬೆನಕ' ಎಂಬ ಮಕ್ಕಳ ನಾಟಕ ಮಂಡಳಿಯನ್ನು ಸ್ಥಾಪಿಸಿದರು. ಪುರುಷರೇ ನಾಟಕದ ವಸ್ತ್ರವಿನ್ಯಾಸ, ರಂಗಸಜ್ಜಿಕೆಯ ವಿನ್ಯಾಸದಲ್ಲಿ, ನಿರ್ದೇಶನದಲ್ಲಿ, ರಚನೆಯಲ್ಲಿ ತೊಡಗಿದ್ದ ಕಾಲದಲ್ಲಿ ಪ್ರೇಮಾ ಕಾರಂತ ಈ ಎಲ್ಲಾ ಕಾರ್ಯಕ್ಷೇತ್ರದಲ್ಲೂ ತನ್ನತನ ಸಾಧಿಸಿ ಮಹಿಳೆಯರ ಅಸ್ತಿತ್ವ ಅನನ್ಯತೆಯನ್ನು ಸ್ಥಾಪಿಸಿದರು. ಕೆ. ನಾಗರತ್ನಮ್ಮನವರು ಪುರುಷ ಪಾತ್ರಗಳಲ್ಲಿಯೂ ಸೈ ಎನಿಸಿಕೊಂಡವರು. ಇವರು ಬಳ್ಳಾರಿಯಲ್ಲಿ ಮಹಿಳಾ ವೃತ್ತಿನಿರತ ಕಲಾವಿದೆಯರ ಸಂಘ ಸ್ಥಾಪನೆ ಮಾಡಿ ಅದರ ಅಧ್ಯಕ್ಷರಾದರು. ಇವರ ಸಾಧನೆಯನ್ನು ಜನರು ಮುಕ್ತ ಮನಸ್ಸಿನಿಂದ ಕೊಂಡಾಡಿದ್ದಾರೆ. ಪ್ರೇಮಾ ಕಾರಂತರ ಸಾಧನೆಯನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿ ಗೌರವಿಸಲಾಗಿದೆ. ಹೀಗೆ ಕಲಾವಿದೆಯರ ಜೀವನಾನುಭವದ ರೋಚಕ ಕಥೆ ತೆರೆದಿಡುವ ಅವರ ಆತ್ಮಕಥೆಗಳು ರಂಗಭೂಮಿ ಕಲಾವಿದೆಯರ ಸಮಸ್ಯೆಗಳ ಬಗೆಗೆ ಸಾಕಷ್ಟು ಒಳನೋಟವನ್ನು ಬೀರುತ್ತವೆ.

**ನಾಗೇಶ ನಾಯ್ಕ**
ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ, ಮಂಗಳಗಂಗೋತ್ರಿ
ಮಂಗಳೂರು ವಿಶ್ವವಿದ್ಯಾನಿಲಯ, ಕೊಣಾಜೆ – ೫೭೪ ೧೯೯, ದ.ಕ.

## ಬಿ. ರಾಮಕೃಷ್ಣರಾವ್ ನಿಧನ

ಕೋಲಾರ ಮೂಲದ ಬಿ. ರಾಮಕೃಷ್ಣರಾವ್ ಜನವರಿಯಲ್ಲಿ ಚೆನ್ನೈನಲ್ಲಿ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಶ್ರೀಯುತರು ಕೆಲಕಾಲ ನವಕರ್ನಾಟಕ ಸಂಸ್ಥೆಯಲ್ಲಿ ಕೆಲಸ ಮಾಡಿದ್ದರು. ಚೆನ್ನೈನ ಸೋವಿಯತ್ ವಾರ್ತಾ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಅವರು 'ಹೊಸತು' ಅಭಿಮಾನಿ ಹಾಗೂ ಬೆಂಬಲಿಗರು. 'ಹೊಸತು' ಹಾಗೂ 'ನವಕರ್ನಾಟಕ' ಅವರಿಗೆ ನಮನ ಸಲ್ಲಿಸುತ್ತದೆ.







**ನೀನ್ಯಾಕೊ ನಿನ್ನ ಹಂಗ್ಯಾಕೊ** (ಕಥಾ ಸಂಕಲನ)

*ಎಸ್. ಬಿ. ಜೋಗುರ*

**ಪುಟ : xvi+೧೩೬ = ೧೫೨**

**ಬೆಲೆ : ರೂ. ೧೦೦**

**ಶೀತಲ್ ನಾಯಕ್**

**ಸಹಿಷ್ಣು ಪ್ರಕಾಶನ,** ಧಾರವಾಡ

*ಬದುಕಿನಲ್ಲಿ ಹಾಸುಹೊಕ್ಕಾಗಿ ಇರುವ ಇಲ್ಲಿನ ಕಥೆಗಳು ಗ್ರಾಮ್ಯ ಜನಜೀವನಕ್ಕೆ ತೀರ ಹತ್ತಿರವಾಗಿವೆ. ಲೋಕದ ಎಲ್ಲ ಕಥನಗಳು ಸಹಜವಾಗಿ ಘಟಿಸುತ್ತವೆ. ಜನಜೀವನ ಮತ್ತು ಅನುಭವಗಳು ಕಥೆಯ ಜೀವಾಳ. ತನ್ನ ಬದುಕಿನ ಅನುಭವದಂತೆ ಇತರರ ಬಾಳನ್ನೂ ಅರ್ಥೈಸಿ ಕೊಂಡಾಗ ಮಾತ್ರ ಒಬ್ಬ ಕಥೆಗಾರ ಅತ್ಯುತ್ತಮ ವಾದುದನ್ನು ಬರೆಯಬಲ್ಲ. ಹಳ್ಳಿಯ ಜೀವನಕ್ಕೂ ನಗರ ಜೀವನಕ್ಕೂ ಅಜಗಜಾಂತರ. ಪ್ರಾಚೀನ ಮತ್ತು ಆಧುನಿಕ ಯುಗಕ್ಕೂ ಈ ಮಾತು ಅನ್ವಯ. ಆಯಾ ಕಾಲದ ಕಥೆಗಳಲ್ಲಿ ಅಂದಂದಿನ ಮೌಲ್ಯ ಅಚ್ಚೊತ್ತಿ ನಿಂತಿರುತ್ತದೆ. ಕಾಲ ಮತ್ತು ದೇಶಗಳಿಗೆ ಇದು ವಿಭಿನ್ನ ಸಂಸ್ಕೃತಿಯಾಗಿ ಗೋಚರಿಸುತ್ತದೆ. ಅದನ್ನು ಗುರುತಿಸುವುದು ಚರಿತ್ರೆಯ ಸೋಜಿಗ. ಇಲ್ಲಿನ ಕಥೆಗಳೂ ಇದಕ್ಕೆ ಹೊರತಾಗಿಲ್ಲ. ಇವು ಈಚಿನ ವಿದ್ಯಮಾನಗಳಿಗೆ ಅನುಸಾರವಾಗಿ ಹೆಣೆಯಲ್ಪಟ್ಟಿವೆ. ಇಲ್ಲಿಯೂ ಅಪ್ಪಟ ಗ್ರಾಮೀಣ ಭಾಷೆ, ನಡವಳಿಕೆ, ನಂಬಿಕೆ, ವೈವಿಧ್ಯಮಯ ಆಚರಣೆ, ತಿಳಿದೋ ತಿಳಿಯದೆಯೋ ಜನರಲ್ಲಿ ಮನೆಮಾಡಿಕೊಂಡಿರುವ ಮೂಢನಂಬಿಕೆ ಎಲ್ಲವೂ ಇವೆ. ಕಥೆಗಳ ಮೂಲಕ ತೆರೆದುಕೊಂಡ ಒಂದು ಸಮಾಜದರ್ಶನ. ಅಂದಮೇಲೆ ಇಲ್ಲಿ ಸಕಲ ಕಲ್ಯಾಣಗುಣಗಳ ವೇಷಧಾರಿಗಳು, ಸಮಾಜಕಂಟಕರು, ಸಮಾಜ ಸೇವಕರು, ಮುರುಕಲು ಗುಡಿಸಲು, ಮಹಡಿ ಮನೆಗಳು, ಒಂದರ ಮೇಲೊಂದು ನಾಜೂಕಾಗಿ ಜೋಡಿಸಲ್ಪಟ್ಟಿವೆ. ಒಂದು ಬಿದ್ದರೆ ಇನ್ನೊಂದು ಆಸರೆ.*



**ಯಾದ್ ವಶೇಮ್** (ನೂರು ಸಾವಿರ ಸಾವಿನ ನೆನಪು) — *ನೇಮಿಚಂದ್ರ*

**ಪುಟ : ೨೮೮** — **ಬೆಲೆ : ರೂ. ೨೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಈ ಪುಸ್ತಕವನ್ನು ಏನೆಂದು ಬಣ್ಣಿಸುವುದು? ಯಹೂದಿಗಳ ಮಾರಣಹೋಮದ ಕಥಾನಕ. ಜನಾಂಗದ್ವೇಷದ ಪರಾಕಾಷ್ಠೆ. ಒಂದಲ್ಲ ಎರಡಲ್ಲ ನೂರು ಸಾವಿರ ಸಾವುಗಳ ನೆನಪನ್ನು ಚರಿತ್ರೆಯಲ್ಲಿ ಅಚ್ಚೊತ್ತಿ ಉಳಿಸಿಹೋದ ಭಯಾನಕ ಅಧ್ಯಾಯ. ಮನುಷ್ಯರ ಹೆಣಗಳ ಮೇಲೆ ಕೇಳಿ ಬಂದ ಮರಣಮೃದಂಗದ ಸದ್ದು. ಸಾವು ಕೇಕೆ ಹಾಕಿ ನರ್ತಿಸಿ ಹೆಚ್ಚು ಕಡಿಮೆ ಪ್ರಪಂಚದಿಂದಲೇ ಯಹೂದಿಗಳನ್ನು ನಾಮಾವಶೇಷ ಮಾಡಿದ ಉಗ್ರ ನೈಜ ಘಟನೆ. ಕಾದಂಬರಿ ರೂಪದಲ್ಲಿ ಚರಿತ್ರೆಯ ಕರಾಳ ದಿನಗಳು ನಿಮ್ಮ ಮುಂದೆ ಹರಡಿಕೊಂಡಿವೆ. ಇಲ್ಲಿ ಮನಸ್ಸು ಪ್ರಫುಲ್ಲಗೊಳ್ಳುವ ಯಾವ ಸಾಲೂ ಇಲ್ಲ. ಎಲ್ಲ ಕಣ್ಣೀರಿನ ಕಥೆ–ವ್ಯಥೆ. ಜರ್ಮನಿಯ ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರನ ಡಕಾವ್ ನಾಜಿ ಕ್ಯಾಂಪಿನ ವಿವರ ರಕ್ತ ಹೆಪ್ಪುಗಟ್ಟಿಸುತ್ತದೆ. ಗ್ಯಾಸ್ ಛೇಂಬರ್‌ನ ವರ್ಣನೆಯಂತೂ ಸುಟ್ಟ ಹೆಣಗಳ ವಾಸನೆ ಈಗಲೂ ಮೂಗಿಗೆ ಬಡಿಯುವಂತಿದೆ. ನೀವು ಈಗಾಗಲೇ ಈ ಪುಸ್ತಕ ಓದಬಾರದೆಂದು ತೀರ್ಮಾನಿಸಿದ್ದೀರಾ? ಬೇಡಿ! ಚರಿತ್ರೆಯನ್ನು ಅದು ಹೇಗೇ ಇರಲಿ ತಿಳಿಯಬೇಕು. ಯಾಕೆ ಗೊತ್ತೇ? ಹಿಟ್ಲರ್‌ನಂಥವರು ಯಾವುದೇ ಗಲ್ಲಿಯಲ್ಲಿ ಯಾವಾಗ ಬೇಕಾದರೂ ಹುಟ್ಟಿ ಬರುವ ಲಕ್ಷಣಗಳು ಈಗ ನಿಚ್ಚಳವಾಗಿವೆ. ಸಾವಿಗೆ ತುತ್ತಾದವರಿಗೆ ಮರುಗಿ ಇಂಥ ಘಟನೆಗಳು ಮರುಕಳಿಸದಂತೆ ಜಾಗ್ರತರಾಗಿರೋಣ. ಇಂಥ ಕ್ರೌರ್ಯ ಖಂಡಿಸೋಣ. ಯಾವುದೇ ಜನಾಂಗ ನೆಮ್ಮದಿಯಿಂದಿರಲಿ.*




**ಪಕ್ಷಿಗಳ ಹಾರಾಟ** — *ಜಿ. ಶ್ರೀನಿವಾಸಮೂರ್ತಿ*

**ಪುಟ : ೪೮** — **ಬೆಲೆ : ರೂ. ೪೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಬಾನಂಗಳದಲ್ಲಿ ಹಾರಾಡುವ ರೆಕ್ಕೆಯ ರಸಿಕರು ನಮ್ಮನ್ನೂ ಆಗಸದಲ್ಲಿ ಹಾರುವಂತೆ ಪ್ರೇರೇಪಿಸುವವು ಎಂದರೆ ತಪ್ಪಲ್ಲ. ನೆಲ ಬಿಟ್ಟು ಬಾನಿನಲ್ಲಿ ತೇಲುವುದೂ ರೆಕ್ಕೆ ಬಡಿಯುತ್ತ ಸಾವಿರಾರು ಮೈಲಿ ಹಾರುವುದೂ ರೋಚಕ ಅನುಭವವಲ್ಲವೇ? ಮಳೆ–ಗಾಳಿ–ಬಿರುಗಾಳಿಗಳಿಗೆ ತಮ್ಮ ಹಾರಾಟದ ತಂತ್ರಗಳನ್ನು ಬದಲಿಸಿಕೊಂಡು ಪಕ್ಷಿಗಳು ಲೀಲಾಜಾಲವಾಗಿ ಹಾರಬಲ್ಲವೆಂದು ಇಲ್ಲಿ ಹೇಳಲಾಗಿದೆ. ಅವುಗಳ ಹಾರುವಿಕೆಯಲ್ಲೂ ವೈಜ್ಞಾನಿಕ ತತ್ವವಿಲ್ಲದೆ ಇದ್ದೀತೇ? ಗಾಳಿಯಲ್ಲಿ ಹಗುರವಾಗಿ ತೇಲಲು ರೆಕ್ಕೆಗಳು, ದಿಕ್ಕು ಬದಲಿಸಲು ಪುಕ್ಕ, ಹಾರಾಟಕ್ಕೆ ಯೋಗ್ಯವೆನಿಸುವ ಅಂಗಾಂಗರಚನೆ ಹಕ್ಕಿಗಳಿಗಿವೆ. ಲೋಕಕ್ಕೆಲ್ಲ ಹಕ್ಕಿ ಎಂಬ ಒಂದೇ ಹೆಸರಾದರೂ ಸುಮಾರು ಹತ್ತು ಸಾವಿರಕ್ಕೂ ಮೀರಿ ಪ್ರಭೇದಗಳು ಇವೆಯಂತೆ. ಪ್ರಾದೇಶಿಕ ಪಕ್ಷಿಯೆಂದು ಗುರುತಿಸಿದರೂ ಎಲ್ಲ ದೇಶಗಳ ಹಕ್ಕಿಗಳೂ ನಿಗದಿತ ಪ್ರದೇಶಕ್ಕೆ ಪ್ರತಿವರ್ಷ ವಲಸೆ ಬಂದು ಮತ್ತೆ ಸ್ವಸ್ಥಾನಕ್ಕೆ ಮರಳುತ್ತವಂತೆ! ಅವು ಧ್ರುವ ಪ್ರದೇಶದಿಂದ ಮತ್ತೊಂದು ಧ್ರುವಕ್ಕೆ ಹೋಗಿಬರುವುದಂತೂ ವಿಸ್ಮಯಕಾರಿ. ಹಕ್ಕಿಗಳಿಗೆ ಯಾವ ದೇಶದ ಗಡಿರೇಖೆಗಳೂ ಲೆಕ್ಕಕ್ಕೇ ಇಲ್ಲ. ಅವು ಸ್ವಚ್ಛಂದ ವಿಹಾರಿ. ನೆಲದ ಹಂಗಿಲ್ಲದ, ಎತ್ತರದ ಮರಗಳಲ್ಲೆ ಗೂಡುಕಟ್ಟಿ ನೆಲೆಸುವ ಸ್ವತಂತ್ರ ಜೀವಿಗಳು. ಇಂತಹ ಹಲವು ಹತ್ತು ರೋಮಾಂಚಕಾರಿ ವಿಚಾರಗಳನ್ನಿಲ್ಲಿ ಚಿತ್ರಸಹಿತ ವಿವರಿಸಲಾಗಿದೆ. ಬನ್ನಿ ಬಾನಾಡಿಗಳ ಹಾರುವ ತಂತ್ರಗಳನ್ನು ಅರಿಯೋಣ.*

---




**ವಿಜ್ಞಾನ** ಸಿರಿ (ವಿಜ್ಞಾನ ಲೇಖನಗಳ ಸಂಕಲನ)

*ಪ್ರ. ಸಂ. : ಡಾ॥ ವಸುಂಧರಾ ಭೂಪತಿ; ಸಂ. : ಜಿ. ವಿ. ನಿರ್ಮಲ, ಗಾಯತ್ರಿ ಮೂರ್ತಿ*

**ಪುಟ : x + ೨೧೪ = ೨೨೪** — **ಬೆಲೆ : ರೂ. ೨೦೦**

**ಕರ್ನಾಟಕ ಲೇಖಕಿಯರ ಸಂಘ,** ೨೦೬, ೨ನೇ ಮಹಡಿ, ವಿಜಯ ಮ್ಯಾನ್‌ಶನ್, ೨ನೇ ತಿರುವು, ೨ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು – ೫೬೦ ೦೧೮

*ವಿಜ್ಞಾನದ ಸಕಲ ಸೌಕರ್ಯಗಳನ್ನೂ ಕ್ಷಣಕ್ಷಣವೂ ಅನುಭವಿಸುವ ನಾವು ಇತ್ತೀಚೆಗೆ ವೈಜ್ಞಾನಿಕ ಚಿಂತನೆಗಳಿಂದ ದೂರ ಸರಿಯುತ್ತಿರುವುದು ಅಕ್ಷಮ್ಯ. ಮಹಾನ್ ವಿಜ್ಞಾನಿಗಳಿಂದ ಬರೆಯಲ್ಪಟ್ಟ ಪ್ರೌಢ ಪ್ರಬಂಧಗಳು ಹೆಚ್ಚಾಗಿ ಸಂಶೋಧನೆ ಅಧ್ಯಯನಗಳಿಗೆ ಮೀಸಲಾಗಿದ್ದು ಸಾಮಾನ್ಯ ಜನರಿಗೆ ತಲುಪುವುದು ಕಷ್ಟ. ಆದರೇನಂತೆ ಅವನ್ನೆಲ್ಲ ಓದಿಕೊಂಡು ವಿಜ್ಞಾನ ಬರಹಗಾರರು ಅವನ್ನು ಸರಳಗೊಳಿಸಿ ಪ್ರಾಂತೀಯ ಭಾಷೆಗಳಲ್ಲಿ ಬರೆದಾಗ ವಿಜ್ಞಾನದ ಪ್ರಸಾರ ಸುಲಭಸಾಧ್ಯ. ವಿಶೇಷವೆಂದರೆ ಇಲ್ಲಿನ ಎಲ್ಲ ಲೇಖನಗಳನ್ನು ಮಹಿಳೆಯರೇ ಬರೆದಿದ್ದು, ಪ್ರಧಾನ ಸಂಪಾದನೆ / ಸಂಪಾದಕತ್ವ ಎಲ್ಲವೂ ಮಹಿಳೆಯರೇ ನಿರ್ವಹಿಸಿದ್ದಾರೆ. ವಿಜ್ಞಾನದ ವಿವಿಧ ರಂಗಗಳನ್ನು ಪ್ರತಿನಿಧಿಸುವ ಬರಹಗಳು ನಮ್ಮ ದೈನಂದಿನ ವ್ಯವಹಾರಗಳಿಗೆ ತೀರ ನಿಕಟವಾಗಿ ಉಪಯುಕ್ತವಾಗಿವೆ. ವಿಜ್ಞಾನದ ನಿಖರ ಮಾಹಿತಿ ಒದಗಿಸುವ ಇವು ಮೂಢನಂಬಿಕೆಗಳನ್ನು ತೊಲಗಿಸುವಲ್ಲಿಯೂ ಸಹಾಯಕವಾಗಿವೆ. ಕೆಲವು ಕಡೆ ವಿಜ್ಞಾನದ ದೆಸೆಯಿಂದ ನಾವು ಅತಿ ಸೌಲಭ್ಯಗಳನ್ನು ಬಯಸಿ ಉಪಯೋಗಿಸುವ ಮೊಬೈಲ್ ಫೋನ್ ಬಗ್ಗೆ ನಿಜಾಂಶವನ್ನು ತಿಳಿಸುವಲ್ಲಿ ಲೇಖಕಿ ನೇಮಿಚಂದ್ರ ಕಣ್ತೆರೆಸುವ ಲೇಖನ ನೀಡಿದ್ದಾರೆ. ಅತಿಬಳಕೆ ಅಪಾಯಕಾರಿಯೆಂದು ಎಚ್ಚರಿಸಿದ್ದಾರೆ. ಹೆಚ್ಚಿನ ಲೇಖನಗಳು ನಾವು ದಿನವೂ ಎದುರಿಸುವ ನಿತ್ಯೋಪಯೋಗಿ ವಸ್ತುಗಳತ್ತಲೇ ಕೇಂದ್ರೀಕೃತವಾಗಿವೆ. ಸೌಲಭ್ಯಗಳ ಜೊತೆಗಿನ ಅಪಾಯಗಳನ್ನು ಎತ್ತಿ ತೋರಿಸಲಾಗಿದೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

**ಶಶಿಧರ ಎಂ. ಪಾಟೀಲ**

# ಉಗುಳು ಸೇವೆ

ಒಂದು ಮುಂಜಾನೆ ನಾನು ಹುಬ್ಬಳ್ಳಿಯ ಬಸ್‌ಸ್ಟ್ಯಾಂಡ್‌ಗೆ ಅತ್ಯಾಧುನಿಕ ಎ. ಸಿ. ಬಸ್‌ನಿಂದ ಬಂದೆನು. ನನ್ನ ಭಾರವಾದ ಎರಡು ಬ್ಯಾಗ್‌ಗಳನ್ನು ತೆಗೆದುಕೊಂಡು ಇಳಿಯಲು ಕೊನೆಯ ಪಾವಟಿಗೆ ಬಂದು ನೋಡಿದರೆ ಕೆಳಗೆ ಕಾಲು ಇಡಲಾರದಂತೆ ಉಗುಳಿಬಿಟ್ಟಿದ್ದಾರೆ. ಅಲ್ಲಿಯವರೆಗೆ ಉಗುಳನ್ನು ಬಾಯಿಯಲ್ಲಿ ತುಂಬಿಕೊಂಡು ರೆಡಿಯಾಗಿ ಕುಳಿತಿದ್ದರೆನಿಸುತ್ತದೆ. ನೆಲ ಸಿಕ್ಕಿದ ತಕ್ಷಣವೇ ಉಗುಳಿ ಹೋಗಿದ್ದರು. ಇತ್ತೀಚೆಗೆ ಬಾಗಲಕೋಟೆ, ಬಿಜಾಪುರ, ಇಳಕಲ್ಲು ಹೀಗೆ ಅನೇಕ ಬಸ್‌ಸ್ಟ್ಯಾಂಡ್‌ಗಳನ್ನು ಆಧುನಿಕ ರೀತಿಯಲ್ಲಿ ನುಣುಪಾದ ನೆಲ, ಗ್ರ್ಯಾನೈಟ್ ಕಲ್ಲು ಬಳಸಿ ಚಂದಮಾಡಿದ್ದಾರೆ. ಆದರೆ ಅದನ್ನು ಕಾಣುವ, ಅನುಭವಿಸುವ ಭಾಗ್ಯ ಮಾತ್ರ ನಮಗಿಲ್ಲ. ನೆಲದ ಮೇಲೆಲ್ಲಾ ಉಗುಳಿನ ರಂಗೋಲಿ. ಬ್ಯಾಗ್‌ಗಳನ್ನು ಎಳೆದುಕೊಂಡು ಹೋಗಲಾಗುವದಿಲ್ಲ ಅಥವಾ ಕೆಳಗೆ ಇಡಲು ಸ್ವಚ್ಛ ಜಾಗ ಇರುವದಿಲ್ಲ. ಭಾರವಾದ ಬ್ಯಾಗ್‌ಗಳನ್ನು ಹೊತ್ತುಕೊಂಡು ಎಲ್ಲೆಲ್ಲೂ ಇರುವ ಹಸಿ ಉಗುಳನ್ನು ತುಳಿಯದೆ, ಜಿಗಿಯುತ್ತ ದಾಟಬೇಕು. ಈ ಉಗುಳು ನಮ್ಮ ಕಾಲಿಗೆ, ಮಕ್ಕಳ ಕಾಲಿಗೆ, ಬ್ಯಾಗ್, ಸೂಟ್‌ಕೇಸ್‌ಗಳಿಗೆ ಹತ್ತಿ, ಅಲ್ಲಿಂದ ಬಸ್ ಸೀಟಿಗೆ, ಕೈಗೆ, ಮೈಗೆ, ಮನೆಗೆ... ಹೀಗೆ ದೇವಲೋಕದವರೆಗೂ ಹಬ್ಬಿಬಿಡುತ್ತದೆ. ಬಸ್‌ನಲ್ಲಿ ಕಿಟಕಿಯ ಕಡೆ ಸೀಟ್ ಸಿಕ್ಕಿದೆಯೆಂದು ಸಂತೋಷಪಡುವಂತಿಲ್ಲ. ಕಿಟಕಿಯ ಮೇಲೆ ಮತ್ತು ಸೀಟ್‌ನ ಮೂಲೆಯಲ್ಲಿ ಉಗುಳಿನ ಹನಿಗಳು ಇರುವದು ಸಾಮಾನ್ಯ. ಇನ್ನು ಬಸ್‌ನ ಹೊರಮೈಯಂತೂ ಉಗುಳಿನ ಚಿತ್ತಾರದಿಂದ "ಅಲಂಕೃತ"ವಾಗಿರುತ್ತದೆ. ಬಸ್‌ನಲ್ಲಿ ಹೋಗುವಾಗ ಮುಂದೆ ಕುಳಿತವರು ಉಗುಳಿದಾಗ ಹಿಂದೆ ಕುಳಿತವರು ಸಣ್ಣ ತುಂತುರು ಮಳೆಯನ್ನು ಮೌನವಾಗಿ ಅನುಭವಿಸುವರು. ಜಗಳ ಮಾಡಿದರೆ "ಉಗುಳುವವರು ನಾಚಿಕೆಯಿಲ್ಲದೆ" ಎಲ್ಲಿ ಸಿಡಿದಿದೆ ಎವಿಡೆನ್ಸ್ ತೋರಿಸು ಎನ್ನುತ್ತಾರೆ. ಅಂದರೆ ನೀವು ಎವಿಡೆನ್ಸ್ ಸಿಗುವವರೆಗೆ ಇನ್ನೂ ಬಹಳಷ್ಟನ್ನು ಉಗುಳಿಸಿ ಕೊಳ್ಳಬೇಕು. ವಾಹನದಲ್ಲಿ ಹೋಗುವವರು ಕಿಟಕಿಯ ಹೊರಗೆ ತಲೆಹಾಕಿ ನಿರಂತರವಾಗಿ ಉಗುಳುವದರಿಂದ ಸೂಕ್ಷ್ಮವಾದ ತುಂತುರು ಹನಿಗಳ ಮೋಡವೇ ಗಾಳಿಯಲ್ಲಿ ಹಾರಾಡುವದನ್ನು ವೈಜ್ಞಾನಿಕವಾಗಿ ವಿಶ್ಲೇಷಣೆ ಮಾಡಿತೋರಿಸಬಹುದು. ನೀವು ಹುಬ್ಬಳ್ಳಿ – ಧಾರವಾಡದ ನಡುವೆ ದ್ವಿಚಕ್ರವಾಹನದಲ್ಲಿ ಹೋಗುವವರಾದರೆ ಎಂಜಲು ಸೇವೆಯಲ್ಲ, ಎಂಜಲಿನಲ್ಲಿ ಸ್ನಾನ ಮಾಡಿದ ಪುಣ್ಯ ಬರುತ್ತದೆ. ಒಮ್ಮೆ

ಉಗುಳಿನಿಂದ ಹರಡುವ ರೋಗಗಳು ಸಾಮಾನ್ಯವಾದ ನೆಗಡಿಯಿಂದ ಹಿಡಿದು ಭಯಾನಕವಾದ ಬಿಳಿ ಕಾಮಣಿ (ಹೆಪಟೈಟಿಸ್-ಬಿ ಎಂದರೆ ಜಾಂಡಿಸ್) ವರೆಗೆ ಇರುವವು. ಕಿಸ್ಸಿಂಗ್ ಡಿಸೀಸ್ ಎಂದು ಕರೆಯಲ್ಪಡುವ ವೈರಲ್ ಸೋಂಕು ರೋಗದಿಂದ ಅನೇಕರು ಬಾಧಿತರಾಗುತ್ತಾರೆ. ಇದು ಹೆಸರೇ ಸೂಚಿಸುವಂತೆ ಚುಂಬನದಿಂದ, ಉಗುಳು ಹಚ್ಚಿ ಹಣ ಎಣಿಸುವದರಿಂದ, ಗ್ಲಾಸನ್ನು ಕಚ್ಚಿ ನೀರು ಕುಡಿಯುವದರಿಂದ... ಹೀಗೆ ಲಾಲಾರಸದಿಂದ ಒಬ್ಬರಿಂದೊಬ್ಬರಿಗೆ ಹರಡುತ್ತದೆ. ಆದ್ದರಿಂದ ಈಗ ಸಾರ್ವಜನಿಕ ಸ್ಥಳಗಳಲ್ಲಿ ನೀರು ಮತ್ತು ಚಹವನ್ನು ಪ್ಲಾಸ್ಟಿಕ್ ಕಪ್‌ಗಳಲ್ಲಿ ಕೊಡಲಾಗುತ್ತದೆ. ನಿಜವಾಗಿಯೂ ಪ್ಲಾಸ್ಟಿಕ್ ಲೋಟಗಳನ್ನು ಬಳಸುವದು ಆರೋಗ್ಯದ ಕಾಳಜಿಯಿಂದಲ್ಲ. ಬಳಸಿದ ನಂತರ ತೊಳೆಯುವ ತೊಂದರೆ ತಪ್ಪಿಸುವ ಸಲುವಾಗಿ. ಹೀಗೆ ಬಳಸಿ ಎಸೆಯಲ್ಪಡುವ ಪಾತ್ರೆಗಳಿಂದ ಸೋಂಕು ರೋಗಗಳು ಕಡಿಮೆಯಾಗುವ ದಾದರೂ ಪ್ಲಾಸ್ಟಿಕ್ ಮಾಲಿನ್ಯ ಹೆಚ್ಚಾಗಿ ಬೇರೆ ರೀತಿಯ ರೋಗಗಳಿಗೆ ದಾರಿಯಾಗುವದು.



ಸ್ಕೂಟರ್‌ನಲ್ಲಿ ಹೋಗುವಾಗ ಯಾರೋ ಉಗುಳಿದ್ದು ನೇರವಾಗಿ ನನ್ನ ಮೇಲೆಯೇ ಬಿದ್ದಿತ್ತು. ಮನೆಗೆ ಹೋಗಿ ಬಕೇಟಿನಲ್ಲಿ ಅಂಗಿಯನ್ನು ನೆನೆಸಿದಾಗ ನೀರೆಲ್ಲಾ ಕೆಂಪಗೆ ರಕ್ತದಂತೆ ಆಗಿತ್ತು.

ನಾವು ಚಿಕ್ಕವರಿದ್ದಾಗ ಒಂದು ಒಗಟು ತುಂಬ ಪ್ರಚಲಿತವಾಗಿತ್ತು : "ಇಲ್ಲಿ ಬಳಬಳ ಅಲ್ಲಿ ಬಳಬಳ. ಕಲ್ಯಾಣತನಕ ಬಳಬಳ." ಇದರ ಉತ್ತರ ಕುರಿ ಅಥವಾ ಆಡಿನ ಹಿಕ್ಕಿ. ಏಕೆಂದರೆ ಯಾವುದೇ ಬಯಲು ಜಾಗವಾದರೂ ಅಲ್ಲಿ ಕುರಿ ಹಿಕ್ಕಿ ಇದ್ದೇ ಇರುತ್ತಿತ್ತು. ಇದೇ ಒಗಟನ್ನು ಈ ಕಾಲದಲ್ಲಿ ಹೀಗೆ ಮಾರ್ಪಡಿಸ ಬಹುದು : "ಅಲ್ಲಿ ಪಿಚಪಿಚ ಇಲ್ಲಿ ಪಿಚಪಿಚ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪಿಚಪಿಚ." ಉಗುಳುವದರ ವಿರುದ್ಧ ಯಾರಿಗೆ ದೂರುವದು ? ಉಗುಳುವವರಲ್ಲಿ ಯುವಕರು, ಮುದುಕರು, ಹಳ್ಳಿಯವರು, ಪಟ್ಟಣದವರು, ಅಧಿಕಾರಿ, ಜವಾನ, ಸನಾತನಿ, ವೈಚಾರಿಕ, ಹಿಂದು, ಮುಸ್ಲಿಂ ಯಾವುದೇ ಭೇದಭಾವವಿಲ್ಲ. ಅವರೆಲ್ಲರನ್ನೂ ಸೇರಿಸಿ ಉಗುಳು 'ಮಾರಿ'ಯರು ಎಂದು ಕರೆಯಬಹುದು. ದಾರಿಯಲ್ಲಿ ನಾಲ್ಕು ಮಂದಿ ಗೆಳೆಯರು ಮಾತನಾಡುತ್ತ ನಿಂತಾಗ ತಮ್ಮ ಸುತ್ತಲೂ ಉಗುಳಿ ಲಕ್ಷ್ಮಣರೇಖೆಯಂತೆ ಗುಟಕಾ ಗೆರೆ ಮೂಡಿಸಿರುತ್ತಾರೆ. ಉಗುಳುವವರಲ್ಲಿ ಶ್ರೇಷ್ಠರಾದ ವರನ್ನು ಗುರುತಿಸಿ 'ಉಗುಳು ವೀರ' ಎಂಬ ಬಿರುದು ಕೊಡಬೇಕು. ಕೆಲವರು ಶಿವನು ಹಾಲಾಹಲ ಗಂಟಲಿನಲ್ಲಿ ಧರಿಸಿದಂತೆ ಬಾಯಿಯಲ್ಲಿ ಗುಟಕಾವನ್ನು ಧರಿಸಿ ಸಮಾಧಿ ಸುಖದಲ್ಲಿ ಇರುತ್ತಾರೆ. ಆಗ ಅವರನ್ನು ಮಾತನಾಡಿಸಿದರೆ ನಿಮ್ಮ ಮೇಲೆ ಲಾಲಾರಸ ಉಕ್ಕಿ ಹರಿಯಬಹುದು. ಆದ್ದರಿಂದ ಗುಟಕಾಧಾರಿಗಳನ್ನು ಏನಾದರೂ ಮಾತನಾಡಿಸಬೇಕಾದರೆ ಸುರಕ್ಷಿತ ಅಂತರ ಇರಲಿ. ಸಾರ್ವಜನಿಕ ಕಟ್ಟಡಗಳ ಮೂಲೆಗಳು ಗುಟಕಾ ಉಗುಳಲೆಂದೆ ಇರುತ್ತವೆ. ಒಮ್ಮೆ ಕೋರ್ಟಿನ ಪಾವಟಿಗೆಯ ಮೂಲೆಗಳನ್ನು ಸ್ವಚ್ಛಗೊಳಿಸಿ ದೇವರ ಚಿತ್ರಗಳನ್ನು ಅಂಟಿಸಿದ್ದರು. ಆಗ ಅದರ ವಿರುದ್ಧ ದಿಕ್ಕಿನ ರೇಲಿಂಗ್‌ಗೆ ಉಗುಳಿದ್ದರು. ಅದು ದೇವರ ಮುಂದೆ ಕುಂಕುಮಾರ್ಚನೆ ಮಾಡಿದಂತಾಗಿತ್ತು. ಉಗುಳುವವರು ಸಹ ಅಸಹಾಯಕರು. ಏಕೆಂದರೆ ಒಮ್ಮೆ ಬಾಯಿ ತುಂಬಿ ಬಂದಾಗ ಉಗುಳದೆ ತಡೆಯ ಲಾಗುವದಿಲ್ಲ. ಇದು ಮಾತಿಗೂ ಅನ್ವಯಿಸುತ್ತದೆ. ಮಾತನಾಡಲು ಯಾರೂ ಸಿಗದಿದ್ದರೆ ನಾವೇ ಮಾತನಾಡಿಕೊಳ್ಳುತ್ತೇವೆ. ಈ ಲೇಖನವೂ ನಾನೇ ಮಾತನಾಡಿಕೊಳ್ಳುವದರಿಂದ ಆಗಿದೆ.

ನಮ್ಮ ಉತ್ತರ ಕರ್ನಾಟಕದ ರಸ್ತೆಗಳು, ಬಸ್ ಸ್ಟ್ಯಾಂಡ್, ಸರಕಾರಿ ಕಚೇರಿ, ಷಾಪಿಂಗ್ ಕಾಂಪ್ಲೆಕ್ಸ್, ಆಟದ ಮೈದಾನ, ಉದ್ಯಾನವನ, ಹುಲ್ಲಿನ ಲಾನ್, ದೇವಸ್ಥಾನಗಳ ಆವರಣ ಹೀಗೆ ಎಲ್ಲಾ ಸಾರ್ವಜನಿಕ ಸ್ಥಳಗಳ ಮೇಲೆ ಉಗುಳಿನ ಒಂದು ಪದರವನ್ನೇ ಕಾಣಬಹುದು. ಇನ್ನು ಎಲ್ಲೆಂದರಲ್ಲಿ ಬಿದ್ದಿರುವ ಗುಟಕಾ ಚೀಟಿಗಳದು ಇನ್ನೊಂದು ಸಮಸ್ಯೆ. ಬರೀ ಗುಟಕಾ ತಿನ್ನುವವರು ಮಾತ್ರವಲ್ಲ, ಆಗಾಗ ಕಾರಣವಿಲ್ಲದೆ ಸ್ಟೈಲ್‌ಗಾಗಿ ಉಗುಳುವದೂ ಸಹ ನಮ್ಮ ಜನರ ಚಟ. ನಾನೂ ಚಿಕ್ಕವನಿದ್ದಾಗ ಒಮ್ಮೆ ಈ ಚಟಕ್ಕೆ ಬಿದ್ದಿದ್ದೆ. ಆಗ ನನ್ನ ತಾಯಿ ಒಂದು ಗಾದೆ ಮಾತು ಹೇಳುತ್ತಿದ್ದಳು: "ಉಗುಳತಾ ಉಗುಳತಾ ರೋಗ, ಹಾಡತಾ ಹಾಡತಾ ರಾಗ." ಇದರ ಅರ್ಥ ಬಾಯಿ ಇನ್‌ಪುಟ್ ಪೋರ್ಟ್. ಅದರಿಂದ ಏನಾದರೂ ಔಟ್‌ಪುಟ್ ಬಂದರೆ ಅದು ರೋಗದ ಲಕ್ಷಣ. ಈಗ ಹಿರಿಯರು ಇಂತಹ ಮಾತು ಗಳನ್ನು ಹೇಳುತ್ತಾರೋ ಇಲ್ಲವೋ ಗೊತ್ತಿಲ್ಲ. ಆದರೆ ಡಾಕ್ಟರರು ಮಾತ್ರ ಬಾಯಿಯಲ್ಲಿ ಆಗಾಗ ಉಗುಳು ಬರುವದು ಸಹಜ ಮತ್ತು ಅದನ್ನು ಅವಶ್ಯವಾಗಿ ನುಂಗಬೇಕು ಎಂದು ಹೇಳುತ್ತಾರೆ. ಬಾಯಲ್ಲಿರುವ ರೋಗಾಣುಗಳ ಬಗ್ಗೆ ಚಿಂತಿಸುವ ಅಗತ್ಯವಿಲ್ಲ. ಏಕೆಂದರೆ ಹೊಟ್ಟೆಗೆ ಹೋದ ತಕ್ಷಣ ಅವು ತೀಕ್ಷ್ಣವಾದ ಜಠರಾಮ್ಲದಲ್ಲಿ ಸತ್ತು ಹೋಗುತ್ತವೆ. ರೋಗ ಬರಿಸುವ ರೋಗಾಣುಗಳು ಏನಿದ್ದರೂ ಹೊರಗಿನಿಂದ ಬರುತ್ತವೆ. ನಾನು ಶಾಲಾ ಪುಸ್ತಕದಲ್ಲಿ ನೋಡಿದ ಒಂದು ಚಿತ್ರ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಅದು ಸೋಂಕು ರೋಗಗಳ ಬಗ್ಗೆ ಪಾಠವಾಗಿತ್ತು. ಟಿ.ಬಿ. ರೋಗಿಯು ಕೆಮ್ಮಿದಾಗ ಅತಿಸೂಕ್ಷ್ಮವಾದ ತುಂತುರು ಹನಿಗಳಿಂದ ಬ್ಯಾಕ್ಟೀರಿಯಾಗಳು ಗಾಳಿಯಲ್ಲಿ ಹರಡಿ ನಿರೋಗಿಗೆ ತಲುಪುವದನ್ನು ಆ ಚಿತ್ರದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ತೋರಿಸಿದ್ದರು. ಆದ್ದರಿಂದ ಕೆಮ್ಮುವಾಗ, ಸೀನುವಾಗ, ಬಾಯಿಗೆ ವಸ್ತ್ರವನ್ನು ಅಡ್ಡಹಿಡಿಯುವಂತೆ ಗುರುಗಳು ನಮಗೆ ಮನವರಿಕೆ ಮಾಡಿಸಿದ್ದರು. ಉಗುಳುವದಂತೂ ನಿಷಿದ್ಧ ವಾಗಿತ್ತು. ಬಾಯಿಯಲ್ಲಿ ಕಫ ಬಂದಾಗ ಉಗುಳಿ ಅದರ ಮೇಲೆ ಹಿಡಿ ಮಣ್ಣನ್ನು ಹಾಕುತ್ತಿದ್ದೆವು. ಮುಪ್ಪಾನು ಮುದುಕರು ಸಹ ಕಫವನ್ನು ಉಗುಳಿದಾಗ ಅಲ್ಲಿಯೇ ನಿಂತು ಯಾರಾದರೂ ಹುಡುಗರ ಸಹಾಯದಿಂದ ಅದನ್ನು ನೊಣ ಕೂಡದಂತೆ ಮಣ್ಣಿನಿಂದ ಮುಚ್ಚಿಸಿ ಮುಂದೆ ಹೋಗುತ್ತಿದ್ದರು. ಈಗಿನವರು ಹಿಂದೆ ಮುಂದೆ ನೋಡದೆ ಪಿಚಕ್ಕನೆ ಉಗುಳಿಬಿಡುತ್ತಾರೆ. ಕೆಲವು ಹನಿಗಳು ತಮಗೇ ಸಿಡಿದರೂ ಸಿಡಿಮಿಡಿ ಮಾಡಿಕೊಳ್ಳುವದಿಲ್ಲ. ಉಗುಳು ಕೆಲವೇ ಕ್ಷಣಗಳಲ್ಲಿ ತಿರುಗಾಡುವವರ ಕಾಲಿಗೆ, ವಾಹನಗಳ ಚಕ್ರಗಳಿಗೆ ಹತ್ತಿ ಊರೆಲ್ಲಾ ಪಸರಿಸಿಬಿಡುತ್ತದೆ. ಕಾಯಿಪಲ್ಲೆ, ಹಣ್ಣು, ಹೂ ಮಾರುವವರು ರಸ್ತೆ ಬದಿ ನೆಲದ ಮೇಲೆಯೇ ಕುಳಿತು ವ್ಯಾಪಾರ ಮಾಡುತ್ತಾರೆ. ಮಾರುವವರು, ಕೊಳ್ಳುವವರು ಬಾಯಿಯಿಂದ ಲಾಲಾಜಲವನ್ನು ಸಿಡಿಸುತ್ತ ಪುಟ್ಟಿಯಲ್ಲಿರುವ ವಸ್ತುಗಳನ್ನು ಪವಿತ್ರ ಮಾಡುತ್ತಿರುತ್ತಾರೆ. ಭಾರತದಲ್ಲಿ ಕ್ಷಯರೋಗಿಗಳು ಅತಿ ಹೆಚ್ಚು ಇರುವದರಲ್ಲಿ ಏನು ಆಶ್ಚರ್ಯ ?

ಉಗುಳಿನಿಂದ ಹರಡುವ ರೋಗಗಳು ಸಾಮಾನ್ಯ ನೆಗಡಿಯಿಂದ ಹಿಡಿದು ಭಯಾನಕವಾದ ಬಿಳಿ ಕಾಮಣಿ (ಹೆಪಟೈಟಿಸ್–ಬಿ ಎಂದರೆ ಜಾಂಡಿಸ್)ವರೆಗೆ ಇರುವವು. ಕಿಸ್ಸಿಂಗ್ ಡಿಸೀಸ್ ಎಂದು ಕರೆಯಲ್ಪಡುವ ವೈರಲ್ ಸೋಂಕು ರೋಗದಿಂದ ಅನೇಕರು ಬಾಧಿತರಾಗುತ್ತಾರೆ. ಇದು ಹೆಸರೇ ಸೂಚಿಸುವಂತೆ ಚುಂಬನದಿಂದ, ಉಗುಳು ಹಚ್ಚಿ ಹಣ ಎಣಿಸುವದರಿಂದ, ಗ್ಲಾಸನ್ನು ಕಚ್ಚಿ ನೀರು ಕುಡಿಯುವದರಿಂದ... ಹೀಗೆ ಲಾಲಾರಸದಿಂದ ಒಬ್ಬರಿಂದೊಬ್ಬರಿಗೆ ಹರಡುತ್ತದೆ. ಆದ್ದರಿಂದ ಈಗ ಸಾರ್ವಜನಿಕ ಸ್ಥಳಗಳಲ್ಲಿ ನೀರು ಮತ್ತು ಚಹ ಪ್ಲಾಸ್ಟಿಕ್ ಕಪ್‌ಗಳಲ್ಲಿ ಕೊಡಲಾಗುತ್ತದೆ. ನಿಜವಾಗಿಯೂ ಪ್ಲಾಸ್ಟಿಕ್ ಲೋಟಗಳನ್ನು ಬಳಸುವದು ಆರೋಗ್ಯದ ಕಾಳಜಿಯಿಂದಲ್ಲ. ಬಳಸಿದ ನಂತರ ತೊಳೆಯುವ ತೊಂದರೆ ತಪ್ಪಿಸುವ ಸಲುವಾಗಿ. ಹೀಗೆ ಬಳಸಿ ಎಸೆಯಲ್ಪಡುವ ಪಾತ್ರೆಗಳಿಂದ ಸೋಂಕು ರೋಗಗಳು ಕಡಿಮೆಯಾಗುವದಾದರೂ ಪ್ಲಾಸ್ಟಿಕ್ ಮಾಲಿನ್ಯ ಹೆಚ್ಚಾಗಿ ಬೇರೆ ರೀತಿಯ ರೋಗಗಳಿಗೆ ದಾರಿಯಾಗುವದು. ನಾವು ಅನೇಕ ಉತ್ಪನ್ನಗಳನ್ನು ಉದಾಹರಣೆಗೆ ಫಿನೈಲ್, ಹಿಟ್, ಹಾರ್ಪಿಕ್, ಡೆಟಾಲ್ ಇತ್ಯಾದಿಗಳನ್ನು ಕೀಟಾಣುಗಳ ಭಯದಿಂದಲೇ ಬಳಸುತ್ತೇವೆ. ಆದರೆ ನಾವು ಈ ಉಗುಳುವ ಚಟದೆಡೆಗೆ ಅಲಕ್ಷ್ಯ ದಿಂದಿರುವೆವು. ಇದನ್ನು ಬರೀ ಕಾನೂನಿಂದ ಮಾತ್ರ ಸರಿಪಡಿಸಲಾಗದು. ನಾನು ಅತಿ ಸಣ್ಣವನಿ ದ್ದಾಗಲೇ ಬಸ್‌ಗಳಲ್ಲಿ 'ಧೂಮಪಾನ ನಿಷೇಧಿಸಿದೆ' ಎಂದು ಬರೆದಿರುತ್ತಿತ್ತು. ಆದರೆ ಅವುಗಳಲ್ಲಿ ಸಂಪೂರ್ಣ ಧೂಮಪಾನ ನಿಷೇಧ ಸಾಧಿಸಲು ೫೦ ವರ್ಷಗಳು ಹಿಡಿಯಿತು. ಈಗ ಸಾರ್ವಜನಿಕ ಸ್ಥಳಗಳಲ್ಲಿ, ಬಸ್, ರೈಲುಗಳಲ್ಲಿ ಮೊಬೈಲ್ ಸಂಗೀತ, ಧ್ವನಿವರ್ಧಕ, ಗುಟಕಾ ಹೀಗೆ ಅನೇಕ ಹೊಸ ಸಮಸ್ಯೆಗಳು ನಮ್ಮ ಜೀವನವನ್ನು ನರಕ ಮಾಡಿವೆ. ದಿವಂಗತ ಜಸ್‌ಪಾಲ್ ಭಟ್ಟಿಯವರು (ಖ್ಯಾತ ಟಿವಿ ಹಾಸ್ಯ ಧಾರಾವಾಹಿ ಫ್ಲಾಪ್ ಶೋ), "ನಮಗೆ ಸ್ವಾತಂತ್ರ್ಯ ಇರುವದೇ ಎಲ್ಲೆಂದರಲ್ಲಿ ಕಸ ಚೆಲ್ಲಲು ಮತ್ತು ಉಗುಳಲು. ನೀವು ಬೇಕಾದರೆ ವಾಂತಿ ಮಾಡಿರಿ. ನಾನು ಏನೂ ಕೇಳುವದಿಲ್ಲ" ಎಂದು ಹೇಳುತ್ತಾರೆ. ನಾಗರಿಕತೆಯ ಕಡೆ ನಮ್ಮ ನಡಿಗೆ ಅದೆಷ್ಟು ನಿಧಾನ !

**ಶಶಿಧರ ಎಂ. ಪಾಟೀಲ**
ಬಸವೇಶ್ವರ ಇಂಜಿನಿಯರಿಂಗ್ ಕಾಲೇಜು
ಬಾಗಲಕೋಟೆ – ೫೮೭ ೧೦೨



**ಅಭಿನಂದನೆಗಳು**

ಶತಾಯುಷಿ ಪ್ರೊ॥ ಜಿ. ವೆಂಕಟಸುಬ್ಬಯ್ಯನವರಿಗೆ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಕೊಡುವ ೨೦೧೧ನೇ ಸಾಲಿನ ಪ್ರತಿಷ್ಠಿತ 'ಪಂಪ ಪ್ರಶಸ್ತಿ' ಲಭಿಸಿರುವುದು ಸಂತೋಷದ ಸಂಗತಿ. ಶ್ರೀಯುತರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದಿಂದ ಅಭಿವಂದನೆಗಳು







## 2015 ಮಾರ್ಚ್ 8ರಂದು
## 100 ಕೃತಿಗಳ ಲೋಕಾರ್ಪಣೆ

ಅಧ್ಯಕ್ಷತೆ

**ಡಾ|| ನಾ. ಡಿ'ಸೋಜ**

ಮುಖ್ಯ ಅತಿಥಿ

**ಶ್ರೀಮತಿ ಫಿಲೋಮಿನಾ ನಾ. ಡಿ'ಸೋಜ**

ಸ್ಥಳ : **ಗಾಂಧಿ ಭವನ, ಕುಮಾರ ಕೃಪ ರಸ್ತೆ ಬೆಂಗಳೂರು–560 001**

ಸಮಯ : **ಬೆಳಗ್ಗೆ 10.30ಕ್ಕೆ**

(ಭಾನುವಾರ 08.03.2015)

**ಎಲ್ಲರಿಗೂ ಆತ್ಮೀಯ ಸ್ವಾಗತ**




ಥಾಮಸ್ ಆಲ್ವಾ ಎಡಿಸನ್

ಧರ್ಮಾನಂದ ಕೊಸಾಂಬಿ

ಟಿಪ್ಪು ಸುಲ್ತಾನ್

ವಿವೇಕಾನಂದ

ಮದರ್ ತೆರೇಸಾ

ವಿ. ಕೆ. ಮೂರ್ತಿ

ಪ್ರತಿಯೊಂದರ ಬೆಲೆ ₹ 25. ಮೂರು ವರ್ಷದ 'ಹೊಸತು' ಚಂದಾದಾರರಿಗೆ ರಿಯಾಯಿತಿ ಬೆಲೆ ₹ 20.

**ಆನ್‌ಲೈನ್ ಮೂಲಕವೂ ಲಭ್ಯ**




**www.navakarnataka.com**

8 ಸಂಪುಟಗಳಲ್ಲಿ

# ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ

(GLOBAL PHILOSOPHY FOR EVERYMAN ಸಂಪುಟಗಳ ಕನ್ನಡ ಆವೃತ್ತಿ)

**ಪ್ರಧಾನ ಸಂಪಾದಕರು : ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ**
**ಕನ್ನಡ ಆವೃತ್ತಿಯ ಸಂಪಾದಕರು : ಡಾ॥ ಜಿ. ರಾಮಕೃಷ್ಣ**







ತತ್ತ್ವಶಾಸ್ತ್ರವೆಂದರೆ ಯಾರೋ ವಿದ್ವಾಂಸರು ಮಾತ್ರ ತಮ್ಮತಮ್ಮಲ್ಲೇ ಚರ್ಚಿಸಿಕೊಳ್ಳುವ ನಿಗೂಢ ಮತ್ತು ಕಠಿಣವಾದ ಶಿಸ್ತು ಎಂಬ ಐತಿಹ್ಯವನ್ನು ದೂರಮಾಡಿ ಜನಸಾಮಾನ್ಯರಿಗೆ ವಿವಿಧ ತತ್ತ್ವಶಾಸ್ತ್ರ ಸ್ರೋತಗಳನ್ನು ಸರಳವಾಗಿ ನಿರೂಪಿಸುವ ಮಾಲಿಕೆ 'ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ'. ಜನರ ತಾತ್ವಿಕ ಅಗತ್ಯಗಳನ್ನು ಕೇಂದ್ರೀಕರಿಸಿ ಪರಿಣತ ಮತ್ತು ವಿಮರ್ಶಾತ್ಮಕ ದೃಷ್ಟಿಯಿಂದ ಯಾವುದು ಮುನ್ನಡೆಗೆ ಸಹಕಾರಿ ಮತ್ತು ಯಾವುದು ಅವಘಡಗಳಿಗೆ ಕಾರಣ ಎಂಬುದನ್ನು ಸ್ವಯಂ ಕಂಡುಕೊಳ್ಳಲು ಮಾಲಿಕೆಯ ಸಂಪುಟಗಳು ಒಂದು ಕೈಪಿಡಿ.







| ಸಂಪುಟ ಸಂಖ್ಯೆ ಮತ್ತು ಲೇಖಕರು | | ಅನುವಾದಕರು |
|---|---|---|
| ೧. ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ | – | ಡಾ॥ ಎನ್. ಗಾಯತ್ರಿ |
| ೨. ಡಾ॥ ಜಿ. ರಾಮಕೃಷ್ಣ | – | ಡಾ॥ ಜಿ. ರಾಮಕೃಷ್ಣ |
| ೩. ಡಾ॥ ಎಂ. ಕೆ. ಗಂಗೋಪಾಧ್ಯಾಯ | – | ಡಾ॥ ಬಿ. ಎನ್. ಸುಮಿತ್ರಾಬಾಯಿ |
| ೪. ಡಾ॥ ಆರ್. ದತ್ತ | – | ಪ್ರೊ॥ ಟಿ. ವೆಂಕಟೇಶಮೂರ್ತಿ |
| ೫. ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ | – | ಶ್ರೀ ನಗರಗೆರೆ ರಮೇಶ್ |
| ೬. ಡಾ॥ ಎಸ್. ಪಿ. ಬ್ಯಾನರ್ಜಿ | – | ಪ್ರೊ॥ ಶೈಲಜಾ, ಪ್ರೊ॥ ಟಿ. ಎಸ್. ವೇಣುಗೋಪಾಲ್ |
| ೭. ಡಾ॥ ಸುಮನ್ ಗುಪ್ತ | – | ಡಾ॥ ಆರ್. ಪೂರ್ಣಿಮಾ |
| ೮. ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ | – | ಶ್ರೀ ಮ. ಶ್ರೀ. ಮುರಳಿ ಕೃಷ್ಣ |







## 14–03–2015ರಂದು ಲೋಕಾರ್ಪಣೆ

ಈ ಸಂಪುಟಗಳನ್ನು ಡಾ॥ ಕೆ. ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ
ಡಾ॥ ಬರಗೂರು ರಾಮಚಂದ್ರಪ್ಪ ಅವರು
14.03.2015ರಂದು ಸಂಜೆ 5.30 ಗಂಟೆಗೆ ಲೋಕಾರ್ಪಣೆ ಮಾಡಲಿದ್ದಾರೆ.
ಸಂಪುಟಗಳ ಅನುವಾದಕರೆಲ್ಲರೂ ಉಪಸ್ಥಿತರಿರುತ್ತಾರೆ.
ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯಲಿರುವ
ಈ ಕಾರ್ಯಕ್ರಮದಲ್ಲಿ ದಯವಿಟ್ಟು ಭಾಗವಹಿಸಿ.

**ಎಲ್ಲರಿಗೂ ಆತ್ಮೀಯ ಸ್ವಾಗತ**







ನವಕರ್ನಾಟಕದ ಎಲ್ಲ ಮಳಿಗೆಗಳಲ್ಲೂ ಈ ಸಂಪುಟಗಳು ಲಭ್ಯವಾಗಲಿವೆ.
ಸೆಟ್‌ನ ಬೆಲೆ ₹ 975. ಬಿಡಿ ಪ್ರತಿಗಳೂ ಲಭ್ಯ.

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ.
ಇತರರಿಗೆ 10% ಸೋಡಿ. ಅಂಚೆ/ಕೊರಿಯರ್ ಮೂಲಕ ತರಿಸಿಕೊಳ್ಳುವವರಿಗೆ
ನಿವ್ವಳ ₹300ಕ್ಕಿಂತ ಕಡಿಮೆ ಮೊತ್ತದ ಬೇಡಿಕೆಗಳಿಗೆ ರವಾನೆ ವೆಚ್ಚ ₹40 ಪ್ರತ್ಯೇಕ.

**ಆನ್‌ಲೈನ್ ಮೂಲಕವೂ ಲಭ್ಯ**


Shop Online www.navakarnataka.com

ಡಾ॥ ಎಂ. ಚಂದ್ರ ಪೂಜಾರಿ

# ಭೂಸ್ವಾಧೀನ ಮಸೂದೆ ತಿದ್ದುಪಡಿ ಮತ್ತು ಕೃಷಿಕರ ಸ್ವಾತಂತ್ರ್ಯ

ತೊಂಬತ್ತರ ನಂತರ ನಮ್ಮಲ್ಲಿ ಮಾರುಕಟ್ಟೆ ಅಭಿವೃದ್ಧಿ ಜಾರಿಯಲ್ಲಿದೆ ಎನ್ನುವ ಪ್ರಚಾರ ಇದೆ. ಮಾರುಕಟ್ಟೆ ಎಂದ ಕೂಡಲೇ ಗ್ರಾಹಕರು ಮತ್ತು ಅವರ ಸ್ವಾತಂತ್ರ್ಯ ಮುಖ್ಯವಾಗುತ್ತವೆ. ಇಚ್ಛೆ ಇದ್ದರೆ ಖರೀದಿಸುವ, ಇಚ್ಛೆ ಇಲ್ಲದಿದ್ದರೆ ಮಾರದಿರುವ ಸ್ವಾತಂತ್ರ್ಯ ಮುಂಚೂಣಿಗೆ ಬರುತ್ತದೆ. ಜೊತೆಗೆ ಮಾರುಕಟ್ಟೆಯಲ್ಲಿ ವ್ಯವಹರಿಸುವವರ ಜಾತಿ, ಧರ್ಮ, ಲಿಂಗಗಳನ್ನು ಯಾರೂ ಕೇಳುವುದಿಲ್ಲ. ಹೀಗೆ ಮಾರುಕಟ್ಟೆ ಸ್ವಾತಂತ್ರ್ಯ, ಸಮಾನತೆ, ಸ್ವಾಯತ್ತತೆಗಳ ತದ್ರೂಪವಾಗಿ ನಮ್ಮ ಮುಂದೆ ನಿಲ್ಲುತ್ತದೆ. ವಾಸ್ತವದಲ್ಲಿ ನಮ್ಮಲ್ಲಿ ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ಆಚರಣೆಯಲ್ಲಿಲ್ಲ. ನಮ್ಮಲ್ಲಿ ಜಾರಿಯಲ್ಲಿರುವುದು ಬಾಲಬಡುಕ (ಕ್ರೋನಿ) ಕ್ಯಾಪಿಟಲಿಸ್ಟ್ ಅಭಿವೃದ್ಧಿ. ಹಾಗೆಂದು ಎಲ್ಲೂ ಇದನ್ನು ಜಾರಿಗೆ ತರುವವರು ಮತ್ತು ಈ ಕುರಿತು ಚರ್ಚಿಸುವವರು ಇದನ್ನು ಕ್ಯಾಪಿಟಲಿಸ್ಟ್ ಅಭಿವೃದ್ಧಿ ಎಂದು ಕರೆಯುತ್ತಿಲ್ಲ. ಏಕೆಂದರೆ ಕ್ಯಾಪಿಟಲಿಸ್ಟ್ ಅಭಿವೃದ್ಧಿ ಎಂದ ಕೂಡಲೇ ಅದರ ಕೆಟ್ಟ ಗುಣಗಳು ಕಣ್ಣ ಮುಂದೆ ಬರುತ್ತವೆ. ಉತ್ಪಾದನಾ ಪರಿಕರಗಳು – ಭೂಮಿ ಇರಬಹುದು, ಬಂಡವಾಳ ಇರಬಹುದು ಅಥವಾ ಆಧುನಿಕ ಸ್ಕಿಲ್ ಇರಬಹುದು ಅಥವಾ ಸಾಂಸ್ಕೃತಿಕ ಸಂಪನ್ಮೂಲ ಇರಬಹುದು – ಇವೆಲ್ಲ ಕೆಲವೇ ಕೆಲವರ ಸ್ವಾಧೀನ ದಲ್ಲಿದ್ದು ಸಮಾಜದ ಬಹುತೇಕರು ತಮ್ಮ ಮೂರು ಹೊತ್ತಿನ ಊಟಕ್ಕೆ ತಮ್ಮ ಶ್ರಮ ಮಾರಿ ಬದುಕುವುದು ಮಾತ್ರ ದಾರಿ. ಇತ್ತೀಚಿನ ದಿನಗಳಲ್ಲಿ ನಮ್ಮ ಸರಕಾರಗಳು ಅನುಸರಿಸುತ್ತಿರುವ ಭೂಮಿ, ಹಣಕಾಸು, ಕಾರ್ಮಿಕ, ಶಿಕ್ಷಣ, ಆರೋಗ್ಯ ನೀತಿಗಳನ್ನು ಹತ್ತಿರದಿಂದ ನೋಡಿದರೆ ಸರಕಾರಗಳ ಕ್ಯಾಪಿಟಲಿಸ್ಟ್ ಧೋರಣೆಗಳು ಸುಲಭದಲ್ಲಿ ಅರ್ಥವಾಗಬಹುದು.

### ಕ್ಯಾಪಿಟಲಿಸ್ಟ್ ಅಭಿವೃದ್ಧಿ

ಕ್ಯಾಪಿಟಲಿಸ್ಟ್ ಅಭಿವೃದ್ಧಿಯನ್ನು ಜೀರ್ಣಿಸಿಕೊಳ್ಳ ಬೇಕಾದರೆ ಒಂದೋ ಭೂಮಿ ಬೇಕು, ಇಲ್ಲವೇ ಬಂಡವಾಳ ಬೇಕು. ಈ ಎರಡೂ ಇಲ್ಲದಿದ್ದರೆ ಮಾರುಕಟ್ಟೆಯಲ್ಲಿ ಬೇಡಿಕೆ ಇರುವ ಸ್ಕಿಲ್ ಬೇಕು. ಈ ಮೂರರಲ್ಲಿ ಒಂದೂ ಇಲ್ಲದವರು ಸರಕಾರದ ಬಡತನ ನಿವಾರಣ ಕಾರ್ಯಕ್ರಮಗಳನ್ನು ಆಶ್ರಯಿಸುವುದು ಬಿಟ್ಟರೆ ಬೇರೆ ದಾರಿ ಇಲ್ಲ. ಎಪ್ಪತ್ತು ಎಂಬತ್ತರ ದಶಕಗಳ ತನಕ ಈ ಸಂಪನ್ಮೂಲಗಳು (ಭೂಮಿ, ಬಂಡವಾಳ, ಶಿಕ್ಷಣ) ಕೆಲವರಲ್ಲೇ ಕ್ರೋಢೀಕರಣಗೊಳ್ಳುವುದು ಸರಿಯಲ್ಲ ಎನ್ನುವ ಒಂದು ಸ್ಥೂಲ ಧೋರಣೆ ಇತ್ತು. ಆದರೆ ತೊಂಬತ್ತರ ನಂತರ ಈ ಸ್ಥಿತಿ ತುಂಬಾ ಬದಲಾಗಿದೆ. ಇಂದು ಸಾರ್ವಜನಿಕ ಚರ್ಚೆಗಳಲ್ಲಿ ಮತ್ತು ಸರಕಾರಿ ಧೋರಣೆಗಳಲ್ಲಿ ಈ ಸಂಪನ್ಮೂಲಗಳು ಕೆಲವರಲ್ಲೇ ಕ್ರೋಢೀಕರಣಗೊಳ್ಳುವುದು ತಪ್ಪಲ್ಲ ಎನ್ನುವ ಧೋರಣೆ ಇದೆ. ಬ್ಯಾಂಕ್‌ಗಳು ಮತ್ತು ಇತರ ಹಣಕಾಸು ಸಂಸ್ಥೆಗಳು ನೀಡುವ ಸಾಲದ ಶೇ. ೪೦ ಅನ್ನು ಆದ್ಯತಾ ವಲಯಕ್ಕೆ ಮತ್ತು ಶೇ. ೬೦ ಅನ್ನು ಸಾಮಾನ್ಯ ವಲಯಕ್ಕೆ ನೀಡಬೇಕೆನ್ನುವ ಸಾಲ ನೀತಿ ಇದೆ. ಆದ್ಯತಾ ವಲಯದಲ್ಲಿ ಕೃಷಿಕರು, ಸಣ್ಣಪುಟ್ಟ ಉದ್ದಿಮೆಗಳು ಹಾಗೂ ಬಡತನ ನಿವಾರಣ ಕಾರ್ಯಕ್ರಮಗಳು ಬರುತ್ತವೆ. ಈ ಮೂರನ್ನು ಸೇರಿಸಿದರೆ ಹೆಚ್ಚು ಕಡಿಮೆ ಶೇ. ೮೦ರಷ್ಟು ಕುಟುಂಬಗಳು ಶೇ. ೪೦ರಷ್ಟು ಸಂಘಟಿತ ವಲಯದ ಹಣಕಾಸನ್ನು ಹಂಚಿಕೊಳ್ಳಬೇಕಾಗಿದೆ. ಇದೇ ಸಂದರ್ಭದಲ್ಲಿ ಸಾಮಾನ್ಯ ವಲಯದ ಶೇ. ೨೦ರಷ್ಟು ಕುಟುಂಬಗಳು ಶೇ. ೬೦ರಷ್ಟು ಸಂಘಟಿತ ವಲಯದ ಹಣಕಾಸಿನ ಅನುಕೂಲ ಪಡೆಯುತ್ತಿವೆ.

ಇನ್ನು ಶಿಕ್ಷಣದ ಸ್ಥಿತಿ ಕುರಿತು ಹೇಳುವುದೇ ಬೇಡ. ತೊಂಬತ್ತರವರೆಗೆ ಸರಕಾರ ಶಿಕ್ಷಣವನ್ನು ಗಂಭೀರವಾಗಿ ಪರಿಗಣಿಸಿಯೇ ಇಲ್ಲ. ಇತ್ತೀಚಿನ ವರ್ಷಗಳಲ್ಲಿ ಶಿಕ್ಷಣ

ತಮ್ಮ ಭೂಮಿಗೆ ಸಲ್ಲಬೇಕಾದ ಬೆಲೆ ನಿಗದಿಗೊಳಿಸುವ ಪ್ರಕ್ರಿಯೆಯಲ್ಲಿ ಪಾಲುಗೊಳ್ಳುವ ಹಕ್ಕನ್ನು ಸಾಮಾಜಿಕ ಪರಿಣಾಮ ಲೆಕ್ಕಾಚಾರ ಸೆಕ್ಷನ್ ರೈತರಿಗೆ ನೀಡಿತ್ತು. ಜೊತೆಗೆ, ಯೋಜನೆ ನಿಜವಾಗಿಯೂ ಸಾರ್ವಜನಿಕ ಆಸಕ್ತಿ ರೀತಿಯದ್ದೇ ಅಥವಾ ಬೇರೆಯೇ ರೂಪದ್ದೇ ಎಂದು ತೀರ್ಮಾನಿಸುವ ಪ್ರಕ್ರಿಯೆಯಲ್ಲೂ ರೈತರು ಪಾಲುಗೊಳ್ಳಬಹುದಿತ್ತು. ಆದರೆ ಹೊಸ ಸರಕಾರ ತಂದಿರುವ ತಿದ್ದುಪಡಿ ರೈತರನ್ನು ಈ ಎರಡೂ ಪ್ರಕ್ರಿಯೆಗಳಿಂದ ಹೊರಗಿಡುತ್ತಿದೆ. ರೈತರು ಹಿಂದಿನ ರೀತಿಯಲ್ಲೇ ಜಿಲ್ಲಾಧಿಕಾರಿಗಳು ಮತ್ತು ಇತರ ಅಧಿಕಾರಿಗಳು ಕೈಗೊಳ್ಳುವ ತೀರ್ಮಾನಕ್ಕೆ ಒಪ್ಪಿಸಿಕೊಳ್ಳುವುದು ಬಿಟ್ಟರೆ ಬೇರೆ ದಾರಿಯೇ ಇಲ್ಲ ಎನ್ನುವ ಸ್ಥಿತಿಯನ್ನು ತಿದ್ದುಪಡಿ ತಂದಿದೆ. ಹೀಗೆ ಅಭಿವೃದ್ಧಿಯಲ್ಲಿ ತಳವರ್ಗದ ಆಸಕ್ತಿ, ಅಭಿಪ್ರಾಯಗಳು ಮೇಲ್ವರ್ಗದವರ ಆಸಕ್ತಿ, ಅಭಿಪ್ರಾಯಗಳಷ್ಟೇ ಮುಖ್ಯ ಎನ್ನುವುದನ್ನು ೨೦೧೩ರ ಭೂಸ್ವಾಧೀನ ಮಸೂದೆ ಪ್ರತಿಬಿಂಬಿಸಿದರೆ ಈ ಕಾಯಿದೆಗೆ ಮೋದಿ ಸರಕಾರ ತಂದಿರುವ ತಿದ್ದುಪಡಿ ಮೇಲ್ವರ್ಗದ ಆಸಕ್ತಿ, ಅಭಿಪ್ರಾಯಗಳು ತಳವರ್ಗದ ಆಸಕ್ತಿ, ಅಭಿಪ್ರಾಯಗಳಿಗಿಂತ ಹೆಚ್ಚು ಮುಖ್ಯ ಎನ್ನುವುದನ್ನು ಬಿಂಬಿಸುತ್ತಿದೆ.

ಕೂಡ ಅಭಿವೃದ್ಧಿಗೆ ಅತೀ ಅಗತ್ಯವೆನ್ನುವ ತಿಳುವಳಿಕೆ ಬಂದಿದೆ. ಆದರೆ ಈ ತಿಳುವಳಿಕೆಯನ್ನು ಅನುಷ್ಠಾನಗೊಳಿಸುವಾಗ ಪುನಃ ಸರಕಾರ ಎಡವಿದೆ. ಸರಕಾರವೇ ಶಿಕ್ಷಣದ ಮೇಲೆ ದೊಡ್ಡ ಮೊತ್ತ ವಿನಿಯೋಜಿಸಿ ಎಲ್ಲರಿಗೂ ಗುಣಮಟ್ಟದ ಶಿಕ್ಷಣ ಕೊಡುವ ಬದಲು ಶಿಕ್ಷಣದ ಜವಾಬ್ದಾರಿಯನ್ನು ಖಾಸಗಿ ವಲಯಕ್ಕೆ ವಹಿಸಿದೆ. ಇದರಿಂದಾಗಿ ದೊಡ್ಡ ಮೊತ್ತ ವಿನಿಯೋಜಿಸಲು ಶಕ್ತಿ ಇರುವವರು ಮಾತ್ರ ಗುಣಮಟ್ಟದ ಶಿಕ್ಷಣ ಪಡೆಯಲು ಸಾಧ್ಯ ಎನ್ನುವ ಸ್ಥಿತಿ ಇದೆ. ಇದೇ ಸ್ಥಿತಿ ಭೂಒಡೆತನದಲ್ಲೂ ಇದೆ. ಸುಮಾರು ಮೂರನೇ ಒಂದರಷ್ಟು ಕುಟುಂಬಗಳಲ್ಲಿ ಏನೇನೂ ಭೂಮಿ ಇಲ್ಲ. ಭೂಮಿ ಇರುವ ಮೂರನೇ ಎರಡರಷ್ಟು ಕುಟುಂಬಗಳಲ್ಲಿ ಮುಕ್ಕಾಲು ಭಾಗ ಕುಟುಂಬಗಳು ಸಣ್ಣ ಮತ್ತು ಅತೀ ಸಣ್ಣ ಕೃಷಿಕರು. ಇವರಿಗೂ ಭೂರಹಿತರಿಗೂ ವಿಶೇಷ ವ್ಯತ್ಯಾಸವಿಲ್ಲ. ನಿಜವಾದ ಅಭಿವೃದ್ಧಿ ಸಾಧ್ಯವಾಗಬೇಕಿದ್ದರೆ ಇಂತವರ ಭೂಹಿಡುವಳಿಯನ್ನು ಹೆಚ್ಚಿಸುವ ಮತ್ತು ಗ್ರಾಮೀಣ ಮೂಲಸೌಕರ್ಯಗಳನ್ನು ಅಭಿವೃದ್ಧಿಪಡಿಸುವ ಕ್ರಮಗಳು ಮುಂಚೂಣಿಗೆ ಬರಬೇಕಿತ್ತು. ಹೆಚ್ಚಿಸುವುದು ಬಿಡಿ, ಇವರಲ್ಲಿರುವ ಅಲ್ಪಸ್ವಲ್ಪ ಭೂಮಿಯನ್ನು ಕಿತ್ತುಕೊಂಡು ಉದ್ದಿಮೆಗಳಿಗೆ ನೀಡುವ ಕ್ರಮಗಳಿಗೆ ಸರಕಾರಗಳು ಹೆಚ್ಚು ಒತ್ತು ನೀಡುತ್ತಿವೆ. ಇಂತಹ ಕ್ರಮಗಳ ಸಾಲಿನಲ್ಲಿ ೨೦೧೩ರ ಭೂಸ್ವಾಧೀನ ಮಸೂದೆ ತಿದ್ದುಪಡಿ ಕೂಡ ಸೇರಿದೆ. ೨೦೧೩ರ ಭೂಸ್ವಾಧೀನ ಮಸೂದೆಗೆ ತಂದ ತಿದ್ದುಪಡಿ ಭೂಮಿ ಕೆಲವರಲ್ಲೇ ಕ್ರೋಢೀಕರಣಗೊಳ್ಳಲು ಸಹಕರಿಸುತ್ತಿದೆ. ಲೇಖನದ ಮುಂದಿನ ಭಾಗದಲ್ಲಿ ಭೂಸ್ವಾಧೀನ ಮಸೂದೆ ತಿದ್ದುಪಡಿಯ ಪರಿಣಾಮಗಳನ್ನು ಚರ್ಚಿಸಿದ್ದೇನೆ.

### ೨೦೧೩ರ ಭೂಸ್ವಾಧೀನ ಮಸೂದೆ

೨೦೧೩ರ ಭೂಸ್ವಾಧೀನ ಮಸೂದೆ ಜಾರಿಗೆ ಬರುವ ತನಕ ನಮ್ಮಲ್ಲಿ ೧೮೯೪ರ ಭೂಸ್ವಾಧೀನ ಮಸೂದೆ ಜಾರಿಯಲ್ಲಿತ್ತು. ಇದು ವಸಾಹತು ಸರಕಾರ ಜಾರಿಗೆ ತಂದ ಕಾಯಿದೆ. ಭೂಮಿ, ನೀರು, ಪ್ರಾಕೃತಿಕ ಸಂಪನ್ಮೂಲ ಇವೆಲ್ಲ ಸರಕಾರದ ಆಸ್ತಿ. ಭೂಸ್ವಾಧೀನ ಪಡಿಸಿಕೊಳ್ಳುವುದು ಸರಕಾರದ ಹಕ್ಕು. ಅದನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ ಎನ್ನುವ ನೆಲೆಗಟ್ಟಲ್ಲಿ ೧೮೯೪ರ ಮಸೂದೆ ಕಾರ್ಯನಿರ್ವಹಿಸುತ್ತಿತ್ತು. ಈ ಮಸೂದೆಯನ್ನು ಬಳಸಿಕೊಂಡು ನಮ್ಮದೇ ಸರಕಾರ ಲಕ್ಷಾಂತರ ಎಕರೆ ಕೃಷಿ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡಿದೆ. ಅಣೆಕಟ್ಟು, ಬಂದರು, ವಿಮಾನ ನಿಲ್ದಾಣ, ರೈಲು ಮಾರ್ಗಗಳ ನಿರ್ಮಾಣಕ್ಕಾಗಿ, ಡಿಫೆನ್ಸ್ ಯೋಜನೆಗಳಿಗಾಗಿ ಹಲವು ಲಕ್ಷ ಎಕರೆ ಕೃಷಿ ಭೂಮಿಯ ಸ್ವಾಧೀನ ನಡೆದಿದೆ. ದೊಡ್ಡ ಪ್ರಮಾಣದ ಭೂಸ್ವಾಧೀನ ನಡೆದಾಗಲೆಲ್ಲ ಲಕ್ಷಾಂತರ ಕೃಷಿಕರು ಮತ್ತು ಕೃಷಿಯನ್ನೇ ನಂಬಿದ ಕುಟುಂಬಗಳು ಸ್ಥಳಾಂತರಗೊಳ್ಳುತ್ತಿದ್ದವು. ೧೧ನೇ ಯೋಜನಾ ವರದಿ ಪ್ರಕಾರ ಸುಮಾರು ೬೦ ಮಿಲಿಯ ಕುಟುಂಬಗಳು ಬೃಹತ್ ಯೋಜನೆಗಳಿಂದ ಮನೆಮಠಗಳನ್ನು ಕಳೆದುಕೊಂಡಿವೆ. ಅರವತ್ತು–ಎಪ್ಪತ್ತರ ದಶಕಗಳಲ್ಲಿ ಭೂಮಿ ಕಳೆದುಕೊಂಡವರಿಗೆ ಪರಿಹಾರ ಕೊಡಬೇಕು ಅಥವಾ ಪುನರ್‌ವಸತಿ ಮಾಡಬೇಕೆನ್ನುವ




ವಾದಕ್ಕೂ ವಿಶೇಷ ಮಹತ್ವ ಇರಲಿಲ್ಲ. ಹಲವರ ಅಭಿವೃದ್ಧಿಗೆ ಕೆಲವರು ನಷ್ಟ ಅನುಭವಿಸುವುದು ಅನಿವಾರ್ಯ ಎನ್ನುವ ಧೋರಣೆಯಿಂದ ಇಂತಹ ಸ್ಥಳಾಂತರಗಳನ್ನು ಸಮರ್ಥಿಸಿಕೊಳ್ಳಲಾಗುತ್ತಿತ್ತು. ಸರಕಾರದ ಇಂತಹ ಭೂಸ್ವಾಧೀನ ನೀತಿ ವಿರುದ್ಧ ಕೃಷಿಕರು ಸತತ ಹೋರಾಟ ನಡೆಸಿದ್ದಾರೆ ಮತ್ತು ಅವರ ಹೋರಾಟದ ಫಲವಾಗಿ ೧೮೯೪ರ ಕಾಯಿದೆ ತಿದ್ದುಪಡಿಗೊಂಡು ೨೦೧೩ರಲ್ಲಿ 'ದಿ ರೈಟ್ ಟು ಫೇರ್ ಕಾಂಪನ್‌ಸೇಶನ್ ಆ್ಯಂಡ್ ಟ್ರಾನ್ಸ್‌ಪರೆನ್ಸಿ ಇನ್ ಲ್ಯಾಂಡ್ ಅಕ್ವಿಸಿಷನ್, ರಿಹ್ಯಾಬಿಲಿಟೇಶನ್ ಆ್ಯಂಡ್ ರಿಸೆಟ್ಲ್‌ಮೆಂಟ್' ಮಸೂದೆ ಜಾರಿಗೆ ಬಂದಿದೆ.

ಈ ಮಸೂದೆಗೆ ಎಲ್ಲ ಪಕ್ಷಗಳ ಬೆಂಬಲ ಇತ್ತು. ಎಲ್ಲ ಪಕ್ಷಗಳೂ ತಿದ್ದುಪಡಿ ಸೂಚಿಸಿವೆ. ಮಸೂದೆ ಮೇಲೆ ಸಾಕಷ್ಟು ಸಾರ್ವಜನಿಕ ಚರ್ಚೆ ನಡೆದಿದೆ. ಕರಡು ಮಸೂದೆ ಸ್ಟ್ಯಾಂಡಿಂಗ್ ಕಮಿಟಿ ಮುಂದೆ ಪರಾಮರ್ಶೆಗೆ ಒಳಗಾಗಿದೆ. ಇಷ್ಟೆಲ್ಲ ಪ್ರಕ್ರಿಯೆಗಳ ನಂತರ ಮಸೂದೆ ಅಂತಿಮ ರೂಪ ಪಡೆದಿದೆ. ಹಿಂದಿನ ಭೂಸ್ವಾಧೀನ ಮಸೂದೆಗಳಿಗೆ ಹೋಲಿಸಿದರೆ ಇದೊಂದು ಉತ್ತಮ ಮಸೂದೆ ಎನ್ನುವ ಚಿತ್ರಣ ಇತ್ತು. ಹಿಂದಿನ ಮಸೂದೆಗಳಲ್ಲಿ ಸಾರ್ವಜನಿಕ ಹಿತಾಸಕ್ತಿಯನ್ನು ಗುರುತಿಸುವಲ್ಲಿ, ಸ್ವಾಧೀನಪಡಿಸಿಕೊಳ್ಳಬೇಕಾದ ಭೂಮಿಯ ಪ್ರಮಾಣವನ್ನು ನಿರ್ಧರಿಸುವಲ್ಲಿ, ರೈತರಿಗೆ ನೀಡಬೇಕಾದ ಪರಿಹಾರ ಮೊತ್ತವನ್ನು ತೀರ್ಮಾನಿಸುವಲ್ಲಿ ಅಧಿಕಾರಗಳ ತೀರ್ಮಾನ ಅಂತಿಮವಾಗಿತ್ತು. ರೈತರು ಇಂತಹ ಬಲಾತ್ಕಾರದ ಭೂಸ್ವಾಧೀನಕ್ಕೆ ಒಪ್ಪಿಸಿಕೊಳ್ಳುವುದನ್ನು ಬಿಟ್ಟರೆ ಕಾನೂನಿನಲ್ಲಿ ಅವರಿಗೆ ಇನ್ಯಾವುದೇ ಅವಕಾಶಗಳಿರಲಿಲ್ಲ. ೨೦೧೩ರ ಭೂಸ್ವಾಧೀನ ಮಸೂದೆ ಕೃಷಿಕರ ಇಂತಹ ಅಸಹಾಯಕ ಸ್ಥಿತಿಯನ್ನು ಬದಲಾಯಿಸಿದೆ. ಅವರ ಧ್ವನಿಗೂ ಸ್ವಲ್ಪ ಅರ್ಥ ನೀಡಿದೆ. ಭೂಮಿಯ ಬೆಲೆ ತೀರ್ಮಾನಿಸುವಾಗ ಚಾಲ್ತಿಯಲ್ಲಿರುವ ಮಾರುಕಟ್ಟೆಗಿಂತ ಎರಡುಪಟ್ಟು ಹೆಚ್ಚು ದರ ನಿಗದಿ ಪಡಿಸಲು ಅವಕಾಶ ಕಲ್ಪಿಸಿದೆ. ಭೂಸ್ವಾಧೀನ ಮಾಡುವ ಮುನ್ನ ಸಾಮಾಜಿಕ ಪರಿಣಾಮ ಲೆಕ್ಕಾಚಾರ (ಸೋಷಿಯಲ್ ಇಂಪ್ಯಾಕ್ಟ್ ಅಸೆಸ್‌ಮೆಂಟ್) ಮತ್ತು ಶೇ. ೮೦ರಷ್ಟು ಕೃಷಿಕರ ಒಪ್ಪಿಗೆ ಪಡೆಯಬೇಕೆನ್ನುವ ಸೆಕ್ಷನ್‌ಗಳು ಕೃಷಿಕರಿಗೆ ಸಾಕಷ್ಟು ಬಲ ನೀಡಿವೆ. ಇವುಗಳ ಜೊತೆಗೆ ನೀರಾವರಿಯುಳ್ಳ ಫಲವತ್ತಾದ ಕೃಷಿ ಭೂಮಿಯನ್ನು ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಸ್ವಾಧೀನಪಡಿಸಿಕೊಳ್ಳಬೇಕು ಮತ್ತು ಸ್ವಾಧೀನಪಡಿಸಿಕೊಂಡ ಭೂಮಿಯನ್ನು ಐದು ವರ್ಷದೊಳಗೆ ಯಾವ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಳ್ಳಲಾಗಿದೆಯೋ ಆ ಉದ್ದೇಶಕ್ಕೆ ಮಾತ್ರ ಬಳಸಬೇಕೆನ್ನುವ ಷರತ್ತುಗಳಿದ್ದವು.

### ಮಸೂದೆಯ ತಿದ್ದುಪಡಿ

೨೦೧೩ ಭೂಸ್ವಾಧೀನ ಮಸೂದೆ ದೇಶದ ಎಲ್ಲ ರಾಜ್ಯಗಳಲ್ಲಿ ಇನ್ನೂ ಅನುಷ್ಠಾನಗೊಂಡಿಲ್ಲ. ಅದಕ್ಕೆ ಮುನ್ನವೇ ಬಿಜೆಪಿ ನೇತೃತ್ವದ ಎನ್‌ಡಿಎ ಸರಕಾರ ಈ ಮಸೂದೆಗೆ ತಿದ್ದುಪಡಿ ತರಲು ಹೊರಟಿದೆ. ಈ ತಿದ್ದುಪಡಿ ಪಾರ್ಲಿಮೆಂಟಲ್ಲಿ ಪಾಸಾಗುವುದು ಕಷ್ಟವೆಂದು ಹಿಂದಿನ ಬಾಗಿಲಿನಿಂದ (ಆರ್ಡಿನೆನ್ಸ್ ಮೂಲಕ) ತಿದ್ದುಪಡಿ ಮಾಡಿದೆ. ತಿದ್ದುಪಡಿಗೊಂಡ ೨೦೧೩ರ ಭೂಸ್ವಾಧೀನ ಮಸೂದೆ ಹೆಚ್ಚು ಕಡಿಮೆ ೧೮೯೪ರ ಅಥವಾ ವಸಾಹತು ಸರಕಾರದ ಭೂಸ್ವಾಧೀನ ಮಸೂದೆಯನ್ನು ಹೆಚ್ಚು ಹೋಲುತ್ತದೆ. ಇಂಡಸ್ಟ್ರಿಯಲ್ ಕಾರಿಡಾರ್, ಡಿಫೆನ್ಸ್ ಪ್ರೊಜೆಕ್ಟ್‌ಗಳು, ಗ್ರಾಮೀಣ ಮೂಲಸೌಕರ್ಯಗಳ ಯೋಜನೆಗಳು, ಸಾರ್ವಜನಿಕ ಖಾಸಗಿ ಪಾಲುಗೊಳ್ಳುವಿಕೆಯಲ್ಲಿ ನಡೆಯುವ ಯೋಜನೆಗಳು ಇವೆಲ್ಲವನ್ನು ತ್ವರಿತಗತಿಯ (ಫಾಸ್ಟ್ ಟ್ರ್ಯಾಕ್) ಯೋಜನೆಗಳೆಂದು ವಿಂಗಡಿಸಲಾಗಿದೆ. ಹೆಚ್ಚು ಕಡಿಮೆ ಅಭಿವೃದ್ಧಿಯ ಹೆಸರಲ್ಲಿ ಬರುವ ಎಲ್ಲ ಯೋಜನೆಗಳನ್ನು ಮೇಲಿನ ಐದು ಕ್ಷೇತ್ರಗಳ ವ್ಯಾಪ್ತಿಯಲ್ಲಿ ತರಬಹುದು. ಹೆಚ್ಚು ಕಡಿಮೆ ಎಲ್ಲ ಬೃಹತ್ ಯೋಜನೆಗಳನ್ನು ಭೂಸ್ವಾಧೀನ ಮಸೂದೆಯ ಸಾಮಾಜಿಕ ಪರಿಣಾಮ ಲೆಕ್ಕಚಾರ ಮತ್ತು ಕೃಷಿಕರ ಒಪ್ಪಿಗೆಯ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಅಂದರೆ ಈ ಯೋಜನೆಗಳಿಗೆ ಭೂಸ್ವಾಧೀನ ನಡೆಸುವಾಗ ರೈತರ ಒಪ್ಪಿಗೆ ಪಡೆಯುವ ಮತ್ತು ರೈತರೊಂದಿಗೆ ಚರ್ಚಿಸಿ ಬೆಲೆ ನಿಗದಿಗೊಳಿಸುವ ಅನಿವಾರ್ಯತೆ ಇಲ್ಲವೆಂದು ತಿದ್ದುಪಡಿಗೊಂಡ ಮಸೂದೆ ಹೇಳುತ್ತಿದೆ.

ಸ್ಮಾರ್ಟ್ ಸಿಟಿ, ಇಂಡಸ್ಟ್ರಿಯಲ್ ಕಾರಿಡಾರ್ಸ್, ಟೌನ್‌ಶಿಪ್ಸ್, ಬ್ಯುಸಿನೆಸ್ ಸೆಂಟರ್ಸ್, ಡಿಫೆನ್ಸ್ ಪ್ರಾಜೆಕ್ಟ್ಸ್ ಇತ್ಯಾದಿ ಯೋಜನೆಗಳು ಐದು ವರ್ಷಕ್ಕಿಂತ ಹೆಚ್ಚಿನ ಅವಧಿಯನ್ನು ಕೋರುತ್ತವೆ. ಆದುದರಿಂದ ಸ್ವಾಧೀನಪಡಿಸಿದ ಭೂಮಿಯನ್ನು ಐದು ವರ್ಷದೊಳಗೆ ಬಳಸಬೇಕೆನ್ನುವ ಷರತ್ತನ್ನು ಸಡಿಲಗೊಳಿಸಲಾಗಿದೆ. ಅಷ್ಟು ಮಾತ್ರವಲ್ಲ, ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಫಲವತ್ತಾದ ನೀರಾವರಿಯುಳ್ಳ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬಹುದೆನ್ನುವ ಷರತ್ತನ್ನು ಕೈಬಿಡಲಾಗಿದೆ. ತಿದ್ದುಪಡಿಗೊಂಡ ಮಸೂದೆಯಲ್ಲಿ ಪುನರ್‌ವಸತಿ ಮತ್ತು ಪುನರ್‌ನಿರ್ಮಾಣದ ಸುದ್ದಿಯೇ

ಇಲ್ಲ. ಈ ಎಲ್ಲ ಬದಲಾವಣೆಗಳಿಂದ ಭೂಸ್ವಾಧೀನ ಮಸೂದೆ ಹಿಂದಿನ ರೂಪವನ್ನೇ ಪಡೆದಿದೆ. ಅಂದರೆ ಹಿಂದಿನದೇ ರೀತಿಯಲ್ಲಿ ಸಾರ್ವಜನಿಕ ಆಸಕ್ತಿ, ಸ್ವಾಧೀನ ಪಡಿಸಿಕೊಳ್ಳಬೇಕಾದ ಪ್ರಮಾಣ, ಫಲವತ್ತಾದ ಭೂಮಿಯ ರಕ್ಷಣೆ ಇತ್ಯಾದಿಗಳ ತೀರ್ಮಾನ ಅಧಿಕಾರಿಗಳದ್ದು. ಕೃಷಿಕರು ಯಥಾರೀತಿಯಲ್ಲಿ ಸರಕಾರ ಕೊಟ್ಟ ಪರಿಹಾರ ಪಡೆದು ಸುಮ್ಮನಿರಬೇಕಾದ ಸ್ಥಿತಿ ನಿರ್ಮಾಣವಾಗಿದೆ. ತಿದ್ದುಪಡಿಯನ್ನು ಉದ್ಯಮಿಗಳು ಸ್ವಾಗತಿಸಿದ್ದಾರೆ. ಅವರ ಪ್ರಕಾರ ಉದ್ದಿಮೆಗಳ ಪ್ರಗತಿ ಮತ್ತು ದೇಶದ ಆರ್ಥಿಕ ಅಭಿವೃದ್ಧಿಗೆ ಈ ತಿದ್ದುಪಡಿ ದೊಡ್ಡ ಕೊಡುಗೆ ನೀಡಲಿದೆ. ಇದೇ ಸಂದರ್ಭದಲ್ಲಿ ರೈತ ಸಂಘಟನೆಗಳು ತಿದ್ದುಪಡಿಯನ್ನು ತೀವ್ರವಾಗಿ ಖಂಡಿಸಿವೆ. ರೈತರ ಹೋರಾಟದ ಫಲವಾಗಿ ೨೦೧೩ರ ಭೂಸ್ವಾಧೀನ ಮಸೂದೆ ಬಂದಿದೆ. ಈ ಮಸೂದೆಯ ಫಲ ಕೃಷಿಕರಿಗೆ ತಲುಪುವ ಮುನ್ನವೇ ಮೋದಿ ಸರಕಾರ ಮಸೂದೆಗೆ ತಿದ್ದುಪಡಿ ತಂದಿದೆ. ಕೇಂದ್ರ ಸರಕಾರದ ಈ ಕ್ರಮ ರೈತರ ಕೈಗೆ ಬಂದ ತುತ್ತು ಬಾಯಿಗೆ ಬರದಂತೆ ತಡೆದಿದೆ ಎಂದು ರೈತ ಸಂಘಟನೆಗಳು ದೂರಿವೆ.

೨೦೧೩ರ ಭೂಸ್ವಾಧೀನ ಮಸೂದೆಯ ತಿದ್ದುಪಡಿಗೆ ಎನ್‌ಡಿಎ ಸರಕಾರ ಮತ್ತು ಉದ್ದಿಮೆಗಳು ನೀಡುವ ಕಾರಣಗಳು ಇಂತಿವೆ. ಒಂದು, ೨೦೧೩ರ ಭೂಸ್ವಾಧೀನ ಮಸೂದೆಯನ್ನು ಜಾರಿಗೊಳಿಸುವುದೇ ಕಷ್ಟ, ಏಕೆಂದರೆ ೨೦೧೩ರ ಕಾಯಿದೆಯ ಸಾಮಾಜಿಕ ಪರಿಣಾಮ ಲೆಕ್ಕಾಚಾರ (ಸೋಷಿಯಲ್ ಇಂಪ್ಯಾಕ್ಟ್ ಅಸೆಸ್‌ಮೆಂಟ್) ಷರತ್ತಿನಿಂದಾಗಿ ಖರೀದಿಸುವವರು ಭೂಮಿಗೆ ಮಾತ್ರ ಬೆಲೆ ನೀಡಬೇಕಾಗಿರುವುದು ಮಾತ್ರವಲ್ಲ, ಭೂಮಿಯ ಮೇಲೆ ಪರೋಕ್ಷವಾಗಿ ಅವಲಂಬಿಸಿದವರಿಗೂ ಪರಿಹಾರ ನೀಡಬೇಕಾಗಿದೆ. ಎರಡು, ಸ್ವಾಧೀನಪಡಿಸಿಕೊಂಡ ಭೂಮಿಯನ್ನು ಐದು ವರ್ಷದೊಳಗೆ ಯಾವ ಉದ್ದೇಶಕ್ಕೆ ಸ್ವಾಧೀನಪಡಿಸಿ ಕೊಳ್ಳಲಾಗಿದೆಯೋ ಆ ಉದ್ದೇಶಕ್ಕೆ ಬಳಸಬೇಕು. ಒಂದು ವೇಳೆ ಬಳಸದಿದ್ದರೆ ಹಿಂದಿರುಗಿಸಬೇಕು. ಸರಕಾರ ಮತ್ತು ಉದ್ದಿಮೆಗಳ ಪ್ರಕಾರ ಬೃಹತ್ ಯೋಜನೆಗಳು ಅನುಷ್ಠಾನಗೊಳ್ಳಲು ಕನಿಷ್ಠ ಏಳೆಂಟು ವರ್ಷಗಳ ಅವಶ್ಯಕತೆಯಿದೆ. ಐದು ವರ್ಷದೊಳಗೆ ಬಳಕೆಯಾಗಬೇಕೆನ್ನುವ ಷರತ್ತಿನಿಂದ ದೀರ್ಘಾವಧಿಯ ಯೋಜನೆಗಳು ಅನುಷ್ಠಾನಗೊಳ್ಳುವುದು ಕಷ್ಟಸಾಧ್ಯ. ಮೂರು, ಶೇ. ೮೦ರಷ್ಟು ಭೂಮಾಲೀಕರ ಒಪ್ಪಿಗೆ ಪಡೆಯುವುದು ಕಷ್ಟದ ಕೆಲಸ. ಏಕೆಂದರೆ ಕೆಲವೇ ಕೆಲವು ಭೂಮಾಲೀಕರು ಒಪ್ಪಿಗೆ ನೀಡದಿದ್ದರೂ ಭೂಸ್ವಾಧೀನ ಸಾಧ್ಯವಾಗುವುದಿಲ್ಲ. ಭೂಸ್ವಾಧೀನ ನಡೆಯದಿದ್ದರೆ ಉದ್ದಿಮೆಗಳು ತಲೆ ಎತ್ತಲು ಸಾಧ್ಯವಿಲ್ಲ. ಆದುದರಿಂದ ಹೆಚ್ಚು ಸಂಖ್ಯೆಯ ಭೂಮಾಲೀಕರ ಒಪ್ಪಿಗೆಯನ್ನು ಕಡ್ಡಾಯಗೊಳಿಸುವ ಅಗತ್ಯವಿಲ್ಲ ಎಂದು ತೀರ್ಮಾನಿಸಲಾಗಿದೆ. ನಾಲ್ಕು, ಇದೊಂದು ಕೇಂದ್ರ ಸರಕಾರದ ಮಸೂದೆ. ಭೂಮಿ ರಾಜ್ಯ ಸರಕಾರದ ವ್ಯಾಪ್ತಿಗೆ ಬರುವ ವಿಚಾರ. ಆದುದರಿಂದ ಈ ಆರ್ಡಿನೆನ್ಸ್‌ಅನ್ನು ಒಪ್ಪದ ರಾಜ್ಯಗಳು ತಮ್ಮದೇ ನೀತಿಯನ್ನು ರೂಪಿಸಿಕೊಳ್ಳಬಹುದೆಂದು ಕೇಂದ್ರ ಸರಕಾರ ಹೇಳುತ್ತಿದೆ. ಈ ಹೇಳಿಕೆಯ ಮೂಲಕ ತಿದ್ದುಪಡಿಯ ನಕರಾತ್ಮಕ ಪರಿಣಾಮಗಳನ್ನು ರಾಜ್ಯ ಸರಕಾರಗಳ ತಲೆಗೆ ಹೊರಿಸಲು ಕೇಂದ್ರ ಸರಕಾರ ಹೊರಟಿದೆ. ಅಷ್ಟು ಮಾತ್ರವಲ್ಲ, ಇನ್ನೂ ಮುಂದೆ ಹೋಗಿ ಇಂದಿನ ಸ್ಪರ್ಧಾಲೋಕದಲ್ಲಿ ಉದ್ದಿಮೆಗಳಿಗೆ ಮಹತ್ವ ನೀಡದ ೨೦೧೩ರ ಭೂಸ್ವಾಧೀನ ಮಸೂದೆಯನ್ನು ಯಾವ ರಾಜ್ಯ ಸರಕಾರ ಜಾರಿ ಗೊಳಿಸಬಹುದೆಂದು ಕಾದು ನೋಡಬೇಕಾಗಿದೆ ಎಂದು ಕೇಂದ್ರ ಎಚ್ಚರಿಸಿದೆ.

**ಸಾಮಾಜಿಕ ವೆಚ್ಚ**

೨೦೧೩ರ ಭೂಸ್ವಾಧೀನ ಮಸೂದೆಯ ತಿದ್ದುಪಡಿಗೆ ಎನ್‌ಡಿಎ ಸರಕಾರ ಮುಂದಿಟ್ಟ ಕಾರಣಗಳನ್ನು ಪರಿಶೀಲಿಸುವ. ಸಾಮಾಜಿಕ ಪರಿಣಾಮ ಲೆಕ್ಕಾಚಾರ (ಸೋಷಿಯಲ್ ಇಂಪ್ಯಾಕ್ಟ್ ಅಸೆಸ್‌ಮೆಂಟ್) ಮತ್ತು ಭೂಮಾಲೀಕರ ಒಪ್ಪಿಗೆ, ಈ ಎರಡು ಅಂಶಗಳು ಮಾರುಕಟ್ಟೆಯ ಸಾಂಪ್ರದಾಯಿಕ ತಿಳುವಳಿಕೆಯ ದೃಷ್ಟಿಯಿಂದ ಅಸಂಬದ್ಧ. ಮಾರುಕಟ್ಟೆಯ ಸಾಂಪ್ರದಾಯಿಕ ತಿಳುವಳಿಕೆ ದೃಷ್ಟಿಯಿಂದ ಖರೀದಿಸುವವರು ಮತ್ತು ಮಾರುವವರು ಮಾತ್ರ ಮುಖ್ಯ. ಮಾರುವವರು ತಮ್ಮ ಸರಕಿಗೆ ಅತೀ ಹೆಚ್ಚು ಬೆಲೆ ನಿರೀಕ್ಷಿಸಿದರೆ ಖರೀದಿಸುವವರು ಅಗ್ಗದ ಬೆಲೆಗೆ ಸರಕು ಸಿಗಬೇಕೆಂದು ಬಯಸುತ್ತಾರೆ. ಜೊತೆಗೆ ಸರಕಿನ ಬೆಲೆ ನಿಗದಿಗೊಳಿಸುವಾಗ ಕೇವಲ ಸರಕಿನ ಮೌಲ್ಯವನ್ನು ಮಾತ್ರ ಪರಿಗಣಿಸಲಾಗುತ್ತಿದೆ. ೨೦೧೩ರ ಭೂಸ್ವಾಧೀನ ಮಸೂದೆಯಲ್ಲಿ ಭೂ ಮಾರುಕಟ್ಟೆಯನ್ನು ಅದರಲ್ಲೂ ಉದ್ದಿಮೆಗಳ ಯೋಜನೆಗೆ ಬಳಕೆ ಯಾಗುವ ಭೂ ಮಾರುಕಟ್ಟೆಯನ್ನು ಇಷ್ಟೊಂದು ಸರಳ ಅರ್ಥದಲ್ಲಿ ಪರಿಗಣಿಸಿಲ್ಲ. ಅದರ ಬದಲು ಇಂದಿನ ಅಭಿವೃದ್ಧಿಯ ದೃಷ್ಟಿಯಿಂದ ನೋಡಲಾಗಿದೆ. ಹೊಸ ಅಭಿವೃದ್ಧಿ ಪರಿಕಲ್ಪನೆಯಲ್ಲಿ ಯೋಜನೆಯ ವೆಚ್ಚವನ್ನು ಲೆಕ್ಕ ಹಾಕುವಾಗ ಉದ್ದಿಮೆಗಳು ಹಿಂದಿನ ರೀತಿಯಲ್ಲೇ ಸ್ಥಿರ ಮತ್ತು ಚರ ವೆಚ್ಚಗಳನ್ನು ಗಮನ ದಲ್ಲಿಟ್ಟುಕೊಂಡರೆ ಸಾಲದು, ಪರಿಸರ ಮತ್ತು ಸಾಮಾಜಿಕ ವೆಚ್ಚಗಳನ್ನು ಪರಿಗಣಿಸಬೇಕಾಗಿದೆ. ಒಂದು ವೇಳೆ ಈ ವೆಚ್ಚವನ್ನು ಉದ್ದಿಮೆಗಳು ಭರಿಸದಿದ್ದರೆ ಸರಕಾರ ಭರಿಸಬೇಕು. ಸರಕಾರ ಅಂದರೆ ನಮ್ಮ ನಿಮ್ಮ ತೆರಿಗೆ ಹಣದಿಂದ ಭರಿಸಬೇಕು. ಇದೊಂದು ಬಗೆಯಲ್ಲಿ ಉದ್ದಿಮೆಗಳಿಗೆ ಸಬ್ಸಿಡಿ ನೀಡಿದಂತೆ.

ಬಳ್ಳಾರಿ ಗಣಿಗಾರಿಕೆ ಉದಾಹರಣೆಯ ಮೂಲಕ ಈ ಪರಿಸರ ಹಾಗೂ ಸಾಮಾಜಿಕ ವೆಚ್ಚದ ಕಲ್ಪನೆಯನ್ನು ಅರ್ಥಮಾಡಿಕೊಳ್ಳಬಹುದು. ಅದಿರು ತೆಗೆಯುವ ಎರಡು ವಿಧಾನಗಳಿವೆ. ಒಂದು ತೆರೆದ ಬಾವಿ ವಿಧಾನ. ಮತ್ತೊಂದು ಮುಚ್ಚಿದ ಬಾವಿ ವಿಧಾನ. ಮುಚ್ಚಿದ ಬಾವಿ ವಿಧಾನದಲ್ಲಿ ಬೋರ್‌ವೆಲ್ ರೀತಿಯಲ್ಲಿ ಭೂಮಿಯ ಆಳಕ್ಕೆ ರಂಧ್ರ ಕೊರೆದು ಅಲ್ಲಿಂದ ಕಬ್ಬಿಣದ ಅದಿರನ್ನು ಹೊರತರಲಾಗುವುದು. ಈ ವಿಧಾನದಲ್ಲಿ ಬಿಡಿಮಣ್ಣು ಹೆಚ್ಚು ಹೊರಬೀಳುವುದಿಲ್ಲ. ಜೊತೆಗೆ, ಪರಿಸರ ಕೂಡ ಹೆಚ್ಚು ಕೆಡುವುದಿಲ್ಲ. ಆದರೆ ಈ ವಿಧಾನ ಹೆಚ್ಚು ದುಬಾರಿ. ಆದುದರಿಂದ ನಮ್ಮಲ್ಲಿ ಮುಚ್ಚಿದ ಬಾವಿ ವಿಧಾನಕ್ಕಿಂತ ಹೆಚ್ಚು ತೆರದ ಬಾವಿ ವಿಧಾನದಲ್ಲೇ ಗಣಿಗಾರಿಕೆ ನಡೆಯುತ್ತಿದೆ. ತೆರೆದ ಬಾವಿ ವಿಧಾನ ತುಂಬ ಹಳೆಯದು. ಈ ವಿಧಾನದಲ್ಲಿ ಭೂಮಿಗೆ ರಂಧ್ರ ಕೊರೆದು ಮದ್ದುಗುಂಡುಗಳನ್ನು ತುಂಬಿ ಸಿಡಿಸಲಾಗುವುದು. ಹೀಗೆ ಸಿಡಿಸಿದಾಗ ಮಣ್ಣು ಮತ್ತು ಅದರಲ್ಲಿ ಸೇರಿಕೊಂಡಿರುವ ಕಬ್ಬಿಣದ ಅದಿರು ಹೊರಬೀಳುತ್ತದೆ. ಹೊರಬೀಳುವ ಮಣ್ಣಿನ ಪ್ರಮಾಣಕ್ಕೆ ಹೋಲಿಸಿದರೆ ಕಬ್ಬಿಣದ ಅದಿರು ತುಂಬಾ ಕಡಿಮೆ ಇರುತ್ತದೆ. ಕೆಲವು ಟನ್ ಅದಿರು ಸಂಗ್ರಹಕ್ಕೆ ಹಲವು ಟನ್ ಬಿಡಿಮಣ್ಣು ಸೃಷ್ಟಿಯಾಗುತ್ತದೆ.

ಈ ಬಗೆಯಲ್ಲಿ ಸೃಷ್ಟಿಯಾದ ಮಣ್ಣನ್ನು ಇಲ್ಲಿ ಬೀಳುವ ಮಳೆ ನೀರು ಕೊಚ್ಚಿಕೊಂಡು ಸುತ್ತಲಿನ ಹೊಲಗಳಿಗೆ, ಕೆರೆಗಳಿಗೆ, ನದಿಗಳಿಗೆ, ಅಣೆಕಟ್ಟುಗಳಿಗೆ ತುಂಬುತ್ತದೆ. ಗಣಿಮಣ್ಣು ತುಂಬಿದ ಹೊಲಗಳು ಕೃಷಿ ಯೋಗ್ಯತೆ ಕಳೆದುಕೊಂಡರೆ ಗಣಿ ಹೂಳು ತುಂಬಿದ ಅಣೆಕಟ್ಟು, ಕೆರೆಗಳು ನೀರು ಸಂಗ್ರಹ ಸಾಮರ್ಥ್ಯ ಕಳೆದುಕೊಳ್ಳುತ್ತವೆ. ಇಷ್ಟು ಮಾತ್ರವಲ್ಲ, ಮದ್ದುಗುಂಡುಗಳ ಸಿಡಿತಕ್ಕೆ ಭೂಮಿಯಲ್ಲಿ ಪ್ರಕೃತಿದತ್ತವಾಗಿರುವ ಬಿರುಕುಗಳು ಮುಚ್ಚಿಕೊಳ್ಳುತ್ತವೆ. ಇದರಿಂದಾಗಿ ಮಳೆ ನೀರು ಭೂಮಿಯೊಳಗೆ ಹಿಂಗುವ ಬದಲು ನೇರ ಹರಿದು ಸುತ್ತಮುತ್ತಲಿನ ಹೊಲಗಳಿಗೆ, ಕೆರೆಗಳಿಗೆ ಗಣಿ ಮಣ್ಣನ್ನು ಸಾಗಿಸುತ್ತದೆ. ಇವೆಲ್ಲ ಗಣಿ ಉದ್ದಿಮೆಗಳು ಸೃಷ್ಟಿಸುವ ಪರಿಸರ ವೆಚ್ಚ ಮತ್ತು ನಾಶ. ಗಣಿಯ ಉದ್ದಿಮೆಗಳು ಪರಿಸರ ವೆಚ್ಚ ಮಾತ್ರ ಸೃಷ್ಟಿಸುವುದಿಲ್ಲ, ಸಾಮಾಜಿಕ ವೆಚ್ಚವನ್ನೂ ಸೃಷ್ಟಿಸುತ್ತವೆ. ಕೃಷಿ ನಾಶದಿಂದ ರೈತರು ವಲಸೆ ಹೋಗುವುದು ಅಥವಾ ಕೂಲಿನಾಲಿ ಮಾಡುವುದು ಅನಿವಾರ್ಯವಾಗುತ್ತದೆ. ಗಣಿ ಧೂಳಿನಿಂದ ಗಣಿಯಲ್ಲಿ ದುಡಿಯುವವರು ಮಾತ್ರವಲ್ಲದೆ ಸುತ್ತಮುತ್ತಲಿನ ಜನರು ಕೂಡ ಶ್ವಾಸಕೋಶದ ರೋಗದಿಂದ ಬಳಲುತ್ತಾರೆ. ಹತ್ತು ಟನ್ ಸಾಮರ್ಥ್ಯದ ಲಾರಿಯಲ್ಲಿ ಹದಿನೈದು ಟನ್ ಅದಿರು ತುಂಬಿ ಸಾಗಿಸುವುದರಿಂದ ರಸ್ತೆಗಳು ಸಂಪೂರ್ಣ ಕೆಡುತ್ತವೆ. ಇವೆಲ್ಲ ಗಣಿಗಾರಿಕೆಯ ಸಾಮಾಜಿಕ ವೆಚ್ಚಗಳು. ಈ ಬಗೆಯ ಪರಿಸರ ಹಾಗೂ ಸಾಮಾಜಿಕ ವೆಚ್ಚವನ್ನು ಗಣಿ ಮಾಲೀಕರು ಭರಿಸುವುದಿಲ್ಲ. ಈ ವೆಚ್ಚಗಳ ಬಹುಭಾಗವನ್ನು ಸರಕಾರ ಮತ್ತು ಸುತ್ತಮುತ್ತಲಿನ ಜನ ಭರಿಸುತ್ತಾರೆ.

೨೦೧೩ರ ಭೂಸ್ವಾಧೀನ ಮಸೂದೆ ಜಾರಿಗೆ ಬರುವ ತನಕ ಪರಿಸರದ ವೆಚ್ಚದ ಕಲ್ಪನೆ ಇತ್ತು ಆದರೆ ಸಾಮಾಜಿಕ ವೆಚ್ಚದ ಕಲ್ಪನೆ ಇರಲಿಲ್ಲ. ಈ ಎರಡೂ ವೆಚ್ಚಗಳನ್ನು ಉದ್ದಿಮೆಗಳು ಭರಿಸಬೇಕೆನ್ನುವ ಕಲ್ಪನೆ ನಮ್ಮಲ್ಲಿರಲಿಲ್ಲ. ೨೦೧೩ರಲ್ಲಿ ಯುಪಿಎ ಸರಕಾರ ಭೂಸ್ವಾಧೀನ ಮಸೂದೆ ತರುವ ತನಕ ವಸಾಹತು ಸರಕಾರದ ಭೂಸ್ವಾಧೀನ ಮಸೂದೆ ಚಾಲ್ತಿಯಲ್ಲಿತ್ತು. ಡಿಫೆನ್ಸ್ ಉದ್ದೇಶಗಳಿಗೆ, ಅಣೆಕಟ್ಟು ನಿರ್ಮಾಣಕ್ಕೆ, ಸಾರಿಗೆ ಸಂಪರ್ಕಗಳ ಅಭಿವೃದ್ಧಿಗಾಗಿ, ಉದ್ದಿಮೆಗಳ ಸ್ಥಾಪನೆಗೆ, ವಿಶೇಷ ಆರ್ಥಿಕ ವಲಯ ನಿರ್ಮಾಣಕ್ಕಾಗಿ, ಭೂ ಬ್ಯಾಂಕ್ ಸ್ಥಾಪನೆಗಾಗಿ ಹೀಗೆ ಹಲವು ಯೋಜನೆ ಗಳಿಗಾಗಿ ಲಕ್ಷಾಂತರ ಎಕರೆ ಕೃಷಿ ಭೂಮಿಯನ್ನು ಸರಕಾರ ಸ್ವಾಧೀನಪಡಿಸಿಕೊಂಡಿದೆಯೆಂದು ಹಿಂದಿನ ಪ್ಯಾರಾಗಳಲ್ಲಿ ನೋಡಿದ್ದೇವೆ. ಈ ಎಲ್ಲ ಭೂಸ್ವಾಧೀನ ಗಳನ್ನು ಸಾರ್ವಜನಿಕ ಆಸಕ್ತಿ ಅಥವಾ ರಾಷ್ಟ್ರೀಯ

ಆಸಕ್ತಿ ಹೆಸರಲ್ಲಿ ಮತ್ತು ಹಲವರ ಅನುಕೂಲಕ್ಕಾಗಿ ಕೆಲವರು ಕಷ್ಟನಷ್ಟ ಅನುಭವಿಸುವುದು ಅನಿವಾರ್ಯವೆನ್ನುವ ನೆಲೆಯಲ್ಲಿ ಇಂತಹ ಭೂಸ್ವಾಧೀನಗಳನ್ನು ಸಮರ್ಥಿಸಿಕೊಳ್ಳಲಾಗಿದೆ. ಐವತ್ತು ಅರುವತ್ತರ ದಶಕಗಳಲ್ಲಿ ಭೂಸ್ವಾಧೀನದಿಂದ ಭೂಮಿ ಕಳಕೊಂಡವರಿಗೆ ಪರಿಹಾರ ನೀಡಬೇಕು, ಪುನರ್‌ವಸತಿ ಕಲ್ಪಿಸಬೇಕೆನ್ನುವ ವಾದಗಳಿಗೆ ಮಹತ್ವ ಇರಲಿಲ್ಲ. ಕಾಲಕ್ರಮೇಣ ಭೂಮಿ ಕಳೆದುಕೊಂಡವರಿಗೆ ಹೆಚ್ಚಿನ ಪರಿಹಾರ ನೀಡುವ, ಪುನರ್‌ವಸತಿ ಮಾಡುವ ಪದ್ಧತಿ ಜಾರಿಗೆ ಬಂತು. ಆದರೆ ಇವೆಲ್ಲಕ್ಕೆ ಬಲವಾದ ಕಾನೂನಿನ ಬೆಂಬಲ ಇರಲಿಲ್ಲ. ೨೦೧೩ರ ಭೂಸ್ವಾಧೀನ ಮಸೂದೆ ನಿಜವಾದ ಅರ್ಥದಲ್ಲಿ ಕೃಷಿಕರ ಹಕ್ಕನ್ನು ರಕ್ಷಿಸಲು ಅವಕಾಶ ಕಲ್ಪಿಸಿದೆ. ಈ ಮಸೂದೆ ಎಲ್ಲ ರಾಜ್ಯಗಳಲ್ಲಿ ಅನುಷ್ಠಾನಗೊಳ್ಳುವ ಮೊದಲು ತಿದ್ದುಪಡಿಗೊಂಡಿರುವುದರಿಂದ ಸಾಮಾಜಿಕ ವೆಚ್ಚವನ್ನು ಉದ್ದಿಮೆಗಳು ಭರಿಸಬೇಕೆನ್ನುವ ಷರತ್ತು ಮೂಲೆಗುಂಪಾಗಿದೆ. ಅಂದರೆ ಸಾಮಾಜಿಕ ವೆಚ್ಚವನ್ನು ಹಿಂದಿನದೇ ರೀತಿಯಲ್ಲಿ ಜನರು ಅಥವಾ ಸರಕಾರವೇ ಭರಿಸುವುದು ಮುಂದುವರಿಯುತ್ತದೆ.

**ಉದ್ದಿಮೆಪರ ವಾದ**

ಸ್ವಾಧೀನಪಡಿಸಿಕೊಂಡ ಭೂಮಿಯನ್ನು ಐದು ವರ್ಷದೊಳಗೆ ಬಳಸಿಕೊಳ್ಳಬೇಕು. ಇಲ್ಲವಾದರೆ ಪುನಃ ರೈತರಿಗೆ ನೀಡಬೇಕೆನ್ನುವ ಷರತ್ತನ್ನು ರದ್ದುಗೊಳಿಸಲಾಗಿದೆ. ಈ ಬದಲಾವಣೆಗಳಿಂದ ಮುಂದೇನು ಆಗಬಹುದೆಂದು ತೀರ್ಮಾನಿಸಲು ಕಾಯಬೇಕಾಗಿಲ್ಲ. ಈ ಮಸೂದೆ ಅನುಷ್ಠಾನಗೊಳ್ಳುವ ಮುನ್ನ (ಈ ಮಸೂದೆ ಇನ್ನೂ ಸರಿಯಾಗಿ ಅನುಷ್ಠಾನಗೊಂಡಿಲ್ಲ) ನಡೆದ ಭೂಸ್ವಾಧೀನಗಳು ಸೃಷ್ಟಿಸಿದ ಅವಾಂತರಗಳು ನಮ್ಮ ಮುಂದಿವೆ. ಅವುಗಳ ಮೇಲೆ ಕಣ್ಣಾಡಿಸಿದರೆ ಮುಂದಿನ ದಿನಗಳಲ್ಲಿ ಈ ತಿದ್ದುಪಡಿ ಕೃಷಿಕರನ್ನು ಕಾಡುವ ಪರಿಯನ್ನು ಅರ್ಥಮಾಡಿಕೊಳ್ಳಬಹುದು. ವಿಶೇಷ ಆರ್ಥಿಕ ವಲಯಗಳಿಗೆ ಭೂಮಿ ಸರಾಗವಾಗಿ ಸಿಗುತ್ತಿಲ್ಲ ಎನ್ನುವುದು ಭೂಸ್ವಾಧೀನ ಮಸೂದೆಯ ತಿದ್ದುಪಡಿಗೆ ಬಹುಮುಖ್ಯ ಕಾರಣ. ಈ ಕಾರಣ ಎಷ್ಟು ಸರಿಯೆಂದು ಪರಿಶೀಲಿಸುವ. ಈ ತಿದ್ದುಪಡಿ ತರುವ ಮುನ್ನ ಕಂಟ್ರೋಲರ್ ಆ್ಯಂಡ್ ಆಡಿಟರ್ ಜನರಲ್ (ಸಿ.ಎ.ಜಿ.) ವಿಶೇಷ ಆರ್ಥಿಕ ವಲಯಗಳು ಸ್ವಾಧೀನಪಡಿಸಿಕೊಂಡ ಭೂಮಿಯ ಸ್ಥಿತಿಗತಿಗೆ ಸಂಬಂಧಿಸಿದ ವರದಿ ಮಂಡಿಸಿದೆ. ಆ ವರದಿ ಪ್ರಕಾರ ವಿಶೇಷ ಆರ್ಥಿಕ ವಲಯಗಳ ಅಭಿವೃದ್ಧಿಗಾಗಿ ವಶಪಡಿಸಿಕೊಂಡ ೧,೧೪,೦೮೮ ಎಕರೆ ಭೂಮಿಯಲ್ಲಿ ೪೩,೩೫೩ ಎಕರೆ ಭೂಮಿಯಲ್ಲಿ ಏನೇನೂ ಕೆಲಸ ನಡೆದಿಲ್ಲ. ಅವಶ್ಯಕತೆಗಿಂತ ಹೆಚ್ಚು ಭೂಮಿ ಸ್ವಾಧೀನಪಡಿಸಿಕೊಂಡಿರುವ ರಿಲಯನ್ಸ್, ಡಿಎಲ್‌ಫ್, ಇಸ್ಸಾರ್ ಕಂಪೆನಿಗಳನ್ನು ಸಿ.ಎ.ಜಿ. ತರಾಟೆಗೆ ತೆಗೆದುಕೊಂಡಿದೆ. ಮುಖೇಶ್ ಅಂಬಾನಿಯ ಬಹುಉತ್ಪನ್ನಗಳ ಉದ್ದಿಮೆಗಳಿಗಾಗಿ ೨೦೦೬ರಲ್ಲಿ ಮುಂಬಯಿಯಲ್ಲಿ ೩೧೨೫ ಎಕರೆ ಭೂಸ್ವಾಧೀನ ನಡೆದಿದೆ. ಆದರೆ ಇಂದಿನವರೆಗೆ ಅಲ್ಲಿ ಯಾವುದೇ ಉದ್ದಿಮೆ ತಲೆ ಎತ್ತಿಲ್ಲವೆಂದು ವರದಿ ದಾಖಲಿಸಿದೆ. ಕೆಲವು ಉದ್ದಿಮೆಗಳು ವಿಶೇಷ ಆರ್ಥಿಕ ವಲಯ ಸ್ಥಾಪಿಸುವ ನೆಪದಲ್ಲಿ ವಶಪಡಿಸಿಕೊಂಡ ಭೂಮಿಯನ್ನು ಬ್ಯಾಂಕ್‌ಗಳಲ್ಲಿ ಅಡವಿಟ್ಟು ೬೩೧೯ ಕೋಟಿ ರೂಗಳ ಸಾಲ ಪಡೆದಿವೆಯೆಂದು ವರದಿ ದೂರಿದೆ.

ರಾಷ್ಟ್ರೀಯ ಮಹತ್ವದ ಯೋಜನೆಗಳನ್ನು ಜಾರಿಗೆ ತರಲು ಈ ಮಸೂದೆ ಅಡ್ಡಿಯಾಗುತ್ತಿದೆ ಎನ್ನುವುದು ೨೦೧೩ರ ಭೂಸ್ವಾಧೀನ ಮಸೂದೆಯ ತಿದ್ದುಪಡಿಗೆ ನೀಡಿರುವ ಮತ್ತೊಂದು ಕಾರಣ. ಹಾಗೆಂದು ಪಟ್ಟಿ ಮಾಡಿದ ಯೋಜನೆಗಳಲ್ಲಿ ಡಿಫೆನ್ಸ್, ಮೂಲ ಸೌಕರ್ಯಗಳು ಕೂಡ ಸೇರಿವೆ. ವಾಸ್ತವದಲ್ಲಿ ೨೦೧೩ರ ಮಸೂದೆ ಸುಮಾರು ೧೩ ಕಾಯಿದೆಗಳ ಮೂಲಕ ನಡೆಯುವ ಭೂಸ್ವಾಧೀನವನ್ನು ಹೊರಗಿಟ್ಟಿದೆ. ರೈಲು ಮಾರ್ಗ, ರಾಷ್ಟ್ರೀಯ ಹೆದ್ದಾರಿ, ಅಣುವಿದ್ಯುತ್ ಸ್ಥಾವರ ಮುಂತಾದವುಗಳನ್ನು ಸೋಷಿಯಲ್ ಇಂಪ್ಯಾಕ್ಟ್ ಅಸೆಸ್‌ಮೆಂಟ್ ಪರಿಧಿಯಿಂದ ೨೦೧೩ರ ಕಾಯಿದೆ ಹೊರಗಿಟ್ಟಿದೆ. ಅದೇ ರೀತಿಯಲ್ಲಿ ಡಿಫೆನ್ಸ್ ಹಾಗೂ ರಾಷ್ಟ್ರೀಯ ಭದ್ರತಾ ಯೋಜನೆಗಳನ್ನು ಎಮರ್ಜನ್ಸಿ ಕಲಂನಡಿಯಲ್ಲಿ ರಕ್ಷಿಸಲಾಗಿತ್ತು. ಇದೇ ಸಂದರ್ಭದಲ್ಲಿ ಈ ೧೩ ಕಾಯಿದೆಗಳನ್ನು ತಿದ್ದುಪಡಿ ಮಾಡಿ ಹೊಸ ಭೂಸ್ವಾಧೀನ ಕಾಯಿದೆ ಸೂಚಿಸುವ ಪುನರ್‌ವಸತಿ ಹಾಗೂ ಪುನರ್‌ನಿರ್ಮಾಣ ಕಲಂಗಳನ್ನು ಡಿಸೆಂಬರ್ ೨೦೧೪ರೊಳಗೆ ಸೇರಿಸಬೇಕೆಂದು ತೀರ್ಮಾನಿಸಲಾಗಿತ್ತು. ೧೩ ಕಾಯಿದೆಗಳನ್ನು ತಿದ್ದುಪಡಿ ಮಾಡಿ ೨೦೧೩ರ ಭೂಸ್ವಾಧೀನ ಮಸೂದೆಯನ್ನು ಬಲಗೊಳಿಸುವ ಬದಲು ಹೊಸ ಸರಕಾರ ಭೂಸ್ವಾಧೀನ ಮಸೂದೆಯನ್ನು ತಿದ್ದುಪಡಿ ಮಾಡಿ ಹಲವು ಯೋಜನೆಗಳನ್ನು ಆ ಮಸೂದೆಯ ವ್ಯಾಪ್ತಿಯಿಂದ ಹೊರಗಿಡಲು ಪ್ರಯತ್ನಿಸುತ್ತಿದೆ.

ಅದರಲ್ಲೂ ಸಾರ್ವಜನಿಕ ಹಾಗೂ ಖಾಸಗಿ ಪಾಲುಗೊಳ್ಳುವಿಕೆಯಲ್ಲಿ ನಡೆಯುವ ಮೂಲಸೌಕರ್ಯಗಳ ಯೋಜನೆಗಳನ್ನು ಹೊರಗಿಡುವುದು ತುಂಬ ಅಪಾಯಕಾರಿ ನಿಲುವು. ಏಕೆಂದರೆ ಖಾಸಗೀಕರಣ ಪ್ರಕ್ರಿಯೆ ಆರಂಭವಾದ ನಂತರ ಸಾಮಾಜಿಕ ಹಾಗೂ ಆರ್ಥಿಕ ಮೂಲಸೌಕರ್ಯಗಳನ್ನು ಉತ್ಪಾದಿಸುವ ಮತ್ತು ಪೂರೈಸುವ ಜವಾಬ್ದಾರಿ ಸರಕಾರದಿಂದ ಖಾಸಗಿ ಉದ್ದಿಮೆಗಳಿಗೆ ವರ್ಗಾವಣೆಗೊಂಡಿದೆ. ಸಾರಿಗೆ, ಸಂಪರ್ಕ, ವಸತಿ, ಶಿಕ್ಷಣ, ಆರೋಗ್ಯ ಇವೆಲ್ಲವೂ ಇಂದು ಖಾಸಗಿ ಮತ್ತು ಸಾರ್ವಜನಿಕ ಪಾರ್ಟನರ್‌ಷಿಪ್ (ಪಿಪಿಪಿ) ಮಾದರಿಯಲ್ಲಿ ಜಾರಿಗೆ ಬರುತ್ತಿವೆ. ಈ ರೀತಿಯಲ್ಲಿ ಜಾರಿಗೆ ಬರುವ ಬಹುತೇಕ ಯೋಜನೆಗಳಿಗೆ ಲಕ್ಷಾಂತರ ಎಕರೆ ಭೂಮಿ ಬೇಕು. ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಭೂಸ್ವಾಧೀನ ನಡೆಯುವಾಗ ಕೃಷಿಕರ ಆಸಕ್ತಿಯನ್ನು ಕಾಪಾಡುವ ೨೦೧೩ರ ಭೂಸ್ವಾಧೀನ ಮಸೂದೆಯನ್ನು ಗಟ್ಟಿಗೊಳಿಸಬೇಕಿತ್ತು. ಗಟ್ಟಿಗೊಳಿಸುವ ಬದಲು ಸಡಿಲಗೊಳಿಸುವುದು ಸರಕಾರ ಯಾರ ಆಸಕ್ತಿಯನ್ನು ರಕ್ಷಿಸಹೊರಟಿದೆ ಎನ್ನುವುದರತ್ತ ಬೊಟ್ಟುಮಾಡುತ್ತಿದೆ. ಆರ್ಥಿಕ ಕ್ಷೇತ್ರದಲ್ಲಿ ಸರಕಾರ ಮೂಗು ತೂರಿಸಬಾರದೆಂದು ಉದ್ದಿಮೆಗಳು ಅಟ್ಟದ ಮೇಲಿಂದ ಕಿರುಚುತ್ತವೆ. ಆದರೆ ಇದೇ ಉದ್ದಿಮೆಗಳು, ರೈತರ ಭೂಮಿಯನ್ನು ಸರಕಾರ ಬಲಾತ್ಕಾರದಿಂದ ಕಿತ್ತು ತಮಗೆ ಕೊಡಬೇಕೆಂದು ಕೇಳುತ್ತಿವೆ. ಶ್ರೀಮಂತರಿಂದ ಕಿತ್ತು ಬಡವರಿಗೆ ನೀಡುವುದು 'ಸೋಷಿಯಲಿಸಂ' ಎನ್ನುವುದಾದರೆ ಬಡವರಿಂದ ಕಿತ್ತು ಶ್ರೀಮಂತರಿಗೆ ನೀಡುವುದು 'ಕ್ಯಾಪಿಟಲಿಸಂ' ಎನ್ನುವಂತಾಗಿದೆ. ನೀರು, ಭೂಮಿ ಎಲ್ಲದರ ಮೇಲೂ ಸರಕಾರಕ್ಕೆ ಹಕ್ಕಿದೆ ಎನ್ನುವ ವಾದ ಇಟ್ಟುಕೊಂಡು ರೈತರ ಭೂಮಿಯನ್ನು ಕಿತ್ತುಕೊಂಡು ಉದ್ದಿಮೆಗಳಿಗೆ ನೀಡುವುದು ಎಷ್ಟು ನ್ಯಾಯ ? ನಮ್ಮ ಆಹಾರ ಭದ್ರತೆಯ ಪ್ರಶ್ನೆ ಏನಾಗಬಹುದು ? ರೈತರು ಕೇಳಿದ ಬೆಲೆ ಕೊಡುತ್ತೇವೆ, ಆದುದರಿಂದ ಇದು ಬಲಾತ್ಕಾರವಲ್ಲ ಎನ್ನುವ ವಾದವೂ ಇದೆ. ಹೌದಪ್ಪ, ಉದ್ದಿಮೆಗಳು ಕೊಡುವ ಕೋಟಿ ಬೆಲೆಗೂ ಭೂಮಿ ಮಾರಲು ಇಷ್ಟವಿಲ್ಲದ ರೈತರ ಗತಿಯೇನು ? ಮುಕ್ತ ಮಾರುಕಟ್ಟೆಯ ಅಡಿಪಾಯವೇ ಸ್ವಾತಂತ್ರ್ಯ. ಅಂದರೆ ಇಷ್ಟವಿದ್ದರೆ ಮಾರುವ, ಇಷ್ಟವಿಲ್ಲದಿದ್ದರೆ ಮಾರದಿರುವ ಸ್ವಾತಂತ್ರ್ಯ. ಆದರೆ ಈಗ ಹೊರಡಿಸಿರುವ ತಿದ್ದುಪಡಿ ಆರ್ಡಿನೆನ್ಸ್ ಕೃಷಿಕರ ಈ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತಿದೆ.

ನಿನ್ನೆ ಮೊನ್ನೆ ತನಕ ಜಾರಿಯಲ್ಲಿದ್ದ ವಸಾಹತು ಸರಕಾರದ ಭೂಸ್ವಾಧೀನ ಮಸೂದೆಯನ್ನು ೨೦೧೩ರಲ್ಲಿ ತಿದ್ದುಪಡಿಗೊಳಿಸಿ ಹೊಸ ಭೂಸ್ವಾಧೀನ ಮಸೂದೆ ಜಾರಿಗೆ ಬಂತು. ಈ ಮಸೂದೆ ಜಾರಿಗೆ ಬರುವತನಕ ಬಲಾತ್ಕಾರದ ಭೂಸ್ವಾಧೀನಕ್ಕೆ ಒಪ್ಪಿಸಿಕೊಳ್ಳುವುದು ಬಿಟ್ಟರೆ ಕೃಷಿಕರಿಗೆ ಬೇರೆ ದಾರಿ ಇರಲಿಲ್ಲ. ೨೦೧೩ರ ಭೂಸ್ವಾಧೀನ ಮಸೂದೆ ಕೃಷಿಕರ ಈ ಅಸಹಾಯಕ ಸ್ಥಿತಿಯನ್ನು ಬದಲಾಯಿಸಿ ಅವರ ಅಭಿಪ್ರಾಯಕ್ಕೂ ಬೆಲೆ ಬರುವಂತೆ ಮಾಡಿದೆ. ತಮ್ಮ ಭೂಮಿಗೆ ಸಲ್ಲಬೇಕಾದ ಬೆಲೆ ನಿಗದಿಗೊಳಿಸುವ ಪ್ರಕ್ರಿಯೆಯಲ್ಲಿ ಪಾಲುಗೊಳ್ಳುವ ಹಕ್ಕನ್ನು ಸಾಮಾಜಿಕ ಪರಿಣಾಮ ಲೆಕ್ಕಾಚಾರ ಸೆಕ್ಷನ್ ರೈತರಿಗೆ ನೀಡಿತ್ತು. ಜೊತೆಗೆ, ಯೋಜನೆ ನಿಜವಾಗಿಯೂ ಸಾರ್ವಜನಿಕ ಆಸಕ್ತಿ ರೀತಿಯದ್ದೇ ಅಥವಾ ಬೇರೆಯೇ ರೂಪದ್ದೇ ಎಂದು ತೀರ್ಮಾನಿಸುವ ಪ್ರಕ್ರಿಯೆಯಲ್ಲೂ ರೈತರು ಪಾಲುಗೊಳ್ಳಬಹುದಿತ್ತು. ಆದರೆ ಹೊಸ ಸರಕಾರ ತಂದಿರುವ ತಿದ್ದುಪಡಿ ರೈತರನ್ನು ಈ ಎರಡೂ ಪ್ರಕ್ರಿಯೆಗಳಿಂದ ಹೊರಗಿಡುತ್ತಿದೆ. ರೈತರು ಹಿಂದಿನ ರೀತಿಯಲ್ಲೇ ಜಿಲ್ಲಾಧಿಕಾರಿಗಳು ಮತ್ತು ಇತರ ಅಧಿಕಾರಿಗಳು ಕೈಗೊಳ್ಳುವ ತೀರ್ಮಾನಕ್ಕೆ ಒಪ್ಪಿಸಿಕೊಳ್ಳುವುದು ಬಿಟ್ಟರೆ ಬೇರೆ ದಾರಿಯೇ ಇಲ್ಲ ಎನ್ನುವ ಸ್ಥಿತಿಯನ್ನು ತಿದ್ದುಪಡಿ ತಂದಿದೆ. ಹೀಗೆ ಅಭಿವೃದ್ಧಿಯಲ್ಲಿ ತಳವರ್ಗದ ಆಸಕ್ತಿ, ಅಭಿಪ್ರಾಯಗಳು ಮೇಲ್ವರ್ಗದವರ ಆಸಕ್ತಿ, ಅಭಿಪ್ರಾಯಗಳಷ್ಟೇ ಮುಖ್ಯ ಎನ್ನುವುದನ್ನು ೨೦೧೩ರ ಭೂಸ್ವಾಧೀನ ಮಸೂದೆ ಪ್ರತಿಬಿಂಬಿಸಿದರೆ ಈ ಕಾಯಿದೆಗೆ ಮೋದಿ ಸರಕಾರ ತಂದಿರುವ ತಿದ್ದುಪಡಿ ಮೇಲ್ವರ್ಗದ ಆಸಕ್ತಿ, ಅಭಿಪ್ರಾಯಗಳು ತಳವರ್ಗದ ಆಸಕ್ತಿ, ಅಭಿಪ್ರಾಯಗಳಿಗಿಂತ ಹೆಚ್ಚು ಮುಖ್ಯ ಎನ್ನುವುದನ್ನು ಬಿಂಬಿಸುತ್ತಿದೆ. ಇದು ಕ್ಯಾಪಿಟಲಿಸ್ಟ್ ಅಭಿವೃದ್ಧಿಯ ಮೂಲಗುಣ ಕೂಡ.

---

**ಡಾ॥ ಎಂ. ಚಂದ್ರ ಪೂಜಾರಿ**
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ
ವಿದ್ಯಾರಣ್ಯ, ಬಳ್ಳಾರಿ – ೫೮೩ ೨೭೬

# ಅನನ್ಯ ಸ್ತ್ರೀಪರ ಧ್ವನಿ ತಾರಾಬಾಯಿ ಶಿಂಧೆ

**ರವಿ ರಾ. ಅಂಚನ್**

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ಭಾರತದ ಜನಮಾನಸ ತಮ್ಮ ಅನನ್ಯತೆಯ ಹುಡುಕಾಟ ಮತ್ತು ಮಾನವ ಹಕ್ಕಿನ ಹೋರಾಟ, ಎರಡಕ್ಕೂ ಮುಖ ಮಾಡತೊಡಗಿದ ಸಂದರ್ಭವಾಗಿತ್ತು. ಅದಾಗಲೇ ಒಂದೆಡೆ ಸಾಮಾಜಿಕ ಸಮಾನತೆ, ಇನ್ನೊಂದೆಡೆ, ರಾಜಕೀಯ ಜಾಗೃತಿಗಳ ಸಂಚಲನೆ ಪ್ರಾರಂಭವಾಗಿತ್ತು. ಇದರ ಮಗದೊಂದು ಮಗ್ಗುಲಲ್ಲಿ ಶ್ರಮಿಕರು ತಮ್ಮ ಬುದ್ಧಿ-ಬೆವರಿಗೆ ನ್ಯಾಯೋಚಿತ ಮೌಲ್ಯವನ್ನು ಪಡೆಯುವ ಸಂಘಟನೆಯತ್ತ ಮುಖ ಮಾಡಿದ್ದರು.




ಇದೇ ಸಂಕ್ರಮಣ ಕಾಲದಲ್ಲಿ ಸ್ತ್ರೀಯರು ಕೂಡ ತಮ್ಮ ಹಕ್ಕು ಮತ್ತು ಸ್ವಾಭಿಮಾನಕ್ಕಾಗಿ ಸಂಘರ್ಷ ಹೂಡಲು ಅಣಿಯಾಗುತ್ತಿದ್ದರು.

ಅದಾಗಲೇ ಜಗತ್ತಿನ ಹಲವೆಡೆ ಸ್ತ್ರೀಯರು ತಮ್ಮ ಶೋಷಣೆಯ ವಿರುದ್ಧ ಸಂಘಟಿತರಾಗಿ ಬೀದಿಗೆ ಇಳಿದಿದ್ದರು. ಹೀಗೆ ಅವರು ನಿರಂತರ ತಮ್ಮನ್ನು ಶೋಷಿಸುತ್ತಲೇ ಬಂದಿರುವ ಪುರುಷ-ಪಾರಮ್ಯದ ವಿರುದ್ಧ ತಿರುಗಿಬಿದ್ದಿದ್ದರು. ಇವೆಲ್ಲದರ ಗತಿತಾರ್ಕಿಕ, ಅನನ್ಯ ಮಾದರಿಯ ಧ್ವನಿಯೇ ತಾರಾಬಾಯಿ ಶಿಂಧೆ. ಇವರು ಅಂದು ತಳೆದ ದಿಟ್ಟ ಸ್ತ್ರೀಪರ ನಿಲುವು ಇದೆಯಲ್ಲಾ, ಅದು ಯಾವ ಕಾಲಕ್ಕೂ ಸ್ತ್ರೀವಾದಿ ಚಿಂತನೆಗೆ ಸ್ಫೂರ್ತಿಯ ಸಿರಿ.

ತಾರಾಬಾಯಿ ಆಧುನಿಕ ಭಾರತ ಕಂಡ ಮೊದಲ ಸಾಲಿನ ತೀವ್ರಗಾಮಿ ಸ್ತ್ರೀವಾದಿ ಚಿಂತಕಿ. ಇವರು ಏಕಕಾಲಕ್ಕೆ ಪಿತೃಸತ್ತಕ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯ ಮತ್ತು ಅದು ಬಿತ್ತಿ ಬೆಳೆಸಿದ ಸಾಮಾಜಿಕ ವಿಷಮತೆ; ಇವೆರಡರ ಅಮಾನವೀಯ ನೆಲೆಗಳ ಮೇಲೆ ನಿರ್ಭಿಡೆಯಿಂದ; ಆದರೆ ಅಷ್ಟೇ ತಾರ್ಕಿಕವಾಗಿ ತಿರುಗಿಬಿದ್ದವರು. ಹಾಗಾಗಿ ಇವರ ಬರಹಗಳಲ್ಲಿ ಪುರುಷರ ಏಕಮುಖಿ ವಿರೋಧಕ್ಕಿಂತಲೂ ಹೆಚ್ಚಾಗಿ, ಸ್ತ್ರೀ-ಪುರುಷರ ಸಮಾನತೆಯ ತಾರ್ಕಿತ ಚಿಂತನೆಗಳಿವೆ. ಹೆಜ್ಜೆ ಹೆಜ್ಜೆಗೂ ಪ್ರತಿಗಾಮಿ ಚಿಂತನೆಗಳನ್ನು ಪ್ರಶ್ನಿಸುತ್ತಲೇ ಮುನ್ನಡೆಯುವ ಅವರ ಬರವಣಿಗೆಯ ವಿಶಿಷ್ಟ ಶೈಲಿ ದುಷ್ಟರನ್ನು ತಿವಿಯುವ, ಶಿಷ್ಟರನ್ನು ಬಡಿದೆಬ್ಬಿಸುವ ಕಸುವಿನಿಂದ ಕೂಡಿದೆ.

"ಸ್ತ್ರೀಯರಲ್ಲಿ ಅಲ್ಪಸ್ವಲ್ಪವಾದರೂ ಜ್ಞಾನವಿದ್ದಿದ್ದರೂ ಅವರು 'ಪುನರ್ವಿವಾಹ ಮಾಡಿಕೊಳ್ಳಬೇಡಿ' ಎನ್ನುವವರ ಶ್ರೀಮುಖಕ್ಕೆ ಬಾರಿಸುತ್ತಿದ್ದರು. ಒಂದೊಮ್ಮೆಗೆ ನಮ್ಮ ದೇಶದಲ್ಲಿ ಹತ್ತು ಸ್ತ್ರೀ ವಿದ್ವಾಂಸರಿರುತ್ತಿದ್ದರೆ, ಅವರು ಒಂದು ವೇಳೆ ವಿಧವೆಯರಾಗುತ್ತಿದ್ದರೆ ಅವರು ಪುನರ್ವಿವಾಹ ಮಾಡಿಕೊಳ್ಳಲು ಮನಸ್ಸು ಮಾಡುತ್ತಿದ್ದರು. ದುಷ್ಟ ಬ್ರಾಹ್ಮಣರ ತಂತ್ರಕ್ಕೆ ಅವರೆಂದೂ ತಲೆಬಾಗುತ್ತಿರಲಿಲ್ಲ" ಎಂದು ಹೇಳುವ ತಾರಾಬಾಯಿಯವರ ಮಾತಿನಲ್ಲಿ ವಿದ್ಯೆಯಿಲ್ಲದೆ ಸ್ತ್ರೀಯರ ಬದುಕು ಗುಲಾಮೀಕರಣಕ್ಕೆ ಒಳಗಾಯಿತು ಎನ್ನುವ ಕಠೋರ ಸತ್ಯ ಇದೆ.

ಜೊತೆಗೆ, ಸ್ತ್ರೀಯರಲ್ಲಿ ಒಗ್ಗಟ್ಟು ಮೂಡಿದರೇನೇ, ಅವರು ತಾವು ಅನುಭವಿಸುತ್ತ ಬಂದಿರುವ ಅನ್ಯಾಯದ ವಿರುದ್ಧ ಸೂಕ್ತವಾಗಿ ಪ್ರತಿಭಟಿಸಲು ಸಮರ್ಥರಾಗುತ್ತಾರೆ. ಮಾತ್ರವಲ್ಲ, ಗೌರವದ ಬದುಕು ಕಟ್ಟುವತ್ತ ದಿಟ್ಟ ಹೆಜ್ಜೆ ಇಡಬಲ್ಲರು ಎನ್ನುವ ಕಾಳಜಿ ಕಾಣುತ್ತದೆ. ಆದರೆ ಇಂತಹ ಪ್ರಗತಿಪರ



ತಾರಾಬಾಯಿ ಶಿಂಧೆ ಅವರು, ಅದುವರೆಗೆ ಶೋಷಣೆಯನ್ನೇ ಧಾರ್ಮಿಕ ಕರ್ತವ್ಯ ಎಂದು ಬಿಂಬಿಸುತ್ತಾ ಬಂದ ಮತ-ಮಾರ್ತಾಂಡರ ಅಮಾನುಷ ಸ್ತ್ರೀ ವಿರೋಧಿ ನಿಲುವಿಗೆ; ಅಂದಿನ ದಿನಗಳಲ್ಲೇ ದಿಟ್ಟತನದಿಂದ ಸವಾಲೆಸೆದ ಧೀರೆ ಕೂಡ. ಇಂತಹ ನಿರ್ಭೀತ ನಿಲುವಿನ ತಾರಾಬಾಯಿ ೧೮೫೦ರಲ್ಲಿ ಬುಲ್ಡಾನದಲ್ಲಿ ಹುಟ್ಟಿದರು. ಇವರಿಗೆ ಮರಾಠಿ, ಸಂಸ್ಕೃತ, ಇಂಗ್ಲಿಷ್ ಮೊದಲಾದ ಭಾಷೆಗಳ ಮೇಲೆ ಪ್ರಭುತ್ವವಿತ್ತು. ಹಾಗಿದ್ದೂ ಇವರು ಕಲಿತದ್ದೆಷ್ಟು ಎಂಬ ಬಗ್ಗೆ ಈವರೆಗೆ ಸ್ಪಷ್ಟ ಪುರಾವೆಗಳೇ ದೊರೆತಿಲ್ಲ ! ನಾವು ಯಾರೊಬ್ಬರ ಜೀವನ ವೃತ್ತಾಂತ ಬರೆಯುವಾಗ ಅಂತಹವರ ತಾಯಂದಿರ ಕುರಿತು ಬರೆಯಬೇಕಾಗುತ್ತದೆ. ಒಡಹುಟ್ಟುಗಳ ಬಗ್ಗೆ ದಾಖಲಿಸಬೇಕಾಗುತ್ತದೆ. ಅವರ ಹುಟ್ಟುಹಬ್ಬದ ಕುರಿತೂ ತಿಳಿಸಬೇಕಾಗುತ್ತದೆ. ಆದರೆ ತಾರಾಬಾಯಿಯವರ ವಿಷಯದಲ್ಲಿ ಇವಾವುದರ ಬಗ್ಗೆಯೂ ಮಾಹಿತಿ ಲಭ್ಯವಿಲ್ಲ. ಅವರಿಗೆ ನಾಲ್ಕು ಜನ ಸಹೋದರರಿದ್ದರು ಎಂದು ಹೇಳಲಾಗುತ್ತದೆ, ಅಷ್ಟೆ .

ತಾರಾಬಾಯಿ ಅವರ ತಂದೆ ಸತ್ಯಶೋಧಕ ಸಮಾಜದ ಕಾರ್ಯಕರ್ತರಾಗಿದ್ದ ಬಾಪೂಜಿ ಹರಿ ಶಿಂಧೆ. ಅಂದಿನ ದಿನಗಳಲ್ಲಿ ಬುಲ್ಡಾನದಲ್ಲಿದ್ದ ನಾಲ್ಕು ಜಮೀನ್ದಾರರ ಮನೆತನಗಳಲ್ಲಿ ಇವರದ್ದೂ ಒಂದು. ಉಳಿದ ಮೂರು ಬ್ರಾಹ್ಮಣರ ಮನೆತನಗಳಾಗಿದ್ದರೆ ಇವರದ್ದೊಂದೇ ಮರಾಠರ ಮನೆತನ. ಓರ್ವ ಸರಕಾರಿ ನೌಕರರಾಗಿದ್ದ ಇವರ ತಂದೆ ರೆವಿನ್ಯೂ ವಿಭಾಗದ ಡೆಪ್ಯೂಟಿ ಕಮಿಷನರ್ ಕಛೇರಿಯಲ್ಲಿ ಹೆಡ್ ಕ್ಲಾರ್ಕ್ ಆಗಿದ್ದರು. ಅದಲ್ಲದೆ, ಬಾಪೂಜಿ ಲೇಖಕರು ಕೂಡ. ಶಿಕ್ಷಣ ಪಕ್ಷಪಾತಿಯಾದ ಇವರು ಇಂಗ್ಲಿಷಿನಲ್ಲಿ 'ಹಿಂಟ್ ಟು ದಿ ಎಜ್ಯುಕೇಶನ್ - ನೇಟ್ಯೂ' ಎಂಬ ಕೃತಿಯನ್ನೂ ರಚಿಸಿದ್ದಾರೆ. ಇವರೇ ತಾರಾಬಾಯಿಯವರಿಗೆ ಪ್ರೇರಕ ಶಕ್ತಿ.

ತಿರುವಿಗೆ ಹತ್ತು ಮಂದಿ ಸ್ತ್ರೀಯರೂ ಇಲ್ಲವಲ್ಲಾ ಎನ್ನುವ ಕೊರಗು ಅವರಲ್ಲಿ ಕಾಡುತ್ತಿದ್ದದ್ದೂ ಅವರ ಬದುಕು ಬರಹಗಳಲ್ಲಿ ಬಿಂಬಿತವಾಗಿದೆ.

ಇವರು ತನ್ನ ಕಾಲದಲ್ಲಿ ದೃಢವಾಗಿ ನೆಲೆಯೂರಿದ್ದ ಜಾತಿ–ನೀತಿಯ ವೈರುಧ್ಯಗಳನ್ನು, ಲಿಂಗಾಧಾರಿತ ಅಸಮಾನತೆಯನ್ನು ಧಿಕ್ಕರಿಸಿ; ನ್ಯಾಯೋಚಿತ ಮಾನವೀಯ ಬದುಕಿಗಾಗಿ ಸಂಘರ್ಷ ನಡೆಸಿದವರು. ಅದಕ್ಕಾಗಿ ಅವರು ಅಂದಿನ ದಿನದಲ್ಲಿ ಮಹಾತ್ಮಾ ಜ್ಯೋತಿಬಾ ಫುಲೆ ಕಟ್ಟಿದ 'ಸತ್ಯ ಶೋಧಕ ಸಮಾಜ'ದ ಕ್ರಿಯಾಶೀಲ ಸದಸ್ಯೆಯಾಗಿ, ಅವರ ಜನಕೇಂದ್ರಿತ ಸಮತಾನಿಷ್ಠ ಚಳವಳಿಯಲ್ಲಿ ತನ್ನನ್ನು ತೊಡಗಿಸಿಕೊಂಡವರು. ಅದರಲ್ಲೂ ಜ್ಯೋತಿಬಾ – ಸಾವಿತ್ರಿಬಾಯಿ ಫುಲೆ ಅವರು ತೆರೆದ 'ಬಾಲ ಹತ್ಯಾ ಪ್ರತಿಬಂಧಕ ಗೃಹ' ಮತ್ತು 'ವಿಧವಾ ಸಂರಕ್ಷಣಾ ನಿಲಯ' ಇವೆರಡನ್ನೂ ಮೆಚ್ಚಿ ಅದಕ್ಕೆ ಬೆಂಬಲ ನೀಡಿದವರು.

ತಾರಾಬಾಯಿ ಶಿಂಧೆ ಅವರು, ಅದುವರೆಗೆ ಶೋಷಣೆಯನ್ನೇ ಧಾರ್ಮಿಕ ಕರ್ತವ್ಯ ಎಂದು ಬಿಂಬಿಸುತ್ತಾ ಬಂದ ಮತ–ಮಾರ್ತಾಂಡರ ಅಮಾನುಷ ಸ್ತ್ರೀ ವಿರೋಧಿ ನಿಲುವಿಗೆ; ಅಂದಿನ ದಿನಗಳಲ್ಲೇ ದಿಟ್ಟತನದಿಂದ ಸವಾಲೆಸೆದ ಧೀರೆ ಕೂಡ. ಇಂತಹ ನಿರ್ಭೀತ ನಿಲುವಿನ ತಾರಾಬಾಯಿ ೧೮೫೦ರಲ್ಲಿ ಬುಲ್ಡಾನದಲ್ಲಿ ಹುಟ್ಟಿದರು. ಇವರಿಗೆ ಮರಾಠಿ, ಸಂಸ್ಕೃತ, ಇಂಗ್ಲಿಷ್ ಮೊದಲಾದ ಭಾಷೆಗಳ ಮೇಲೆ ಪ್ರಭುತ್ವವಿತ್ತು. ಹಾಗಿದ್ದೂ ಇವರು ಕಲಿತದ್ದೆಷ್ಟು ಎಂಬ ಬಗ್ಗೆ ಈವರೆಗೆ ಸ್ಪಷ್ಟ ಪುರಾವೆಗಳೇ ದೊರೆತಿಲ್ಲ !

ನಾವು ಯಾರೊಬ್ಬರ ಜೀವನ ವೃತ್ತಾಂತ ಬರೆಯುವಾಗ ಅಂತಹವರ ತಾಯಂದಿರ ಕುರಿತು ಬರೆಯಬೇಕಾಗುತ್ತದೆ. ಒಡಹುಟ್ಟುಗಳ ಬಗ್ಗೆ ದಾಖಲಿಸ ಬೇಕಾಗುತ್ತದೆ. ಅವರ ಹುಟ್ಟುಹಬ್ಬದ ಕುರಿತೂ ತಿಳಿಸಬೇಕಾಗುತ್ತದೆ. ಆದರೆ ತಾರಾಬಾಯಿಯವರ ವಿಷಯದಲ್ಲಿ ಇವಾವುದರ ಬಗ್ಗೆಯೂ ಮಾಹಿತಿ ಲಭ್ಯವಿಲ್ಲ. ಅವರಿಗೆ ನಾಲ್ಕು ಜನ ಸಹೋದರರಿದ್ದರು ಎಂದು ಹೇಳಲಾಗುತ್ತದೆ, ಅಷ್ಟೆ.

ತಾರಾಬಾಯಿ ಅವರ ತಂದೆ ಸತ್ಯಶೋಧಕ ಸಮಾಜದ ಕಾರ್ಯಕರ್ತರಾಗಿದ್ದ ಬಾಪೂಜಿ ಹರಿ ಶಿಂಧೆ. ಅಂದಿನ ದಿನಗಳಲ್ಲಿ ಬುಲ್ಡಾನದಲ್ಲಿದ್ದ ನಾಲ್ಕು ಜಮೀನ್ದಾರರ ಮನೆತನಗಳಲ್ಲಿ ಇವರದ್ದೂ ಒಂದು. ಉಳಿದ ಮೂರು ಬ್ರಾಹ್ಮಣರ ಮನೆತನ ಗಳಾಗಿದ್ದರೆ ಇವರದ್ದೊಂದೇ ಮರಾಠರ ಮನೆತನ. ಓರ್ವ ಸರಕಾರಿ ನೌಕರರಾಗಿದ್ದ ಇವರ ತಂದೆ ರೆವಿನ್ಯೂ ವಿಭಾಗದ ಡೆಪ್ಯೂಟಿ ಕಮಿಷನರ್ ಕಛೇರಿಯಲ್ಲಿ ಹೆಡ್ ಕ್ಲಾರ್ಕ್ ಆಗಿದ್ದರು. ಅದಲ್ಲದೆ, ಬಾಪೂಜಿ ಲೇಖಕರು ಕೂಡ. ಶಿಕ್ಷಣ ಪಕ್ಷಪಾತಿಯಾದ ಇವರು ಇಂಗ್ಲಿಷಿನಲ್ಲಿ 'ಹಿಂಟ್ ಟು ದಿ ಎಜ್ಯುಕೇಶನ್ – ನೇಟ್ಯೂ' ಎಂಬ ಕೃತಿಯನ್ನೂ ರಚಿಸಿದ್ದಾರೆ. ಇವರೇ ತಾರಾಬಾಯಿಯವರಿಗೆ ಪ್ರೇರಕ ಶಕ್ತಿ.

ಪ್ರಗತಿಪರ ಚಿಂತಕಿ ತಾರಾಬಾಯಿಯವರ ಹುಟ್ಟೂರು ಬುಲ್ಡಾನ. ಇಂದು ಮರಾಠವಾಡಾದ ವಿದರ್ಭ ಪ್ರಾಂತದಲ್ಲಿದೆ. ಇದು ಇಂದಿನ ರಾಜಕೀಯದ ಜನವಿರೋಧಿ ಚಿಂತನೆಯಿಂದಾಗಿ ಶ್ರಮಿಕರನ್ನು ಮತ್ತೆ ಮತ್ತೆ ಆತ್ಮಹತ್ಯೆಗೆ ದೂಡುತ್ತಲೇ ಇರುವ ಕುಖ್ಯಾತ ಪ್ರದೇಶ ಕೂಡ ಹೌದು! ಇಲ್ಲಿ ಸಾಲದ ಶೂಲಕ್ಕೆ ಕೊರಳೊಡ್ಡಿ ಆತ್ಮಹತ್ಯೆ ಮಾಡಿಕೊಳ್ಳುವ ರೈತರ ಶವಯಾತ್ರೆಯು ದಿನ ಬಿಟ್ಟು ದಿನ ಸುದ್ದಿಯಾಗುತ್ತಲೇ ಇದೆ! ಅದೂ ಇಲ್ಲಿನವರೇ ಹೆಚ್ಚಾಗಿ ಮಹಾರಾಷ್ಟ್ರದ ಮುಖ್ಯಮಂತ್ರಿಯ ಗಾದಿಯೇರಿದ್ದರೂ ಇಲ್ಲಿನ ದುರಂತಕ್ಕೆ ಮಾತ್ರ ಕೊನೆಯೇ ಇಲ್ಲದಂತಾಗಿದೆ!



ಅದಂತಿರಲಿ, ಮರಾಠವಾಡಾದ ತಾರಾಬಾಯಿ ಅವರಿಗೆ ವಿವಾಹದ ಕಟ್ಟುಪಾಡಿಗೆ ಒಳಗಾಗಲು ಇಷ್ಟವೇ ಇರಲಿಲ್ಲವಂತೆ. ಹಾಗಿದ್ದೂ ಮನೆತನದ ಒತ್ತಡಕ್ಕೆ ಮಣಿದು ಮದುವೆಯೇನೋ ಆಯಿತು. ಅದು ಬಿಗಿ ಸಂಪ್ರದಾಯದ ಕಾಲ. ಅಂದಿನ ದಿನಗಳಲ್ಲಿ ಪ್ರತಿಷ್ಠಿತ ಮನೆಯ ಸೊಸೆಯಾದವಳು ತಲೆಯ ಮೇಲೆ ಸೆರಗು ಹೊದ್ದೇ ಓಡಾಡಬೇಕಿತ್ತು.

ಅದರಲ್ಲೂ ಮನೆಯಲ್ಲಿ ಅತ್ತೆ, ಮಾವ, ಭಾವ ಮೊದಲಾದ ಹಿರಿಯರಿದ್ದಾರೆ ಎಂದರೆ ಸಾಕು, ಹೆಣ್ಣು ತನ್ನ ಸೆರಗನ್ನು ತಲೆಯಿಂದ ಕುತ್ತಿಗೆಯವರೆಗೆ ಇಳಿಬಿಟ್ಟು ಗೌರವದ ಗೌರಮ್ಮನಾಗಿಯೇ ನಡೆದುಕೊಳ್ಳಬೇಕಿತ್ತು. ಅಲ್ಲಿನ ಇಂತಹ ಉಸಿರುಕಟ್ಟುವ ವಾತಾವರಣದಲ್ಲಿ ಹೆಚ್ಚು ದಿನ ಬಾಳಲಾರದ ತಾರಾಬಾಯಿ ತನ್ನ ತವರಿಗೆ ಮರಳುವಂತಾಯಿತು.

ಹೀಗೆ ತಾರಾಬಾಯಿಯವರ ನಂತರದ ಬದುಕು ಮಾತ್ರ ತನ್ನ ತಾಯಿಯ ಮನೆಯಲ್ಲೇ ಸ್ಥಿರವಾಯಿತು. ಇವರ ಪತಿಗೆ ಇವರ ಮನೆಯಲ್ಲೇ ಮನೆ ಅಳಿಯನ ಪಟ್ಟವೂ ದೊರೆಯಿತು. ಆದರೆ ಆಶ್ಚರ್ಯದ ಸಂಗತಿ ಎಂದರೆ ಇವರ ಪತಿಯ ಹೆಸರು ಕೂಡ ಎಲ್ಲೂ ದಾಖಲಾಗಿಲ್ಲ. ತನ್ನ ಕೊನೆಗಾಲದಲ್ಲಿ ತಾರಾಬಾಯಿ ಪತಿಯನ್ನು ಕಳಕೊಂಡಿದ್ದರು ಎನ್ನುವ ಒಂದು ಬೀಸು ಹೇಳಿಕೆ ಮಾತ್ರ ನಮಗೆ ಲಭ್ಯವಿದೆ, ಅಷ್ಟೆ.

ಇದರೊಡನೆ ತನ್ನ ಕೊನೆಗಾಲದಲ್ಲಿ ತಾರಾಬಾಯಿ "ಈಗ ನನ್ನೊಡನಿರುವುದು ನನ್ನ ನಾಯಿ ಮಾತ್ರ" ಎನ್ನುತ್ತಾರೆ! ಅವರ ಈ ಉದ್ಗಾರ ಅವರದ್ದಾದ ಹಲವು ಅಕಥಿತ ಕಥಾನಕದತ್ತ ಬೊಟ್ಟುಮಾಡುತ್ತದೆ. ಜೊತೆಗೇನೆ "ನಾನು ಯಾರ ಧ್ವನಿಯೂ ಅಲ್ಲ, ನನಗೆ ನಾನೇ ಧ್ವನಿ" ಎನ್ನುವ ಅವರ ಅಂತರಂಗದ ನುಡಿ ಅವರ ಬದುಕಿನ ತುಮುಲಗಳನ್ನು ನಮಗೆ ಕಟ್ಟಿಕೊಡುತ್ತದೆ.

ತಾರಾಬಾಯಿ ತುಂಬ ಜಾಣೆ ಮಾತ್ರವಲ್ಲ, ಧೈರ್ಯಶಾಲಿಯೂ ಸಹ. ಅವರಲ್ಲಿದ್ದ ಸ್ವಾಭಿಮಾನ ಮತ್ತು ಗಡುಸುತನಗಳು ಇತರರಿಗೆ ನಡುಕ ಹುಟ್ಟಿಸುತ್ತಿದ್ದವು. ಅನ್ಯಾಯದ ವಿರುದ್ಧ ತಕ್ಷಣವೇ ಸಿಡಿಯುವುದು ಮಾತ್ರವಲ್ಲ, ಅಲ್ಲೇ ಅನ್ಯಾಯ ಎಸಗಿದವರನ್ನು ತರಾಟೆಗೆ ತೆಗೆದುಕೊಳ್ಳುವ ಕ್ಷಮತೆ ಅವರಿಗಿತ್ತು. "ಸ್ತ್ರೀಯರಲ್ಲಿ ಆತ್ಮಸಾಮರ್ಥ್ಯ ಜಾಗೃತವಾದರೆ" ಅವರೆಂದೂ ಪುರುಷರ ಮುಂದೆ ಅಪರಾಧಿಗಳಂತೆ ನಿಂತು ದಯನೀಯ ಬದುಕು ನಡೆಸುವ ಸಂಭವ ಬರುವುದೇ ಇಲ್ಲ ಎಂಬುದು ಅವರ ಗಟ್ಟಿ ನಿಲುವಾಗಿತ್ತು.

ಆಕರ್ಷಕ ಶರೀರದ, ಎತ್ತರದ ನಿಲುವಿನ, ತಾರಾಬಾಯಿಗೆ ಕುದುರೆ ಸವಾರಿ ಬಾಲ್ಯದಿಂದಲೂ ಅತ್ಯಂತ ಪ್ರಿಯವಾಗಿದ್ದ ಹವ್ಯಾಸ. ಹಾಗಾಗಿ ಮುಂದೆ ತನ್ನ ಬದುಕಿನಲ್ಲಿ ಅನೇಕ ಕಾರಣಗಳಿಂದ ಮತ್ತೆ ಮತ್ತೆ ಕೋರ್ಟು–ಕಚೇರಿಗಳಿಗೆ ಅಲೆಯುವ ಸಂದರ್ಭ ಬಂದಾಗ, ಅವರೂ ಅಶ್ವಾರೂಢರಾಗಿ ಎಲ್ಲೆಡೆ ಓಡಾಡುತ್ತಿದ್ದರಂತೆ. ಇದರಿಂದಾಗಿ ಪರಿಸರದಲ್ಲಿ ಇವರ ಬಗ್ಗೆ ಒಂದು ಭಯ ಮಿಶ್ರಿತ ಗೌರವ ಸಂಚಲನೆಗೊಂಡಿತ್ತು.

ಪ್ರಗತಿಪರ ನಿಲುವಿನ ತಾರಾಬಾಯಿ ಶಿಂಧೆ ಅವರಿಗೆ ಓದು ಎನ್ನುವುದು ಅವರ ಬದುಕಿನ ಭಾಗವೇ ಆಗಿಹೋಗಿತ್ತು. ಹಾಗಾಗಿ ಅವರು ಯಾವುದೇ ಒಂದು ಏಕಮುಖಿ ವಿಚಾರಧಾರೆಗೆ ಕಟ್ಟು ಬೀಳದೆ ದಿನನಿತ್ಯ ಹತ್ತು ಹಲವು ಪತ್ರಿಕೆಗಳನ್ನು, ಪುಸ್ತಕಗಳನ್ನು ಓದುವ ಹವ್ಯಾಸವನ್ನು ಬೆಳೆಸಿಕೊಂಡಿದ್ದರು. ಆದರೆ ಅದು ಬರೇ ಕಾಲಹರಣದ ಓದಾಗಿರದೆ, ಆ ಮೂಲಕ ಅವರೊಳಗೊಬ್ಬಳು ವಿಮರ್ಶಕಿ ಜಾಗೃತಳಾಗುತ್ತಿದ್ದಳು.

ಹಾಗಾಗಿ ತಾರಾಬಾಯಿ ತಮ್ಮ ಕಾಲದಲ್ಲೇ ಜನಪರ ಬಂಡಾಯಕ್ಕೆ ಕಿವಿಯಾದರು, ಧ್ವನಿಯಾದರು. ಅದರ ಫಲಶ್ರುತಿಯೇ ಅವರ ಬಹು ಚರ್ಚಿತ ಕೃತಿ 'ಸ್ತ್ರೀ ಪುರುಷ ತುಲನಾ' ಎಂಬ ಆಚಾರ್ಯ ಕೃತಿ. ಇದು ಮರಾಠಿ ಭಾಷೆಯೇ ಏಕೆ, ಭಾರತೀಯ ಸಾಹಿತ್ಯದಲ್ಲೇ ಅಗತ್ಯವಾಗಿ ಗಮನಿಸತಕ್ಕ ಒಂದು ಪ್ರಗತಿಪರ ಬಂಡಾಯ ಕೃತಿ. ಅದು ನಂತರದ ಸ್ತ್ರೀವಾದಿ ಚಿಂತನೆಗೆ ಪಥಪ್ರದರ್ಶನ ನೀಡಿದ ಮಹತ್ವದ ಕೃತಿ ಕೂಡ ಹೌದು.

ತಾರಾಬಾಯಿ ಅವರಿಗೆ ಅಂದು ಈ ಕೃತಿಯನ್ನು ಬರೆಯಲು ಪ್ರೇರಣೆ ನೀಡಿದ್ದು ೨೫ ಮೇ, ೧೮೮೧ರಂದು 'ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ' ಪ್ರಕಟಿಸಿದ ಹೃದಯ ಕಲಕುವ ಒಂದು ವರದಿ. ಅದಲ್ಲದೆ ಇದರ ಬೆನ್ನಿಗೇ ಈ ಘಟನೆಯ ಬಗ್ಗೆ ಕೃಷ್ಣರಾವ್ ಭಾಲೇಕರ್ ತನ್ನ 'ಪುಣೆ ವೈಭವ' ಎನ್ನುವ ಪತ್ರಿಕೆಯಲ್ಲಿ ತಳೆದ ಸ್ತ್ರೀ ವಿರೋಧಿ ಅಮಾನುಷ ನಿಲುವು ಹೊಂದಿದ್ದ ಪೂರ್ವಗ್ರಹಪೀಡಿತ ವಿಮರ್ಶಾ ಲೇಖನ. ಇವೆರಡೂ ಪತ್ರಿಕೆಗಳಲ್ಲಿ ಅಂದಿನ

ಮುಂಬಯಿ ಪ್ರಾಂತ್ಯದ ಭಾಗವಾಗಿದ್ದ ಸೂರತ್‌ನಲ್ಲಿ; ವಿಜಯಲಕ್ಷ್ಮಿ ಎಂಬ ಯುವತಿ ತನ್ನ ಮಗುವನ್ನೇ ಕತ್ತು ಹಿಸುಕಿ ಕೊಲೆ ಮಾಡಿದ ಘಟನೆ ಬಹು ವರ್ಣರಂಜಿತವಾಗಿ ವರದಿಯಾಗಿತ್ತು.

ಇದರ ಕೇಂದ್ರ ಬಿಂದು, ಅಪರಾಧಿ, ತನ್ನದೇ ಶಿಶುವಿನ ಹಂತಕಿ ವಿಜಯಲಕ್ಷ್ಮಿ. ಈಕೆ ಹೇಳಿ ಕೇಳಿ ಬಾಲ ವಿಧವೆ. ಆದರೆ ಅಂದಿನ ದಿನಗಳಲ್ಲಿ ಆಕೆಯ ಅಕ್ರಮ ಬಸುರಿಗೆ ಕಾರಣನಾದ ಕಾಮುಕ ಆಕೆಯ ಮಗುವಿಗೆ ತಂದೆಯಾಗಲು ಒಪ್ಪಲಿಲ್ಲ. ಅದಕ್ಕಾಗಿ ವಿಜಯಲಕ್ಷ್ಮಿ ಅವನಲ್ಲಿ ಅತ್ತು – ಕರೆದು, ಕಾಡಿ – ಬೇಡಿದರೂ ಏನೂ ಪರಿಣಾಮವಾಗಲಿಲ್ಲ!

"ನಿನಗೆ ಬದುಕುವ ಬಯಕೆಯಿದ್ದರೆ, ಮರ್ಯಾದೆಯ ಬದುಕು ಬೇಕಿದ್ದರೆ ಮಗುವನ್ನು ಕೊಂದು ಬದುಕು. ಇಲ್ಲವಾದರೆ ನಿನ್ನ ಸುತ್ತಲಿನ ಸಮಾಜವೇ ನಿನ್ನನ್ನು ಕಲ್ಲು ಹೊಡೆದು ಕೊಲ್ಲುತ್ತದೆ" ಎಂದ ಆ ದುಷ್ಟ! ಹೆಣ್ಣನ್ನು ಉಂಡೆಸೆಯುವ ದುಷ್ಟರ ಉಪದೇಶ ಮತ್ತು ಆದೇಶಗಳ ವಿಕೃತಿಯ ಮಾದರಿಯೊಂದು ಇಲ್ಲಿದೆ.



ಸಿ.ಸಿ.ಕ್ಯಾಮರಾ ಇಟ್ಟಿದ್ದಾರೆ, ನೀನೇ ಅಡ್ಡ ನಿಂತು ಜೇಬಿನಲ್ಲಿ ಇಟ್ಟುಬಿಡು ಕಣಯ್ಯ...!

ಅಂದಿನ ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಉಪೇಕ್ಷಿತಳೂ, ಹತಬಲಳೂ ಆದ ವಿಜಯಲಕ್ಷ್ಮಿಗೆ ಬೇರೆ ದಾರಿಯಾದರೂ ಏನಿತ್ತು? ಹಾಗಾಗಿ ಸಾಮಾಜಿಕ ಬಹಿಷ್ಕಾರಕ್ಕೆ ಹೆದರಿ ಆಕೆ ತನ್ನ ನವಜಾತ ಶಿಶುವನ್ನೇ ಕತ್ತು ಹಿಸುಕಿದಳೋ? ಅಥವಾ ಆಕೆಯ ಪ್ರಿಯಕರನೇ ತನ್ನ ಪಾಪದ ಸಂತಾನಕ್ಕೆ ಹೆದರಿ ಆ ನವಜಾತ ಶಿಶುವಿನ ಕತ್ತು ಹಿಸುಕಿ ತಿಪ್ಪೆಗೆಸೆದನೋ? ಯಾರಿಗೆ ಗೊತ್ತು! ಅದೇನೇ ಇರಲಿ, ಕಾನೂನಿನ ಕಣ್ಣಿಗೆ ಮಾತ್ರ ವಿಜಯಲಕ್ಷ್ಮಿಯೇ ಏಕೈಕ ಅಪರಾಧಿಯೂ ಆದಳು!

ಹೀಗೆ ಕಾನೂನಿನ ಚೌಕಟ್ಟಿನಲ್ಲಿ ಅಪರಾಧಿಯೂ; ಸಾಮಾಜಿಕವಾಗಿ ಕಾರಣ ನೀಡಿ ಅನಾಥೆಯೂ, ವ್ಯಕ್ತಿಗತವಾಗಿ ಓರ್ವ ಹತಬಲ ಸ್ತ್ರೀಯೂ ಆದ ವಿಜಯಲಕ್ಷ್ಮಿಗೆ ಸೂರತ್‌ನ ವಿಚಾರಣಾ ನ್ಯಾಯಾಲಯ ಶಿಶುಹತ್ಯೆ ಕಾರಣ ನೀಡಿ ಮರಣದಂಡನೆಯ ಶಿಕ್ಷೆಯನ್ನು ವಿಧಿಸುತ್ತದೆ! ಅಂತಹ ಸಂಕಟದ ಕಾಲದಲ್ಲೂ ವಿಜಯಲಕ್ಷ್ಮಿ ತನ್ನೊಡನೆ ಚಕ್ಕಂದವಾಡಿ ತನ್ನನ್ನು ಮಾತ್ರ ಅಪರಾಧಿಯನ್ನಾಗಿಸಿದ ದುಷ್ಟ ಅಪರಾಧಿಯ ಬಗ್ಗೆ ಮೌನ ವಹಿಸುತ್ತಾಳೆ! ಇದು ಆಕೆಗಿದ್ದ ಭಯವೊ! ಇಲ್ಲವೆಂದಾದರೆ ಪರಂಪರೆಯ ಬಗೆಗಿದ್ದ ನಿಷ್ಠ ಭ್ರಮೆಯೋ? ಅಂದಿನ ಆಕೆಯ ದಿವ್ಯ ಮೌನ ಕೆಲವರನ್ನಾದರೂ ಕಾಡಿತ್ತು.

ಹೀಗೆ ಆ ಸಮಯದಲ್ಲಿ ಚಿಗುರೊಡೆದ ಕೆಲವು ಸ್ತ್ರೀಪರ ಧ್ವನಿಗಳು ವಿಜಯಲಕ್ಷ್ಮಿಯನ್ನು ಕಾಡಿ, ಬೇಡಿದರೂ, ಯಾವ ಪ್ರಯೋಜನವೂ ಆಗಲಿಲ್ಲ. ಆಕೆಯ ಅಂದಿನ ಮೌನಕ್ಕೆ ಕಾರಣ ಸುತ್ತಮುತ್ತಲಿನ ಪ್ರತಿಷ್ಠಿತರ ಸಾಮಾಜಿಕ ಬೆದರಿಕೆಯೋ, ತಾನು ನಂಬಿದ್ದ ಹಣೆಬರಹದ ಮಿಡಿತವೋ! ಒಟ್ಟಿನಲ್ಲಿ ಕೋರ್ಟಿನಲ್ಲಿ ಹರಿದ ಕಣ್ಣೀರ ಧಾರೆಯೇ ವಿಜಯಲಕ್ಷ್ಮಿಯ ಉತ್ತರವಾಯಿತು.

ಅನಂತರ ಮೇಲ್ಮನವಿಗೆ ಸ್ಪಂದಿಸಿ ಮುಂಬಯಿಯ ಉಚ್ಚ ನ್ಯಾಯಾಲಯ ಶಿಕ್ಷೆಯನ್ನು ೫ ವರ್ಷಕ್ಕೆ ಮಿತಿಗೊಳಿಸಿದರೂ ಇಲ್ಲಿ ನಿಜವಾದ ಅಪರಾಧಿ ಶಿಕ್ಷೆಯಿಂದ ಪಾರಾಗಿದ್ದ. ತನ್ನ ಹೊಣೆಗಾರಿಕೆಯಿಂದಲೂ ಜಾರಿಕೊಂಡಿದ್ದ. ಆದರೆ ಅಮಾಯಕ ಹೆಣ್ಣು ವಿಜಯಲಕ್ಷ್ಮಿ ಮಾತ್ರ ಬಲಾತ್ಕಾರದ ಬಸುರಿಗೆ ಪ್ರತಿಭಟಿಸಲಾರದೆ ಸೆರೆಮನೆ ಸೇರಿದಳು, ಅಲ್ಲೇ ಸಹಿಸಲಾರದ ಮಾನಸಿಕ ಒತ್ತಡಕ್ಕೆ ಬಲಿಯಾಗಿ ಮಣ್ಣಾದಳು ಕೂಡ!

ಎಷ್ಟೆಂದರೂ ವಿವಾಹಪೂರ್ವದ ಶಿಶುವಾಗಿ ಜನಿಸಿದ ಕರ್ಣನನ್ನು ಗಂಗೆಯಲ್ಲಿ ತೇಲಿಬಿಟ್ಟ ಕುಂತಿಯ ರಾಜಕೀಯ ಜಾಣ್ಮೆಯಾಗಲಿ, ತನ್ನ ಹೆಣ್ಣುಮಗು ದುರ್ಗಿಯನ್ನು ತನ್ನ ಸಾಕುಮಗ ಕೃಷ್ಣನಿಗಾಗಿ ಬಲಿಕೊಟ್ಟ ಯಶೋಧೆಯ ವ್ಯಾವಹಾರಿಕ ಕುಶಲತೆಯಾಗಲಿ, ಈ ಆಧುನಿಕ ನಿರಕ್ಷರಿ – ಅನಾಥೆ – ಬಾಲವಿಧವೆ ವಿಜಯಲಕ್ಷ್ಮಿಗೆ ಎಲ್ಲಿಂದ ಬರಬೇಕು?

ಈ ಘಟನೆಯ ಮೊದಲ ಚರಣವನ್ನು ಆಲೋಚಿಸಿದಂತೆಲ್ಲಾ ತಾರಾಬಾಯಿ ಶಿಂಧೆಯವರ ರಕ್ತ ಸ್ತ್ರೀ ವಿರೋಧಿ ಸಮಾಜದತ್ತ ಕುದಿಯಹತ್ತಿತು. ಹಸಿ ಹಸಿ ಅನ್ಯಾಯಕ್ಕೆ ಸಿಡಿಯಿತು! ಅದು ವಾಲ್ಮೀಕಿಯ ಸಿಟ್ಟಿನಂತಾಯಿತು. ಅಂದು ಕಾನನದಲ್ಲಿ ಬೇಡನೊಬ್ಬನ ಬಾಣದಿಂದ ತನ್ನ ಕಣ್ಣಮುಂದೆಯೇ ನೆಲಕ್ಕುರುಳಿದ ಪಕ್ಷಿಯೊಂದರ ಪರಿಯನ್ನು ಕಂಡು ಪರಿತಪಿಸಿದ ವಾಲ್ಮೀಕಿಯ ಸಿಟ್ಟು ರಾಮಾಯಣ ಎನ್ನುವ ಸಂಸ್ಕೃತ ಕಾವ್ಯಕ್ಕೆ ನಾಂದಿಯಾಯಿತಲ್ಲ, ಹಾಗೆ!

ಅದೇ ರೀತಿ ಇಂದು ವಿಜಯಲಕ್ಷ್ಮಿಯಂತಹ ಅಮಾಯಕ ಹೆಣ್ಣಿಗೆ ಆದ ಮರಣದಂಡನೆಯ ಸಿಟ್ಟು ತಾರಾಬಾಯಿಯಲ್ಲಿ ಸಿಡಿಲಾಗಿ ಸಿಡಿಯಿತು! ಅದರ ಫಲಶ್ರುತಿಯೇ ೧೮೮೧ರಲ್ಲಿ ಲೋಕಾರ್ಪಣೆಗೊಂಡ ಅವರ 'ಸ್ತ್ರೀ ಪುರುಷ ತುಲನಾ' ಎನ್ನುವ ಮಾನವಪರ ಮೌಲಿಕ ಕೃತಿ!

ಈ 'ಸ್ತ್ರೀ ಪುರುಷ ತುಲನಾ' ಕೃತಿ ಇದೆಯಲ್ಲಾ, ಇದು ಭಾರತೀಯ ಸಾಹಿತ್ಯಕ್ಕೆ ದಕ್ಕಿದ ಸ್ತ್ರೀವಾದದ ಒಂದು ಅಪೂರ್ವ ಕೃತಿ ಎನ್ನುವುದರಲ್ಲಿ ಎರಡು ಮಾತಿಲ್ಲ. ಮೊಟ್ಟಮೊದಲು ಇದರ ೫೦೦ ಪ್ರತಿಗಳು ಪುಣೆಯಲ್ಲಿ ಪ್ರಕಟವಾಗಿದ್ದವು. ಅಂದು ಒಟ್ಟು ೫೨ ಪುಟಗಳ ಈ ಕಿರು ಕೃತಿಯ ಮುಖಬೆಲೆ ೯ ಆಣೆ. ಆದರೆ ಇದು ಪ್ರಕಟಗೊಂಡಂತೆಯೇ ಇದರ ಎಲ್ಲ ಪ್ರತಿಗಳು ಮಾರುಕಟ್ಟೆಯಿಂದಲೇ ಮಂಗಮಾಯವಾಗಿತ್ತು! ಇದಕ್ಕೆ ಕಾರಣ ಇದರ ಸಗಟು ಖರೀದಿ ಮತ್ತು ಅನಂತರ ಕೃತಿನಾಶದ ಕುತಂತ್ರ!

ಈ ಕುತಂತ್ರದ ಹಿಂದಿದ್ದವರು ಅಂದಿನ ಸಂಪ್ರದಾಯನಿಷ್ಠ ದುಷ್ಟರು! ಇದಕ್ಕೆ ಪೂರಕವಾಗಿ ಕೃತಿಯ ಟೀಕೆ ಮತ್ತು ಕೃತಿಕಾರ್ತಿಯ ತೇಜೋವಧೆ ಯಾವ ಎಗ್ಗೂ ಇಲ್ಲದೆ ಸಾಗಿತು. ಅದರಲ್ಲಿ ಮುಂದಿನ ದಿನಗಳಲ್ಲೂ ಸ್ವರಾಜ್ಯದ ದೀವಟಿಗೆ ಹಿಡಿದ ಕೇಸರಿ, ಮರಾಠ, ಪುಣೆವೈಭವ ಮೊದಲಾದ ಪತ್ರಿಕೆಗಳು ಕಾಲಕಾಲಕ್ಕೆ ಮುಂಚೂಣಿಯಲ್ಲಿದ್ದವು.

ಇಂತಹ ಅಕ್ಷರಲೋಕದ ಪೂರ್ವಗ್ರಹಪೀಡಿತ ವಿಮರ್ಶಾ ದಂಗೆಯನ್ನು ಬಹು ಸೂಕ್ಷ್ಮವಾಗಿ ಗಮನಿಸುತ್ತಾ ಬಂದ ಮಹಾತ್ಮಾ ಜ್ಯೋತಿಬಾ ಫುಲೆ ಅವರು ೧೮೮೫ರಲ್ಲಿ ತನ್ನ 'ಸತ್ಸಾರ' ಪತ್ರಿಕೆಯಲ್ಲಿ 'ಸ್ತ್ರೀ ಪುರುಷ ತುಲನಾ' ಎಂಬ ಕೃತಿಯ ಬಗ್ಗೆ ಒಂದು ಸುದೀರ್ಘ ವಿಮರ್ಶೆ ಬರೆಯುತ್ತಾರೆ. ಇದು ಪತ್ರಿಕೆಯ ಎರಡನೆಯ ಸಂಚಿಕೆಯಲ್ಲಿ ಪ್ರಕಟವಾದಾಗ ಸಾಹಿತ್ಯ ವಿಮರ್ಶೆಯ ಹೊಸ ಮಾದರಿಯೊಂದು ಅನಾವರಣವಾಗುತ್ತದೆ.

ಈ ದಿಟ್ಟ ಹೆಜ್ಜೆ ಮುಂದೆ ಸಾರಸ್ವತ ಲೋಕಕ್ಕೆ ಹೊಸದಾಗಿ ಪ್ರವೇಶಿಸುವವರಿಗೆ ಆತ್ಮಸ್ಥೈರ್ಯವನ್ನು ನೀಡುವ ದಿಶಾದೀವಿಗೆ ಕೂಡ ಆಗುತ್ತದೆ. ಆವರೆಗೆ ಬೆದರಿಸುತ್ತಲೇ ತೇಜೋವಧೆ ಮಾಡಿ ಪ್ರಗತಿಪರ ಚಿಂತನೆಯನ್ನೇ ಕೊಲ್ಲುವ ಅಕ್ಷರಲೋಕದ ಅನಾಗರಿಕ ದಂಗೆಗೆ ಸ್ವಲ್ಪವಾದರೂ ಕಡಿವಾಣ ಬೀಳುತ್ತದೆ.

ಜ್ಯೋತಿಬಾ ಅವರು ತಾರಾಬಾಯಿ ಅವರ ಕೃತಿಯ ಕುರಿತು ಪತ್ರಿಕೆಯಲ್ಲಿ ತಳೆದ ಗಟ್ಟಿ ನಿಲುವು. "ಸಾಹಿತಿಗೆ ಸಂಘಟನೆ ಬೇಕಿಲ್ಲ; ಸಂಘಟನೆಗೆ ಸಾಹಿತಿ ಬೇಕು" ಎನ್ನುವ ಅಂದಿನವರೆಗಿನ ಸಾಂಪ್ರದಾಯಿಕ "ಪೂಜೆಯ" ನಿಲುವಿಗೂ ಸವಾಲಾಯಿತು. ಜೊತೆಗೇನೆ "ಕಲೆ ಕಲೆಗಾಗಿ" ಎನ್ನುವ ಪಾರಂಪರಿಕ ಜಡ ನಿಷ್ಠೆಗೆ ಭಿನ್ನವಾಗಿ 'ಕಲೆ ಬದುಕಿಗಾಗಿ' – 'ಸಾಹಿತ್ಯ ಬದುಕಿಗಾಗಿ' ಎನ್ನುವ ಜನಪರ ನಿಲುವು ಅಕ್ಷರಲೋಕದ ವಿಮರ್ಶೆಯಲ್ಲಿ ಅಲ್ಲಿಂದ ಮುಂದೆ ದಾಂಗುಡಿ ಇಟ್ಟಿತು. ಇದರಿಂದಾಗಿ ಅದುವರೆಗೆ ಧ್ವನಿಯೆತ್ತಲು ಅಂಜುತ್ತಿದ್ದ – ಅಳುಕುತ್ತಿದ್ದ ಅದೆಷ್ಟೊ ಪ್ರತಿಭೆಗಳು ನಿಧಾನವಾಗಿ ಸಾಹಿತ್ಯ ಲೋಕಕ್ಕೆ ಪ್ರವೇಶ ಪಡೆಯುವಂತಾಯಿತು. ತಾರಾಬಾಯಿಯ ಸ್ಥೈರ್ಯಕ್ಕಂತೂ ಇದು ಹೊಸ ಆಯಾಮವನ್ನೇ ನೀಡಿತು.

ಈ ಹೊಸ ಬೆಳವಣಿಗೆಯನ್ನು ಕಂಡು ಅಂಜಿದವರು, ಅಳುಕಿದವರು ಅದೆಷ್ಟೋ ಮಂದಿ. ಅವರೆಲ್ಲಾ ಆವರೆಗೆ ಅಕ್ಷರ – ಕಲೆ – ಸಾಹಿತ್ಯ ಎಲ್ಲವನ್ನೂ ತಮ್ಮ ಆಣತಿಯಂತೆ ಮಣಿಸುತ್ತಲೇ ಬಂದ ಗದ್ದುಗೆಯ ಗುರಿಕಾರರು. ವ್ಯವಸ್ಥೆಯ ಗುರಿಗಾಹಿಗಳು. ಆದರೆ ಅವರ ಅಂದಿನ ಅಳುಕೇ, ಅವರನ್ನು ಮತ್ತೆ ಮತ್ತೆ ತಾರಾಬಾಯಿಯವರ 'ಸ್ತ್ರೀ ಪುರುಷ ತುಲನಾ' ಕೃತಿಯನ್ನು ಭೂಗತಗೊಳಿಸುವತ್ತ ಪ್ರೇರೇಪಿಸುತ್ತಲೇ ಇತ್ತು.

ಹೀಗೆ ಮರೆಯಾದ 'ಸ್ತ್ರೀ ಪುರುಷ ತುಲನಾ' ಕೃತಿಯನ್ನು ಪುನರಪಿ ಸಾಹಿತ್ಯಲೋಕಕ್ಕೆ ಪರಿಚಯಿಸಿದ ಶ್ರೇಯಸ್ಸು ಮುಂಬಯಿಯ ಠಾಕರ್ಸಿ ಮಹಿಳಾ ವಿಶ್ವವಿದ್ಯಾಲಯದ ಮರಾಠಿ ಭಾಷಾ ವಿಭಾಗದ ವಿಶ್ರಾಂತ ಮುಖ್ಯಸ್ಥರಾದ ಡಾ॥ ಎಸ್. ಜಿ. ಮಾಳ್ಸೆ ಅವರಿಗೆ ಸಲ್ಲುತ್ತದೆ. ಅವರಿಗಾದರೂ ತಾರಾಬಾಯಿ ಶಿಂಧೆ ಅವರ ಕೃತಿಯ ಬಗ್ಗೆ ಮೊದಲ ಉಲ್ಲೇಖ ದೊರೆತದ್ದು ಫುಲೆ ಅವರ 'ಸತ್ಸಾರ' ಪತ್ರಿಕೆಯ ಎರಡನೆಯ ಸಂಚಿಕೆಯಲ್ಲಿದ್ದ ವಿಮರ್ಶಾ ಲೇಖನವನ್ನು ಓದಿದ ಅನಂತರವೇ.

ಅವರಾದರೂ ಆ ಬಳಿಕ ಅಂದಿನ ಮಹಾರಾಷ್ಟ್ರದ ಎಲ್ಲಾ ಸಾರ್ವಜನಿಕ ಗ್ರಂಥಾಲಯಗಳಲ್ಲಿ, ವಿದ್ಯಾಸಂಸ್ಥೆಗಳ ಪುಸ್ತಕ ಭಂಡಾರಗಳಲ್ಲಿ 'ಸ್ತ್ರೀ ಪುರುಷ ತುಲನಾ' ಕೃತಿಗಾಗಿ ಹುಡುಕಾಡಿದರು. ಅದರೆ ಎಲ್ಲೂ ಅದು ದೊರೆಯಲಿಲ್ಲ. ಕೊನೆಗೊಮ್ಮೆ ಪುಣೆಯ ಹಳೆಯ ಪುಸ್ತಕದಂಗಡಿಯ ಮಾಲಿಕ ಪಿ. ಆರ್. ಟಮಟೇರೆ ಅವರ ಬಳಿಗೆ ರದ್ದಿಯಲ್ಲಿ ಬಂದ ಒಂದು ಪುಸ್ತಕವನ್ನು ಅವರು ತೆಗೆದಿಟ್ಟಿದ್ದರು. ಅದನ್ನು ಹಿಂತಿರುಗಿಸುವ ಕರಾರಿನ ಮೇಲೆ ಠೇವಣಿ ಇಟ್ಟು ಡಾ॥ ಮಾಳ್ಸೆ ಪುಸ್ತಕವನ್ನು ಪಡೆಯುತ್ತಾರೆ.

ಡಾ॥ ಮಾಳ್ಸೆ ಈ ಪುಸ್ತಕವನ್ನು ಪರಿಷ್ಕರಿಸಿ ಅದಕ್ಕೆ ೨೧ ಪುಟಗಳ ಪ್ರಸ್ತಾವನೆ ಬರೆಯುತ್ತಾರೆ. ನಂತರ ಪುಸ್ತಕವನ್ನು ಪೂರ್ವ ಕರಾರಿನಂತೆ ಹಿಂತಿರುಗಿಸಲು ಟಮಟೇರೆ ಅವರ ಅಂಗಡಿಗೆ ಹೋಗುತ್ತಾರೆ. ಆದರೆ ಅವರು ಅದಾಗಲೇ ಗತಿಸಿದ ಸುದ್ದಿ ತಿಳಿಯುತ್ತದೆ. ಅಲ್ಲಿಂದ ಮರಳಿದ ಡಾ॥ ಮಾಳ್ಸೆ ೧೯೭೫ರಲ್ಲಿ 'ಸ್ತ್ರೀ ಪುರುಷ ತುಲನಾ' ಕೃತಿಯನ್ನು ದಿ॥ ಪಿ. ಆರ್. ಟಮಟೇರೆ ಅವರಿಗೆ ಅರ್ಪಿಸಿ ಪ್ರಕಟಿಸುತ್ತಾರೆ. ಅದು ೧೯೭೫ರ ತುರ್ತು ಪರಿಸ್ಥಿತಿಯ ಕಾಲ. ಆಗಲೂ ಈ ಪುಸ್ತಕ ಪುನರಪಿ ಸಂಪ್ರದಾಯಸ್ಥರ ತಂತ್ರಕ್ಕೆ ಬಲಿಯಾಗಿ ಮಾರುಕಟ್ಟೆಯಿಂದ 'ಗಾಯಬ್' ಆಗಿ ಯಾರಿಗೂ ದೊರೆಯದಂತಾಗುತ್ತದೆ !

ಇದಾದ ಬಳಿಕ ದಲಿತ ಪ್ರಜ್ಞೆಯ ಜಾಗೃತಿಯ ಹಿನ್ನೆಲೆಯಲ್ಲಿ ೧೯೦೦ರಲ್ಲಿ 'ಮುಂಬಯಿಯ ಮರಾಠಿ ಗ್ರಂಥ ಸಂಗ್ರಾಲಯ'ದ ದಾದರ್ ಡಾ॥ ಮಾಳ್ಸೆಯವರ ಪರಿಷ್ಕೃತ ಪ್ರಸ್ತಾವನೆಯೊಂದಿಗೆ ಮರುಮುದ್ರಣ ಮಾಡುತ್ತಾರೆ. ಆಗ ಪುಸ್ತಕ ಹೆಚ್ಚಿನವರ ಕೈ ಸೇರುತ್ತದೆ. ಓದುಗರ ವಲಯದಲ್ಲಿ ಮನೆಮಾತಾಗುತ್ತದೆ. ಇಂತಹ ಈ ಕೃತಿ ಮಾತ್ರ ಮಹಿಳಾ ಮುಕ್ತಿ ಇತಿಹಾಸದ ದಾಖಲೀಕರಣಕ್ಕೆ ಸಿಕ್ಕಿದ ಒಂದು ಮಹತ್ವದ ಆಕರ.

ತಾರಾಬಾಯಿ ಅವರು ಬರೆದ ಕೃತಿಗಳೆಷ್ಟು, ಎನ್ನುವುದು ಇಂದಿಗೂ ಬಿಡಿಸಲಾರದ ಒಗಟೇ ಆಗಿದೆ. ಅದಿರಲಿ, ಅಂದು ತನ್ನ 'ಸ್ತ್ರೀ ಪುರುಷ ತುಲನಾ' ಕೃತಿಯಲ್ಲಿ ಪುರುಷ ಪ್ರಧಾನ ಸಮಾಜಕ್ಕೆ ಹಾಕಿದ ಹತ್ತು ಪ್ರಶ್ನೆಗಳು ಮಾತ್ರ ಇಂದಿಗೂ ತಮ್ಮ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲ. ಅವು ಇಂತಿವೆ :

(೧) ಹಳೆಯ ಪತಿವ್ರತಾ ಧರ್ಮವನ್ನು ಸ್ತ್ರೀಯರು ಪಾಲಿಸುತ್ತಿಲ್ಲ ಎಂದು ನೀವು ಹೇಳುತ್ತೀರಲ್ಲಾ ! ಆದರೆ ಇಂಗ್ಲಿಷರ ಆಡಳಿತ ಬಂದ ಮೇಲೆ ನೀವೆಷ್ಟು ಬದಲಾಗಿದ್ದೀರಿ ? ಸಾಹೇಬರಿಗಾಗಿ ಧರ್ಮ ಬಿಟ್ಟಿರುವ ನೀವು, ಈಗಲೂ ಸ್ತ್ರೀಯರು ಮಾತ್ರ ಬಾಲಬೋಧೆಯಂತಿರುವ ಹಳೆಯ ಪತಿವ್ರತಾ ಧರ್ಮವನ್ನೇ ಪಾಲಿಸಬೇಕೆನ್ನುವ ಅಪೇಕ್ಷೆಯನ್ನು ಯಾಕೆ ಮಾಡುತ್ತೀರಿ ?

(೨) ಗಂಡ ಸತ್ತ ಹೆಂಗಸಿನ ಕೇಶಮುಂಡನ ಮಾಡಿಸಿ ಆಕೆಯನ್ನು ಮನೆಯೊಳಗೆ ಇರಿಸುತ್ತೀರಲ್ಲಾ ! ಹಾಗಿದ್ದರೆ ಅದೇ ನ್ಯಾಯದಿಂದ ಹೆಂಡತಿ ಸತ್ತಾಗ ನೀವೂ ಗಡ್ಡ, ಮೀಸೆ, ಕೂದಲನ್ನೆಲ್ಲಾ ಬೋಳಿಸಿ ಕಾಡಿನಲ್ಲಿ ಯಾಕೆ ಇರುವುದಿಲ್ಲ ?

(೩) ಗಂಡಸರು ಅನೇಕ ಹೆಂಗಸರನ್ನು ಮದುವೆಯಾಗುವುದು ಶಾಸ್ತ್ರ ಸಮ್ಮತವಾಗಿದೆಯಲ್ಲಾ ? ಹಾಗಿದ್ದರೆ ಹೆಂಗಸರಿಗೆ ಅನೇಕ ಗಂಡಸರನ್ನು ಹೊಂದುವ ಅವಕಾಶ ಯಾಕಿಲ್ಲ ?

(೪) ಹೆಂಗಸರ ಅನೈತಿಕ ಸಂಬಂಧಗಳನ್ನು ಅಪೇಕ್ಷಿಸುವ ನೀವೇ ಮೊದಲು ಹೆಣ್ಣನ್ನು ಕಂಡು ಜಾರಿ ಬೀಳುತ್ತೀರಲ್ಲಾ ?

(೫) ಸನ್ಯಾಸಿಯ ವೇಷ ಧರಿಸಿ ಹೆಂಗಸರನ್ನು ವಂಚಿಸಿದ ಪುರುಷರಿದ್ದಾರೆ. ಆದರೆ ಯಾವತ್ತಾದರೂ ಸ್ತ್ರೀಯರು ಸನ್ಯಾಸಿನಿಯರಾಗಿ ಗಂಡಸರನ್ನು ಕದ್ದೊಯ್ದುದನ್ನು ಕೇಳಿದ್ದೀರಾ ?

(೬) ವೇಶ್ಯೆಯರು ಕೂಡ ಪುರುಷರಿಂದ ವಂಚಿಸಲ್ಪಟ್ಟ ಸ್ತ್ರೀಯರಲ್ಲವೇ ?

(೭) ಸತ್ಯವತಿ, ಕುಂತಿಯರು ಪುನರ್ವಿವಾಹ ಮಾಡಿಕೊಳ್ಳಲಿಲ್ಲವೇ ? ಹಾಗಾದರೆ ಅದ್ಯಾಕೆ ನಿಷಿದ್ಧವಲ್ಲ ? ಈಗ ವರ್ಣ ಸಂಕರದಿಂದ ಹುಟ್ಟಿದ ಮಕ್ಕಳಿಗೆ 'ಬೇವರ್ಸಿ' ಸಂತಾನವೆನ್ನುತ್ತಾ ತಿರಸ್ಕಾರದಿಂದ ನೋಡಲಾಗುತ್ತಿದೆ ! ಹಾಗಿದ್ದರೆ ವ್ಯಾಸ, ಕರ್ಣರನ್ನು ಹಾಗೆಂದು ಯಾಕೆ ಕರೆಯುತ್ತಿಲ್ಲ ?

(೮) ಪುರಾಣದಲ್ಲಿ ಬರುವ ಪಂಚ ಪತಿವ್ರತೆಯರ ಚರಿತ್ರೆ ವಿಚಿತ್ರವಾಗಿಲ್ಲವೇ ? ಪುತ್ರ ಸಂತತಿ ಇಲ್ಲವೆಂದು ಋಷಿಗಳಿಂದ ವಂಶ ವೃದ್ಧಿ ಮಾಡಲಾಯಿತು ! ಇದು ವ್ಯಭಿಚಾರವಲ್ಲವೇ ?

(೯) ಸಾವಿತ್ರಿ ತನ್ನ ಪ್ರೀತಿಯ ಪತಿಯ ಪ್ರಾಣವನ್ನು ಮರಳಿ ಪಡೆಯಲಿಕ್ಕಾಗಿ ಪ್ರತ್ಯಕ್ಷ ಯಮನ ಆಸ್ಥಾನಕ್ಕೆ ಹೋದಳು ! ಆದರೆ ತನ್ನ ಪ್ರೀತಿಯ ಪತ್ನಿಯರು ಸತ್ತಾಗ ಅವರಿಗಾಗಿ ಯಮನ ಆಸ್ಥಾನವಿರಲಿ, ಯಮಲೋಕದ ವಠಾರಕ್ಕಾದರೂ ಯಾವನೇ ಪುರುಷ ಹೋದ ಉದಾಹರಣೆ ಇದೆಯೇ ? ಅದರ ಬದಲಿಗೆ ಪತ್ನಿಯ ಸಾವಿನ ಹತ್ತನೆಯ ದಿನವೇ ಮಗದೊಮ್ಮೆ ಮದುವೆ ಮಂಟಪ ಏರುವ ತಯಾರಿ ನಡೆಸುತ್ತಿಲ್ಲವೇ ?

(೧೦) ಆನಂದಿಬಾಯಿಯಂತಹ ಅನರ್ಥಕಾರಿ ಹೆಂಗಸಿನ ಉದಾಹರಣೆ ಕೊಡುತ್ತೀರಿ. ಆದರೆ ಹಣ ಮತ್ತು ಆಸ್ತಿಯ ವಿಷಯದಲ್ಲಿ ನೀವೂ ವಿಷಪ್ರಯೋಗ ಮಾಡುತ್ತೀರಲ್ಲಾ ?

ತಾರಾಬಾಯಿಯವರ ಸ್ತ್ರೀ ಪುರುಷ ತುಲನಾ ಕೃತಿಯಲ್ಲಿ ಗೃಹಿಣಿ ಮತ್ತು ಗಣಿಕೆಯರ ನಡುವಿನ ಹಗ್ಗ ಜಗ್ಗಾಟದ ನಿರೂಪಣೆಯೂ ಇದೆ. ಅದರೊಡನೆ ಪುರುಷರ ದ್ವಂದ್ವ ನಿಲುವಿನ ಸಾಮಾಜಿಕ ವಿವೇಚನೆಯೂ ಇದೆ. ತಾರಾಬಾಯಿ ಅವರು ತನ್ನ ಬರವಣಿಗೆಯನ್ನು ಪ್ರಾರಂಭಿಸಿದಾಗ ಅವರ ಮುಂದಿದ್ದ ಮೊದಲನೆಯ ಪ್ರಶ್ನೆ, "ಯಾರು ಅಧಿಕ ಬಲಿಷ್ಠರು ; ಪುರುಷರೋ – ಸ್ತ್ರೀಯರೋ ?"

ಕೊನೆಗೂ ಅವರು ಕೊಡುವ ನಿರ್ಣಯ ಸ್ತ್ರೀಯರೇ ಪುರುಷರಿಗಿಂತ ಹೆಚ್ಚು ಬಲಿಷ್ಠರು ! ಆದರೆ ನಮ್ಮ ಶಾಸ್ತ್ರ ಮಾತ್ರ "ಪುರುಷರಿಗಿಂತ ಸ್ತ್ರೀಯರಲ್ಲಿ ಏಳು ಪಟ್ಟು ಕಾಮವಾಸನೆ ಅಧಿಕ" ಎನ್ನುತ್ತದೆ. ಪ್ರಾಯಶಃ ಅವರಿಗೆ ಸ್ತ್ರೀಯರು ಕೇವಲ ಹೆರಿಗೆಯ ಯಂತ್ರ ಮಾತ್ರ. ಹಾಗಾಗಿ ಅವರು ಶಕ್ತಿ ಸಂತಾನೋತ್ಪತ್ತಿಗೆ ಮಾತ್ರ ಸೀಮಿತ ಎನ್ನುವ ಭ್ರಮೆ ಹುಟ್ಟಿದ್ದಿರಬೇಕು !

ತಾರಾಬಾಯಿ ನಾಸ್ತಿಕರಲ್ಲ. ಅವರು ಜ್ಯೋತಿಬಾ ಅವರ 'ನಿರ್ಮಿಕ್' ಎನ್ನುವ ದೇವರ ಪರಿಕಲ್ಪನೆಯನ್ನು ಒಪ್ಪಿದವರು. ಈ ಜಗತ್ತನ್ನು ನಿಯಂತ್ರಿಸುವ ಒಂದು ಅಗೋಚರ ಶಕ್ತಿಯೇ 'ನಿರ್ಮಿಕ್' ಎನ್ನುವ, 'ನಿರ್ಮಾತೃ' ಎನ್ನುವುದರಲ್ಲಿ ಅವರಿಗೆ ವಿಶ್ವಾಸವಿತ್ತು. ಹಾಗಾಗಿಯೋ ಏನೋ ಅವರು ವಿಧವೆಯರ ದುಃಸ್ಥಿತಿಯ ಬಗ್ಗೆ ಎತ್ತುವ ಪ್ರಶ್ನೆಗಳೇ ಪುರುಷನ ಪರಮಾಧಿಕಾರಕ್ಕೆ ಸವಾಲಿನಂತಿದೆ. ಅಲ್ಲಿ ಸಮಾನತೆಯ ಮಿಡಿತಗಳಿವೆ.

"ಅರೆ ಗಂಡನಿಗಿಂತ ಹೆಂಡತಿ ಮೊದಲು ಸಾಯಬೇಕು ; ಇಲ್ಲಾ ಗಂಡನು ಹೆಂಡತಿಗಿಂತ ಮೊದಲು ಸಾಯಬೇಕೆಂಬ ಬಗ್ಗೆ ನಿಮ್ಮ ಮುತ್ತಾತಂದಿರು ದೇವರಿಂದ ಏನಾದರೂ ದಾಖಲೆಯನ್ನು ತಂದಿದ್ದಾರೆಯೇ ? ಮರಣ, ಇಲ್ಲವೇ ಜೀವನ ಎರಡೂ ಆ ಸರ್ವಶಕ್ತನಾದ ಪರಮಾತ್ಮನ ಕೈಯಲ್ಲಿದೆ" ಎನ್ನುವ ಗಡಸು ಮತಿವಂತಿಕೆ ತಾರಾಬಾಯಿ ಅವರದ್ದಾಗಿತ್ತು.

ಇಂತಹ ಕ್ರಾಂತಿಕಾರಿ ವಿಚಾರದ ತಾರಾಬಾಯಿ ೧೮೫೦ರಲ್ಲಿ ಹುಟ್ಟಿ ೧೯೧೦ರಲ್ಲಿ ಗತಿಸಿದರೆಂದು ತಿಳಿಯಲಾಗುತ್ತಿದೆಯೇ ವಿನಾ ಅವರ ನಿಜವಾದ ಜನನ–ಮರಣಗಳ ದಿನದ ಬಗ್ಗೆ ಇಂದಿಗೂ ನಿಖರತೆಯಿಲ್ಲ ! ಹಾಗಿರುವಾಗ ಅವರ ಒಟ್ಟು ಕೃತಿಗಳ ಬಗ್ಗೆ ನಿಖರತೆಯಾದರೂ ಇರುವುದು ಹೇಗೆ ? ಮುಂದಾದರೂ ಈ ಕುರಿತು ಹೆಚ್ಚಿನ ಶೋಧ ಪ್ರತಿಶೋಧಗಳು ನಡೆಯುವಂತಾಗಲಿ.

**ರವಿ ರಾ. ಅಂಚನ್**
ಬಿ–೮೦೮, ಟ್ವಿನ್‌ಟವರ್, ಮನಿಷ್ ಪಾರ್ಕ್, ಪಂಪ್ ಹೌಸ್, ಅಂಧೇರಿ (ಈಸ್ಟ್), ಮುಂಬಯಿ–೯೩

**ಮುಂಗಾರು**

ಪಾರಿಜಾತದ ಕಂಪು
ಗುಲಾಬಿಯ ಕೆಂಪು
ಹಸಿ ಮಣ್ಣ ಸೊಂಪು
ಎಲ್ಲ ಬಿರಿದರಳಿ ನಗುವುದು
"ಮುಂಗಾರು" ಚೆಲುವಿನಲಿ !

**ಶೋಭಾ ಪ್ರಮೋದ್**
ರಾಯಗಡ್, ಮಹಾರಾಷ್ಟ್ರ

**ಕೆಲವು ಶಾಲೆಗಳು ಮಕ್ಕಳು ಸಾಮರ್ಥ್ಯಕ್ಕೆ ಅಭಿವ್ಯಕ್ತಿ ನೀಡುವ ಕಲಿಕೆಯ ಬಗೆಗೂ ಜಾಹೀರಾತು ನೀಡುತ್ತವೆ. ಆದರೆ, ಆ ಕಲಿಕೆ ಕೇವಲ ತೋರಿಕೆಗಾಗಿ. ಮಕ್ಕಳ / ಪೋಷಕರ ಕನಸಿನ ಪೂರೈಕೆಯನ್ನು ಆಧರಿಸಿ ರೂಪಿಸಿದವೇ ವಿನಾ ಮಗುವಿನ ಉತ್ಪಾದಕತೆಯನ್ನು ಹೆಚ್ಚಿಸುವ, ಮಗುವಿನ ಸಹಜ ಕುತೂಹಲ ತಣಿಸುವ ಯಾವ ಉದಾತ್ತ ಆಶಯವೂ ಆ ಪ್ರಕಟಣೆಗಳಲ್ಲಿ ಇದ್ದಂತಿಲ್ಲ. ಅಂದರೆ ಶಾಲಾ ಕಲಿಕಾ ಪೂರ್ವ ಹಂತದಿಂದ ವೃದ್ಧಾಶ್ರಮದವರೆಗೆ ಪ್ರತಿಯೊಂದು ಹಂತದಲ್ಲೂ ಮಗುವನ್ನು ಕೇವಲ 'ಬಳಕೆದಾರ ? ಬೇಡಿಕೆದಾರ'ನಾಗಿ ನೋಡಲಾಗುತ್ತಿದೆಯೇ ವಿನಾ ವಿಶಿಷ್ಟ ಸಂವೇದನಶೀಲ, ವಿಶಿಷ್ಟ ಅನುಭವಗಳಿಸಿದಾತ, ತನ್ನದೇ ಆದ ರೀತಿಯಲ್ಲಿ ಜಗತ್ತಿಗೆ ಕೊಡುಗೆ ನೀಡಬನಲ್ಲ ಸೃಜನಶೀಲ ಉತ್ಪಾದಕನನ್ನಾಗಿ ನೋಡುತ್ತಲೇ ಇಲ್ಲ.**

**ಪ್ರೊ॥ ಎಮ್. ಆರ್. ನಾಗರಾಜು**

ಆಬಾಲವೃದ್ಧರೆಲ್ಲರೂ – ಕೂಡಿದರೇ ಸಮಾಜ. ಆದರೂ ಅದೇಕೋ ನಾವು ಮಕ್ಕಳಿಗೆ, ತಾವೂ ವೃದ್ಧರಾಗುವರೆಂಬ ಅಂಶವನ್ನಾಗಲಿ, ವೃದ್ಧರೂ ಒಮ್ಮೆ ಮಕ್ಕಳಾಗಿದ್ದರು ಎಂಬ ಅಂಶವನ್ನಾಗಲಿ ನೆನಪು ಮಾಡಿಕೊಡುವುದೇ ಇಲ್ಲ. ಆಯುಷ್ಯವನ್ನು ಕಳೆದುಕೊಂಡು ವಯಸ್ಸನ್ನು ಹೆಚ್ಚಿಸಿಕೊಂಡವರೇ ವೃದ್ಧರು. ವೃದ್ಧಿ ಎಂದರೆ ಹೆಚ್ಚಳ ಎಂದು ತಾನೇ ! ತಾನಾಗಿ ಹೆಚ್ಚಳ ಆಗಿದ್ದು ವಯಸ್ಸು. ಆದರೆ ವಯಸ್ಸಿನೊಂದಿಗೆ ಲೋಕಾನುಭವ, ಜನರ ವರ್ತನೆ, ನೋವು ನಲಿವುಗಳ ಬಗೆಗೆ ಎಚ್ಚರ ತಾವಾಗಿಯೇ ವರ್ಧಿಸುತ್ತವೆ. ಆದರೆ ಮುದುಕರನ್ನು ಕಂಡಾಗ ಆಯುಷ್ಯ ನಷ್ಟ ಮಾಡಿಕೊಂಡವರ ಬಗ್ಗೆ ಕನಿಕರ ವಾಗಲಿ, ವಯಸ್ಸು ಅನುಭವ ಹೆಚ್ಚಳಗೊಂಡಿರುವ ಬಗೆಗೆ ಗೌರವವಾಗಲಿ ಯುವಕರಿಗೆ ನಿರೀಕ್ಷಿತ ಪ್ರಮಾಣದಲ್ಲಿ ಮೂಡುತ್ತಿಲ್ಲ ಎಂಬುದು ವೃದ್ಧರ ದೂರು.

ಚೀಲವು ಖಾಲಿಯೋ ಭರ್ತಿಯೋ ಎಂಬುದನ್ನು ಚೀಲವನ್ನು ನೋಡಿದರೇ ಅರಿವಾಗುತ್ತದೆ. ಆದರೆ ಮುಚ್ಚಳವನ್ನು ಮುಚ್ಚಿದ ಡಬ್ಬಿ ಹಾಗಲ್ಲ. ಖಾಲಿ ಡಬ್ಬಿಗೂ ಭರ್ತಿ ಡಬ್ಬಿಗೂ ಅಂತರವನ್ನು ಕಣ್ಣು ಗುರುತಿಸಲಾರದು. ಜ್ಞಾನೇಂದ್ರಿಯಗಳೆಲ್ಲಾ ಇಲ್ಲಿ ಅಜ್ಞಾನೇಂದ್ರಿಯಗಳೇ. ಆದರೆ ಕರ್ಮೇಂದ್ರಿಯವಾದ ಕೈನಿಂದ ಮೇಲೆತ್ತಿದಾಗಲೇ ಧಾರಕದ ಧರಿಸಿಕೆ ಅರಿವಾಗುವುದು. ಪ್ರತಿಯೊಬ್ಬ ವ್ಯಕ್ತಿಯೂ ಚೀಲವಲ್ಲ – ಮುಚ್ಚಳ ಮುಚ್ಚಿದ ಡಬ್ಬಿ. ಜನರು ಡಬ್ಬಿಯ ನೆಗ್ಗು ಗಮನಿಸುವರೇ ವಿನಾ ಮುಚ್ಚಳ ತೆಗೆದು ನೋಡುವ ಗೋಜಿಗೆ ಹೋಗಲು ಅವರಿಗೆ ರೂಢಿ ಇಲ್ಲ. ವೃದ್ಧರೇ, ಆಕ್ಷೇಪಿಸಬೇಡಿ. ಯುವಕರ ಅನುಭವ, ಗಳಿಕೆ, ಸಾಮರ್ಥ್ಯವನ್ನು ಅವರ ಡಬ್ಬಿಯ ಮುಚ್ಚಳ ತೆಗೆದು ನೀವೂ ನೋಡಿಲ್ಲ.

ಈಗಾಗಲೇ ಬದುಕಿ ಬಾಳಿದವರ ಗಳಿಕೆಯ ಬಗೆಗೆ, ಯುವಕರಿಗೆ, ಬೆಳೆದು ಸಾಧಿಸಬಹುದಾದ ಯುವಕರ ಅಂತಃಸತ್ತ್ವದ ಬಗೆಗೆ ವೃದ್ಧರಿಗೆ ಕುತೂಹಲ ಕಳೆದುಹೋಗಿಲ್ಲವಾದರೂ ನಿರೀಕ್ಷೆಗಿಂತ ಕಡಿಮೆ ಹಂತ ತಲಪಿರುವುದು ಸಾಮಾಜಿಕ ಬಂಧ ಸಡಿಲವಾಗಿದೆ.

ಮಕ್ಕಳನ್ನು ಬೆಳೆಸುವಾಗ ಮಕ್ಕಳು ಅಪೇಕ್ಷಿಸಿದ್ದನ್ನು ಪೂರೈಸುವ ತಂದೆತಾಯಿಯರು ತಮ್ಮ ಸುತ್ತಮುತ್ತಣ ವ್ಯಕ್ತಿಗಳ ವಿಶೇಷ ಗುಣಗಳನ್ನು ಪರಿಚಯ ಮಾಡಿಕೊಟ್ಟು ಅವರ ಬಗ್ಗೆ ಕುತೂಹಲ ತಳೆಯುವಂತೆ ಮಾಡದೇ ಹೋದದ್ದರ ಪರಿಣಾಮವೇ ಇದು. ಸಾಕುಪ್ರಾಣಿಗಳನ್ನು ಸಾಕುವಾಗ ಅವುಗಳ

# ವೇದನೆಗೆ ಏಕೈಕ ಪರಿಹಾರ ಸಂವೇದಕತೆ!



ಅಗತ್ಯಗಳನ್ನು ಪೂರೈಸಿದರೆ ಸಾಕು. ಆದರೆ ಮಕ್ಕಳನ್ನೂ ಹಾಗೆಯೇ ಸಾಕಿದರೆ ಇಂದಿನ ಯುವಕರ ಉಪೇಕ್ಷೆಗೆ ಅವರನ್ನು ಬೆಳೆಸಿದ ರೀತಿಯಲ್ಲಿಯೇ ಕಾರಣವನ್ನು ಕಂಡುಕೊಳ್ಳಬೇಕು. ಕಿರಿಯರನ್ನು ಬೆಳೆಸುವಾಗ ನಮಗೆ ಪ್ರೀತಿಯನ್ನು ನೀಡುವ ಅಪ್ಪ ಎನಿಸಿಕೊಳ್ಳಲು ಆಸಕ್ತಿಯೇ ವಿನಾ ಲೋಕವನ್ನು ಕುತೂಹಲದ ಕಣ್ಣಿನಿಂದ ನೋಡುವುದನ್ನು ನೀಡಬೇಕೆಂಬ ಎಚ್ಚರ ಆಗ ಇದ್ದೀತೆ ? ಈಗ ಇರುವಷ್ಟು ಸಾಕೇ ?

ಸಹಮಾನವರ ಬಗೆಗೆ ಕುತೂಹಲ ಬೆಳೆಸದ ನಾವು ಯಾರನ್ನೇ ಮಕ್ಕಳಿಗೆ ಪರಿಚಯಿಸುವಾಗ ಅವರ ಹೆಸರನ್ನು ಅಥವಾ ದುರ್ಗುಣಗಳನ್ನು ಹೇಳಬಹುದೇ ವಿನಾ ಅವರ ಬಗ್ಗೆ ಕುತೂಹಲವನ್ನು ಮೂಡಿಸುವುದೇ ಇಲ್ಲ. ಮಾನವರ ಬಗ್ಗೆಯೇ ಈ ಪರಿಸ್ಥಿತಿಯಾದರೆ ಇನ್ನು ಜೀವಿಗೋಲದ ಇತರ ಜೀವಿಗಳ ಬಗ್ಗೆ ನಮಗೆ / ನಮ್ಮ ಮಕ್ಕಳಿಗೆ ಕುತೂಹಲವಿದೆಯೇ ?

"ನಾಯಿ, ಹಂದಿ" ಎಂದೆಲ್ಲಾ ಬೈಯುತ್ತೇವೆ, ಹೊಲಸನ್ನು ತಿನ್ನುವ ಪ್ರಾಣಿಗಳಿಗೆ ಮೂಗು ಆಘ್ರಾಣ ಶಕ್ತಿ ಕಳೆದುಕೊಂಡಿರಬೇಕು ಎಂದು ನಾನು ಬಾಲ್ಯದಲ್ಲಿ ಭಾವಿಸಿದ್ದೆ. ಆದರೆ ಆ ಪ್ರಾಣಿಗಳಿಗೆ ಮಾನವರಿಗಿಂತಲೂ ವಾಸನಾಗ್ರಹಣೆ ಇನ್ನೂ ತೀವ್ರವಾಗಿ ಇದೆಯೆಂದು ಸಂಶೋಧನೆ ಹೇಳುತ್ತದೆ. ಹಂದಿಯು ತನ್ನ ಮರಿಗಳನ್ನು ಗ್ರಹಿಸುವುದು ವಾಸನೆಯಿಂದಲೇ ! ಹಂದಿಯು ತನ್ನ ಮರಿಗೆ ಜನ್ಮವಿತ್ತಾಗ ಒಮ್ಮೆ ಅದರ ವಾಸನೆ ಗ್ರಹಿಸಿತೆನ್ನಿ. ಆಗ ಮಣಗಟ್ಟಲೆ ಸೆಂಟ್ ಸುರಿದರೂ ತನ್ನ ಮರಿಯನ್ನು ಪತ್ತೆ ಹಚ್ಚಿಬಿಡುತ್ತದೆ. ಅಂದರೆ ಸಸ್ಯಲೋಕದ, ಪ್ರಾಣಿಲೋಕದ ಸೋಜಿಗಗಳಿಂದ ನಾವು ವಂಚಿತರಾಗಲು ಕಾರಣ ಅವುಗಳ ಬಗ್ಗೆ ಇರುವ ಉಪೇಕ್ಷೆಯೆಂಬ ಪೂರ್ವಗ್ರಹ.

ಜೀವಿಲೋಕ ಕುರಿತೇ ಈ ಮಟ್ಟದ ಉಪೇಕ್ಷೆ ಇರುವ ನಮಗೆ ಜೀವಿಲೋಕವನ್ನು ಹೆರುತ್ತಿರುವ, ಹೊರುತ್ತಿರುವ, ಮರಣಿಸಿದ ಕೂಡಲೇ ಒಳಸೆಳೆದುಕೊಳ್ಳುತ್ತಿರುವ ನಿರ್ಜೀವಿಲೋಕದ ಬಗೆಗೆ ಇನ್ನೂ ಹೆಚ್ಚಿನ ಉಪೇಕ್ಷೆ! ಈ ಪೂರ್ವಗ್ರಹ ನಮ್ಮಲ್ಲಿಯೇ ತುಂಬಿತುಳುಕುತ್ತಿರುವಾಗ ಮಕ್ಕಳನ್ನು ದೂರುವುದೆಷ್ಟು ಸರಿ !

ಮಕ್ಕಳಿಗೆ ಮಾತು ಕಲಿಸಲು ಮುಂದಾಗುವ ನಾವು, ವ್ಯಾವಹಾರಿಕ ಎಚ್ಚರ ಕಲಿಸಲು ಮುಂದಾಗುವ ನಾವು 'ಮುಚ್ಚಳ ತೆರೆದು ನೋಡುವ' ತೋರಿಕೆಯನ್ನು ಮೀರಿದ ಅಚ್ಚರಿಯ ಎಚ್ಚರವನ್ನು ಮೂಡಿಸುವ ಕೆಲಸವನ್ನು ಶಾಲೆಗೆ ಬರುವ ಮೊದಲೇ ಕುತೂಹಲ ತಳೆಯುವ ಸಂವೇದನಾಶೀಲತೆಯನ್ನು ಕಲಿಯದ ಮಗುವಿಗೆ, ಶಾಲೆಯ ಪಾಠ ನೀರಸ... ಎಂದೊ ಅನಗತ್ಯ ಕುತೂಹಲ ಎಂದೋ ಅನಿಸದಿರದು. ಮಾಹಿತಿಯ ಕೊರತೆಯನ್ನು ನೀಗಲು ಮಾಹಿತಿ ನೀಡುವುದು ಪರಿಹಾರವಲ್ಲ. ಬದಲಾಗಿ ಮಾಹಿತಿಯನ್ನು ಅರಿಯುವ ಹಸಿವೆಯಾದ ಸಂವೇದನಾಶೀಲತೆಯನ್ನು ಕಲಿಸುವುದು ಅಗತ್ಯ.

ಮಾನವಕುಲ ಇಂದು ಸಂವೇದನಾಶೀಲತೆಯ ಹಸಿವೆ ಇಲ್ಲದೆ, ಹಸಿವೆ ಮರೆಯಾದ ರೋಗಿಯ ಹಾಗೆ, ತಿನ್ನಲು ಅಸಮರ್ಥವಾಗಿದೆ. ತಾನಾಗಿಯೇ ಬಂದ ಅನುಭವವನ್ನು ಮುಂದಿನ ತಲೆಮಾರಿನವರಿಗೆ ಸಂವಹನ ಮಾಡಲೂ ಅಶಕ್ಯ ವಾಗಿದೆ. ಜನರನ್ನು ಬೇಡಿಕೆ ಸಲ್ಲಿಸುವ ಗ್ರಾಹಕರನ್ನಾಗಿ ಮಾತ್ರ ನೋಡಲಾಗುತ್ತಿದೆ. ಸ್ವಸಾಮರ್ಥ್ಯದ ಅಭಿವ್ಯಕ್ತಿಗೆ ಆಸ್ಪದವಿಲ್ಲದೆ ತಮಗೆ ಅನುಭವವಿದ್ದೂ ಇತರರಿಗೆ ನೀಡಲಾಗದೆ ಚಡಪಡಿಸುತ್ತಿರುವ ವ್ಯಕ್ತಿಗಳೆಂದು ಪರಿಗಣಿಸುತ್ತಿಲ್ಲ.

ವೃದ್ಧಾಶ್ರಮಗಳನ್ನು ನೋಡಿ. ವೃದ್ಧರ ಅಗತ್ಯಗಳ ಪೂರೈಕೆಗೆ ಬೇಕಾದ ಸನ್ನಿವೇಶಗಳನ್ನು ಸೃಷ್ಟಿಮಾಡಿ ಆ ಪಟ್ಟಿಯನ್ನು ನಿಮಗೆ ಒದಗಿಸಲಾಗುತ್ತದೆ. ಆದರೆ ಆ ಭೋಗ ಸಾಮಗ್ರಿಗಳನ್ನು ಬಳಕೆ ಮಾಡಿ ಬಾಳುವ ಹಿರಿಯರು, ತಾವು ಪಡೆದಿರುವ ಸಾಮರ್ಥ್ಯವನ್ನು ಜಗತ್ತಿಗೆ ನೀಡಲು ಅವಕಾಶ ಕಲ್ಪಿಸಲಾಗಿರುವ ಬಗ್ಗೆ ಎಲ್ಲೂ ಸೂಚನೆ ಇರುವುದಿಲ್ಲ. ಆ ಬಗೆಯ ಆಲೋಚನೆಯೇ ಇನ್ನೂ ಬಂದಂತಿಲ್ಲ. ಪ್ರತಿಯೊಬ್ಬ ಗ್ರಾಹಕನೂ ಉತ್ಪಾದಕ ಕೂಡ. ಆದರೆ ವೃದ್ಧರನ್ನು 'ದಂಡ ಪಿಂಡ'ಗಳಾಗಿ ಕಾಣುವುದು ಎಷ್ಟರಮಟ್ಟಿಗೆ ಸರಿ ?

ವೃದ್ಧರ ಅನುಭವವು ಅಗೋಚರವೆಂಬ ಕಾರಣಕ್ಕೆ ಅದನ್ನು ಉಪೇಕ್ಷಿಸ ಲಾಗುತ್ತಿದೆ. ಹಾಗೆಯೇ ಮಕ್ಕಳ ಸಾಧನೆಯ ಸುಪ್ತಚೇತನವನ್ನು ಉಪೇಕ್ಷೆ ಮಾಡಲಾಗುತ್ತಿದೆ. ತಳರಚನೆಯ ಜಾಹೀರಾತು ನೀಡುವಾಗ ಮಕ್ಕಳನ್ನೂ ಕುರುಡು ಗ್ರಾಹಕರನ್ನಾಗಿ ಪರಿಗಣಿಸಲಾಗುತ್ತಿದೆ ಎಂಬುದು ಸುಸ್ಪಷ್ಟ.

ಕೆಲವು ಶಾಲೆಗಳು ಮಕ್ಕಳು ಸಾಮರ್ಥ್ಯಕ್ಕೆ ಅಭಿವ್ಯಕ್ತಿ ನೀಡುವ ಕಲಿಕೆಯ ಬಗೆಗೂ ಜಾಹೀರಾತು ನೀಡುತ್ತವೆ. ಆದರೆ, ಆ ಕಲಿಕೆ ಕೇವಲ ತೋರಿಕೆಗಾಗಿ. ಮಕ್ಕಳ / ಪೋಷಕರ ಕನಸಿನ ಪೂರೈಕೆಯನ್ನು ಆಧರಿಸಿ ರೂಪಿಸಿದವೇ ವಿನಾ ಮಗುವಿನ ಉತ್ಪಾದಕತೆಯನ್ನು ಹೆಚ್ಚಿಸುವ, ಮಗುವಿನ ಸಹಜ ಕುತೂಹಲ ತಣಿಸುವ ಯಾವ ಉದಾತ್ತ ಆಶಯವೂ ಆ ಪ್ರಕಟಣೆಗಳಲ್ಲಿ ಇದ್ದಂತಿಲ್ಲ. ಅಂದರೆ ಶಾಲಾ ಕಲಿಕಾ ಪೂರ್ವಹಂತದಿಂದ ವೃದ್ಧಾಶ್ರಮದವರೆಗೆ ಪ್ರತಿಯೊಂದು ಹಂತದಲ್ಲೂ ಮಗುವನ್ನು ಕೇವಲ 'ಬಳಕೆದಾರ / ಬೇಡಿಕೆದಾರ'ನಾಗಿ ನೋಡ ಲಾಗುತ್ತಿದೆಯೇ ವಿನಾ ವಿಶಿಷ್ಟ ಸಂವೇದನಾಶೀಲ, ವಿಶಿಷ್ಟ ಅನುಭವಗಳಿಸಿದಾತ, ತನ್ನದೇ ಆದ ರೀತಿಯಲ್ಲಿ ಜಗತ್ತಿಗೆ ಕೊಡುಗೆ ನೀಡಬಲ್ಲ ಸೃಜನಶೀಲ ಉತ್ಪಾದಕನನ್ನಾಗಿ ನೋಡುತ್ತಲೇ ಇಲ್ಲ.

ಸಂವೇದನಾಶೀಲತೆಯ ಗೋರಿಯ ಮೇಲೆ ಗ್ರಾಹಕ ಉಪಯುಕ್ತ 'ಮಾಲೆ'ಗಳ ಲೀಲೆ ಸಾಗಿದೆ.

ನಿಸರ್ಗದ ವೈಶಾಲ್ಯದ ಹಾಗೆಯೇ ವೈವಿಧ್ಯವೂ ವ್ಯಾಪಕ ವಾದದ್ದು. ಸೃಷ್ಟಿಯಲ್ಲಿಯೇ ಜಾಣನೆನಿಸಿಕೊಂಡ ಮಾನವ, ತನ್ನ ಸಹಚರರ ಸುಪ್ತ ವೈವಿಧ್ಯವನ್ನು ಮರೆತು ಕೇವಲ ಗ್ರಾಹಕ ನನ್ನಾಗಿಸಿದ್ದು – ಈ 'ಗ್ರಾಹಕತೆ'ಯು ಜನರಲ್ಲಿ – ಸಹಚರರ ಬಗೆಗೆ ಸಮಾಜದ ಬಗೆಗೆ, ಸಹಜೀವಿಗಳ ಬಗೆಗೆ, ನಿರ್ಜೀವಿ ಪರಿಸರದ ಬಗೆಗೆ ದಿವ್ಯ ನಿರ್ಲಕ್ಷ್ಯವಾಗಿ ಜೀವಿಗೋಲವನ್ನು ಗಂಡಾಂತರಕ್ಕೆ ದೂಡಿರುವುದು – ಅಪೇಕ್ಷಣೀಯವಲ್ಲದೆ ಹೋದರೂ ಅತ್ಯಂತ ಸಹಜವಾದ ಪರಿಣಾಮ.

೨

**ಶ್ರಮ ಜಾಗೃತಿ**

*ಹೂವನು ಕಂಡು ಮೋಹಿಸಿ ನೀನು ಚೆಲುವಿದೆನ್ನುತ ಮುದ್ದಿಡುವೆ*

*ಹೂವಿನ ಪೆಂಪಿಗೆ ಬಾಳನು ತೆತ್ತ ಮೊಳಕೆಯ ಗೋಳನ್ನು ನೀನರಿಯೆ*

**– ಕುವೆಂಪು**

ಗ್ರಾಹಕ ಜಾಗೃತಿ ಕುರಿತು ಈಚೀಚೆಗೆ ಅನೇಕ ಲೇಖನಗಳು ಬೆಳಕಿಗೆ ಬರುತ್ತಿವೆ. ಆದಾಗ್ಯೂ ಅಗತ್ಯದ ಅಗಾಧತೆಗೆ ಹೋಲಿಸಿದರೆ ಬರುತ್ತಿರುವ ಲೇಖನಗಳು ಕಡಿಮೆ ಎಂದು ಅನಿಸು ವಷ್ಟರಮಟ್ಟಿಗೆ ಗ್ರಾಹಕರಿಗೆ ಮೋಸ ಅವ್ಯಾಹತವಾಗಿ ಸಾಗಿದೆ :

# ಗಜಲ್

ಏಕತಾರಿ ಹುರಿಗೆಜ್ಜೆ ನಾದದಿಂದಲೇ ನನ್ನೊಳಗೆ ಧ್ಯಾನಿಸುತ್ತಿದ್ದೇನೆ
ರಾಗವಾಗಿ ಆವರಿಸುವೆಯೆಂದು ಪ್ರೀತಿಯಿಂದಲೇ ನನ್ನೊಳಗೆ ಧ್ಯಾನಿಸುತ್ತಿದ್ದೇನೆ

ಎದೆಯ ಡಮರುಗದ ಸದ್ದಿಗೆ ನಿನ್ನ ನೆನಪಿನದೆ ಹೆಜ್ಜೆಕುಣಿತ
ಏಕಾಂತದಲ್ಲುಟ್ಟಿದ ಪ್ರೀತಿಯ ಹಾಡಿನಿಂದಲೇ ನನ್ನೊಳಗೆ ಧ್ಯಾನಿಸುತ್ತಿದ್ದೇನೆ

ತಂತಿಯಂತೆ ನನ್ನಂತರಂಗವ ಹುರಿಗೊಳಿಸಿ ಹಾಡಿಬಿಡು ಬಯಲೊಳಗೆ
ನಿನ್ನ ಬೆರಳ ಸ್ಪರ್ಶದಿ ಹುಟ್ಟುವ ರಾಗದಿಂದಲೇ ನನ್ನೊಳಗೆ ಧ್ಯಾನಿಸುತ್ತಿದ್ದೇನೆ

ನಸುಕಿನಿಂದ ಕತ್ತಲು ತನಕ ಏಕತಾರಿಯನೆ ನೀನೆಂದೆ ತಬ್ಬಿದ್ದೇನೆ
ಏಕತಾರಿಯ ತಂತಿಗೆ ಬೆರಳಾಗಿ, ಕೊರಳಾಗಿ ಬರುವೆಯೆಂದು ಜೀವದಿಂದಲೇ
ನನ್ನೊಳಗೆ ಧ್ಯಾನಿಸುತ್ತಿದ್ದೇನೆ

ಬಾ ನೀನೊಮ್ಮೆ 'ಪ್ರಕಾಶ'ನ ಮೈ ಚರ್ಮ ಸುಲಿದು ತಂತಿ ಮಾಡಿ ನುಡಿಸಿಬಿಡು
ಏಕತಾರಿಯ ಗುಂಗಿನಲಿ ಸಾವ ಮರೆತುಬಿಡುವೆ ಖುಷಿಯಿಂದಲೇ ನನ್ನೊಳಗೆ ಧ್ಯಾನಿಸುತ್ತಿದ್ದೇನೆ

**ಪ್ರಕಾಶ ಬಿ.**
ಬಡಿಗೇರ ಓಣಿ, ಹನುಮಂದೇವರಗುಡಿ ಹತ್ತಿರ, ಜಾಲಹಳ್ಳಿ – ೫೮೪ ೧೧೬
ದೇವದುರ್ಗ ತಾಲೂಕು, ರಾಯಚೂರು ಜಿಲ್ಲೆ

೧. ಗ್ರಾಹಕ ಸಾಮಗ್ರಿಗಳನ್ನು ಪರಿಶೀಲಿಸದೆಯೇ ಕೊಳ್ಳುವ ಅಮಾಯಕ ಅಸಹಾಯಕರು.
೨. ಕೇವಲ ಇಂದ್ರಿಯಗಳ ಮೂಲಕ ಆತುರಾತುರವಾಗಿ ಓದುವವರೆಂಬ ಕಾರಣಕ್ಕಾಗಿಯೇ ಪ್ರಸಿದ್ಧ ಬ್ರಾಂಡ್ ವಸ್ತುಗಳ ಒಂದಕ್ಷರವನ್ನು ಬದಲಿ ಮಾಡಿ ಬೇರೆ ಬ್ರಾಂಡ್ ರೂಪಿಸುವ ಮಾರಾಟಗಾರರು.
೩. ಉತ್ಪಾದಕರ ಜಾಲ ಮತ್ತು ಪಂಚೇಂದ್ರಿಯಗಳ ಇತಿಮಿತಿಯಲ್ಲಿ ತಮ್ಮ ವಿಕೃತಿಯನ್ನು / ಕಲಬೆರಕೆಯನ್ನು ಬಿಟ್ಟುಕೊಡದ ಗ್ರಾಹಕ ಸಾಮಗ್ರಿಗಳು.
೪. ಗ್ರಾಹಕ ಸಾಮಗ್ರಿಗಳಿಗೆ ಮನಮೋಹಕ ಮುಚ್ಚಳ ಆಗಬಲ್ಲ ವರ್ಣಕಾರಕಗಳು, ಸುಗಂಧಕಾರಕಗಳು, ಸಿಹಿಕಾರಕಗಳು – ಹೇರಳವಾಗಿರುವುದು.
೫. ಚಿತ್ತಾಕರ್ಷಕ ಚಿತ್ತಾರಗಳ ಪ್ಯಾಕಿಂಗ್ ಸೌಕರ್ಯ – ಇವೆಲ್ಲವೂ ಮನವೊಲಿಸಿ ಮರುಳುಮಾಡುವ ಮಾಯಾಜಾಲಗಳು. ಇವುಗಳ ಬಗ್ಗೆ ಬರೆದು ಮುಗಿಸುವ ವೇಳೆಗಾಗಲೇ ಹೊಸ ಸಾಧ್ಯತೆಗಳು ತೆಗೆದುಕೊಳ್ಳುತ್ತವೆ !

ಗ್ರಾಹಕ ಜಾಗೃತಿ ಲೇಖನಗಳು ಮುಖ್ಯವಾಗಿ ಈ ಕೆಳಗಿನ ಅಂಶಗಳತ್ತ ವಿಶೇಷವಾಗಿ ಲಕ್ಷ್ಯ ಹರಿಸುತ್ತಿವೆ :

- ಕಲಬೆರಕೆಯಾಗಿರುವ ಸಾಧ್ಯತೆ ಹಾಗೂ ಅದರಿಂದಾಗುವ ದುಷ್ಪರಿಣಾಮ.
- ತೂಕ / ಅಳತೆ ಮೊದಲಾದವುಗಳಲ್ಲಿನ ದೋಷಗಳು.
- ಮರೆಮಾಚಿರುವ ದುಷ್ಪರಿಣಾಮಗಳು ಹಾಗೂ ಅಡ್ಡಪರಿಣಾಮಗಳು.
- ಬಳಕೆ ಮುಕ್ತಾಯ ದಿನಾಂಕ (ಎಕ್ಸ್‌ಪೈರಿ ಡೇಟ್) ಮರೆಮಾಚಿಸುವಿಕೆ.
- ಬೆಲೆಯ ಏರುಪೇರಿನಲ್ಲಿ ಆಗುವ ಅನ್ಯಾಯಗಳು.
- ಗ್ರಾಹಕರಿಗೆ ಜಾಹೀರಾತುಗಳ ಮೂಲಕ ತೋರುವ ಆಮಿಷಗಳು.
- ಜಾಹೀರಾತುಗಳಲ್ಲಿ ಹೇಳಲಾಗುವ ಹಸಿ ಹುಸಿಗಳು.
- ನ್ಯಾಯಯುತ ಹೋರಾಟಕ್ಕೆ ಇರುವ ಅವಕಾಶಗಳು.

– ಈ ಎಲ್ಲವೂ ಅತ್ಯಗತ್ಯವೂ ಅತ್ಯಮೂಲ್ಯವೂ ಆದ ಮಾಹಿತಿಗಳ ಆಕರ ಎಂಬುದು ನಿರ್ವಿವಾದ. ಇದು ಕೇವಲ ಮಾಹಿತಿ ರೂಪದಲ್ಲಿ ಜನರನ್ನು ತಲುಪಿದರೆ ಸಾಲದು, ಹೋರಾಟದ ಹುಮ್ಮಸ್ಸನ್ನೂ ಆತ್ಮವಿಶ್ವಾಸವನ್ನೂ ಮೂಡಿಸಬೇಕು. ಆಡಳಿತಾಂಗ, ಶಾಸಕಾಂಗ, ನ್ಯಾಯಾಂಗಗಳ ಸಪ್ಪೆ ಪ್ರತಿಕ್ರಿಯೆ ಹಾಗೂ ದುರ್ಬಲ ನಿಯಂತ್ರಣದಿಂದ ಅಸಹಾಯಕರಾದ ನಿರುತ್ಸಾಹಿಗಳಾದವರಲ್ಲಿ ಉತ್ಸಾಹ ತುಂಬುವ ಅಂಶಗಳನ್ನೊಳಗೊಳ್ಳದೆ ಹೋದರೆ ಅಂತಹ ಲೇಖನವು ನೊಂದವರ ನಿಟ್ಟುಸಿರನ್ನು ಸುದೀರ್ಘಗೊಳಿಸೀತು ! ಇನ್ನೂ ಹೆಚ್ಚೆಂದರೆ ಪಟ್ಟಭಧ್ರರನ್ನು ಶಪಿಸುವ ಮಟ್ಟಕ್ಕೆ ಸಾಗೀತು, ಗ್ರಾಹಕತೆಯು ಜನಸಂಖ್ಯಾ ಹೆಚ್ಚಳದಿಂದ, ಜೀವನಶೈಲಿಯ ಉನ್ಮಾದದಿಂದ, ಗ್ರಾಹಕರಿಗೆ ದೊರೆಯುವ ಮನ್ನಣೆಯಿಂದ ಉಕ್ಕಿ ಹರಿಯುತ್ತಿರುವಾಗ ಇಂತಹ ನಿಟ್ಟುಸಿರು / ಶಾಪಗಳು ಆ ಪ್ರವಾಹದಲ್ಲಿ ಕೊಚ್ಚಿಹೋಗಿಯಾವು. ಮಾಹಿತಿಯೊಂದಿಗೆ ಅನ್ಯಾಯವನ್ನು ತಡೆಯಲು ಸಂಘಟಿತರಾಗುವ, ಅಗತ್ಯಬಿದ್ದರೆ ಸಂಘರ್ಷಕ್ಕಿಳಿಯುವ ಪ್ರವೃತ್ತಿಯನ್ನು ರೂಪಿಸಿಕೊಳ್ಳದಿದ್ದರೆ ಇಂತಹ ಲಕ್ಷ ಲೇಖನಗಳೂ ಉತ್ಪಾದಕರ ಅಲಕ್ಷ್ಯಕ್ಕೆ ಗುರಿ ಆಗುವುವು. ಇದು ಬಯಲಾಗಿರುವ ವಾಸ್ತವ.

ಗ್ರಾಹಕ ಜಾಗೃತಿಯ ಲೇಖನಗಳಿಗೆ ಇರುವ ಇನ್ನೊಂದು ಇತಿಮಿತಿಯೂ ಇದೆ. ಅದನ್ನು ಈ ಲೇಖನ ಪ್ರಸ್ತಾಪಿಸಬಯಸುತ್ತದೆ. ಪ್ರತಿ ಗ್ರಾಹಕ ಸಾಮಗ್ರಿಯನ್ನು ಕೊಳ್ಳುವಾಗ, ಅದನ್ನು ಬಳಕೆ ಮಾಡಿಕೊಳ್ಳುವಾಗ, ಬದುಕಿಗೆ ಅಳವಡಿಸಿಕೊಳ್ಳುವಾಗ, ಉಳಿಕೆಗಳನ್ನೂ ಸಮರ್ಪಕವಾಗಿ ವಿಲೇವಾರಿ ಮಾಡುವಾಗಿನವರೆಗೆ ಇರಬೇಕಾದ ಜಾಗೃತಿ ಅದು. ಆದರೆ ಗ್ರಾಹಕನಿಗಿರುವ ಜಾಗೃತಿ ಸಾಮಾನ್ಯವಾಗಿ ಎರಡೇ : ಧಾರಣೆಯನ್ನು ಭರಿಸಬಲ್ಲನೇ ಎಂಬ ಎಚ್ಚರ ಮತ್ತು ಅದರಿಂದ ತನಗೇನೂ ಹಾನಿಯಾಗಲಾರದೇ ಎಂಬ ಮಸುಕು ಎಚ್ಚರ ಮಾತ್ರ. ಆದರೆ ಈ ಎಚ್ಚರಗಳನ್ನೂ ಮರೆಮಾಚುವ ಮಟ್ಟಿಗೆ ಗ್ರಾಹಕ ಸಾಮಗ್ರಿಯ ಅಧಿಕ ಬಳಕೆಯಿಂದ ವ್ಯಕ್ತಿಯು ತನ್ನ ಸ್ಥಾನಮಾನ ಹೆಚ್ಚಿಸಿಕೊಳ್ಳಲು ಸಾಧ್ಯ ಎಂಬ ಭ್ರಮೆ !

ಗ್ರಾಹಕ ನಿರ್ಣಯದ ಪರಿಣಾಮಗಳನ್ನು ಈ ಬಗೆಯ ಜಾಗೃತಿಗಳೂ ಗ್ರಾಹಕ ಕೇಂದ್ರೀಕೃತವಾಗಿಸಿವೆ. ವಾಸ್ತವವೆಂದರೆ, ಈ ನಿರ್ಣಯಗಳು ಸಮಾಜದ ಮೇಲೆ, ದೇಶದ ಆರ್ಥಿಕತೆಯ ಮೇಲೆ, ಮಾನವಿಕ ಸಂಬಂಧಗಳ ಮೇಲೆ, ನಿಸರ್ಗದ ಸ್ಥಿತಿಗತಿಗಳ ಮೇಲೆ ಕೂಡ ಪರಿಣಾಮ ಬೀರುವಂತಹವು ! ಅನಗತ್ಯವಾದ / ಸ್ಥಳೀಯವಾಗಿ ಉತ್ಪಾದಿಸಬಹುದಾದ ಗ್ರಾಹಕ ಸಾಮಗ್ರಿಗಳ ಪೂರೈಕೆಗಾಗಿ ನಮ್ಮ ದೇಶದ ವಿದೇಶಿ ವಿನಿಯಮ, ವಿತ್ತ ರಾಯಧನ ರೂಪದಲ್ಲಿ ಹರಿದುಹೋಗುತ್ತಿರುವುದನ್ನು ಸ್ವಾತಂತ್ರ್ಯ ಬಂದು ಅನೇಕ ದಶಕಗಳಾದರೂ ಮುಂದುವರಿಸಲಾಗುತ್ತಿದೆ.




ಗ್ರಾಹಕ ಸಾಮಗ್ರಿ ಉತ್ಪಾದನೆ ಆಧರಿಸಿ, ಆದಾಯ ಗಳಿಸಿ ಉಪಜೀವನ ಸಾಗಿಸುವ ಎಂಟು ವರ್ಗದ ಜನರಿದ್ದಾರೆಂದು ಸ್ಥೂಲವಾಗಿ ಹೇಳಬಹುದು. ಅಂದಮೇಲೆ ನಾವು ಕೊಂಡುಕೊಳ್ಳುವ ಸಾಮಗ್ರಿ ತರುವ ಹಣ ಈ ಎಂಟು ವರ್ಗದ ಜನರಿಗೆ ವಿತರಣೆ ಆಗಬೇಕು. ತಾನು ಗ್ರಾಹಕ ಸಾಮಗ್ರಿಕೊಳ್ಳಬಲ್ಲನೆ ? ಕೊಳ್ಳಲೇಬೇಕೆ ? ಕೊಂಡರೆ ತನಗೆ ಮೋಸವಾಗದೇ ? – ಎಂಬ ಪ್ರಶ್ನೆಗಳನ್ನೇ ಎದುರಿಸುತ್ತಿರುವ ಗ್ರಾಹಕನಿಗೆ ಆ ಪ್ರಶ್ನೆಗಳನ್ನೇ ಕುರಿತು ಲೇಖನ ಬರೆಯುವವರು ಸೃಷ್ಟಿಯಾಗಿದ್ದಾರೆ. ಆದರೆ ಗ್ರಾಹಕನ ಸಂವೇದನಾಶೀಲತೆಯನ್ನು, ತಾನು ನೀಡಿದ ಹಣದ ಸಮರ್ಪಕ ಹಾಗೂ ನ್ಯಾಯಯುತ ವಿತರಣೆಯಾಗುವಂತೆ ನೋಡಿಕೊಳ್ಳುವ ಆ ಬಗ್ಗೆ ದನಿಯೆತ್ತುವ ಮಟ್ಟಕ್ಕೆ ಏರಿಸಬೇಕಾಗಿದೆ. ಇದೆಲ್ಲ ಸರ್ಕಾರದ ಕೆಲಸ (ಶಾಸಕಾಂಗ ಹಾಗೂ ಆಡಳಿತಾಂಗ) ಇಲ್ಲವೆ ನ್ಯಾಯಾಂಗದ ಕೆಲಸ ಎಂದು ಹೇಳುವ ನಾವು ನಮ್ಮ ಅಗತ್ಯಗಳನ್ನು ಪೂರೈಸಿಕೊಂಡು, ನೀಡಿದ ಹಣ ವಿನಿಯೋಗವಾಗುವ ಕ್ರಮದ ಬಗ್ಗೆ ಕುರುಡಾಗಿದ್ದೇವೆ.

ಉಪಭೋಕ್ತ / ಗ್ರಾಹಕ ತಾನು ಗಳಿಸಿದ ಹಣವನ್ನು ಉತ್ಪನ್ನದ ಬಳಕೆಗಾಗಿ ನೀಡಿದ್ದಾನೆ. ಅದನ್ನು ವ್ಯಾಪಾರಿ ಸಂಗ್ರಹಿಸಿದ್ದಾನೆ. ಆದರೆ ಇದರಲ್ಲಿ ಯಾರು ಎಷ್ಟು ಗಳಿಸುತ್ತಾರೆಂಬುದು ಹೋಗಲಿ, ವಿತರಣೆಗೆ ಆಧಾರವೇನು ? ಈ ವಿತರಣೆಯಲ್ಲಿ ಉಪೇಕ್ಷೆಗೆ ಒಳಗಾಗುತ್ತಿರುವವರು ಯಾರು ? ಈ ಪ್ರಶ್ನೆಗಳ ಕುರಿತಂತೆ ಗ್ರಾಹಕನೂ ಆಲೋಚಿಸಬೇಕಾದ ಅನಿವಾರ್ಯತೆ ಇದೆ ಎಂದು ನಿಮಗೆನಿಸುತ್ತಿಲ್ಲವೇ ? ಗಳಿಕೆ ಕಳೆದುಕೊಂಡು ಉತ್ಪನ್ನ ಪಡೆದುಕೊಂಡು ಉಪಯೋಗಿಸಿಕೊಂಡರೆ ಗ್ರಾಹಕನ ಜವಾಬ್ದಾರಿ ಮುಗಿದುಹೋಗುವುದೇ ? ಮತ್ತೂ ವಿಚಿತ್ರವೆಂದರೆ ಒಂದೇ ಪ್ರಕ್ರಿಯೆ (ವಹಿವಾಟು)ಯಲ್ಲಿ ಉಪೇಕ್ಷಣೆಗೆ ಒಬ್ಬರು, ಉದ್ಧಾರಕ್ಕೆ ಒಬ್ಬರು, ಉಪಟಳ ಸಹಿಷ್ಣುವಾಗಿ ಒಬ್ಬರು ರೂಪುಗೊಂಡಿರುವುದು ಏಕೆ ?

ಆದಾಯ ವಿತರಣೆಗೆ ಇರಬಹುದಾದ ಆಧಾರ ಎಲ್ಲ ಜೀವಿಗಳ ಉಳಿವಿಗೆ ಅನುವು ಮಾಡಿಕೊಡಬಹುದಾದ ಅಗತ್ಯ ಎಂಬ ಆದರ್ಶವಾದ. ಆದರೆ ಇದನ್ನು ಪರಿಮಾಣಾತ್ಮಕವಾಗಿ ನಿರ್ಧರಿಸುವುದು ಸಾಧ್ಯವಿಲ್ಲ. ಮಿಗಿಲಾಗಿ ನಮ್ಮ ಆರ್ಥಿಕತೆ ನಿಂತಿರುವುದು ಸ್ಪರ್ಧೆಯ ವಾಸ್ತವಿಕತೆಯ ಮೇಲೆ ವಿನಾ ಸರಕಾರದ ಆದರ್ಶದ ಮೇಲಲ್ಲ. ಹೀಗಾಗಿ ವಾಸ್ತವ ಪ್ರಜ್ಞೆಯಿಂದ ವಿತರಣೆ ನಿರ್ಧರಿತವಾಗುವುದು ಆದರ್ಶದಿಂದಲ್ಲ.

ವಾಸ್ತವವಾಗಿ ವಿತರಣೆ ನಿರ್ಧಾರ ಆಗುವುದು ಅಧಿಕಾರ, ಅಸಹಾಯಕತೆ ಹಾಗೂ ಅನಿವಾರ್ಯವನ್ನಾಧಾರಿಸಿಯೇ ! ಒತ್ತಾಯಪೂರ್ವಕವಾಗಿ ಗಳಿಕೆಯನ್ನು ಅಧಿಕಾರ ತನ್ನತ್ತ ಸೆಳೆಯುತ್ತದೆ. ಅಸಹಾಯಕತೆ ಆಕ್ರಂದನಪೂರ್ವಕವಾಗಿ ಗಮನ ಸೆಳೆಯುತ್ತದೆ. ಆದರೆ ಅನಿವಾರ್ಯತೆ ಅಸಹಾಯಕತೆಯ ಕಾಲೆಳೆಯುತ್ತದೆ. ಮಾನ್ಯ ಗ್ರಾಹಕರು ಗಮನಿಸಬೇಕಾದದ್ದು ಈ ಅಂಶಗಳನ್ನು. ತಾವು ಗ್ರಾಹಕ ಸಾಮಗ್ರಿಗೆ ಪ್ರತಿಯಾಗಿ ನೀಡಿದ ಹಣ ಭಾಗಶಃ ಎಲ್ಲೆಲ್ಲಿಗೆ ತಲಪಬೇಕಾಗಿತ್ತು, ಆದರೆ, ಎಲ್ಲೆಲ್ಲಿಗೆ ತಲಪುತ್ತಿದೆಂಬ ಅಂಶ.

(ಅ) ಗ್ರಾಹಕ ಸಾಮಗ್ರಿಯ ವಹಿವಾಟಿನ ಆದಾಯದ ಭಾಗಶಃ ಅಂಶವಾದರೂ ನಿಸರ್ಗದಲ್ಲಾದ ಏರುಪೇರಿನ ಮರುಸರಿಪಡಿಸುವಿಕೆಗೆ ವಿನಿಯೋಗವಾಗಬೇಕಾಗಿತ್ತು. ಆದರೆ ಇದು ಆಗದಿರಲು ಕಾರಣ – ನಿಸರ್ಗವು ದನಿ ಎತ್ತಲಾರದ ಮೂಕ ! ಆದರೆ ನಿಸರ್ಗದ ಮೇಲಾಗುವ ದುಷ್ಪರಿಣಾಮದ ಫಲ ಇಡೀ ಸಮುದಾಯವೇ ಎದುರಿಸಬೇಕಾದ ಶಿಕ್ಷೆ, ಆದಾಗ್ಯೂ ನಿಸರ್ಗ ಉಪೇಕ್ಷಿತ ! ನಿಸರ್ಗ ಈಗಾಗಲೇ ಪರೋಕ್ಷವಾಗಿ ಜೀವಿಗಳನ್ನು / ಮನುಷ್ಯರನ್ನು ಗಂಡಾಂತರಕ್ಕೆ ದೂಡುವ ಮೂಲಕ ತನ್ನ ಪ್ರತಿಭಟನೆ ಸೂಚಿಸಿದೆ. ಆದಾಗ್ಯೂ ಆ ಪ್ರತಿಭಟನೆ ಒಟ್ಟಾರೆ ಪರಿಣಾಮವಾದ್ದರಿಂದ, ಅಪರಾಧಿಗಳನ್ನು ಬೆರಳು ಮಾಡಿತೋರಿಸದೆ ಇರುವುದರಿಂದ ಕೂಗಿಯೂ ಕೇಳದ ಸೊಲ್ಲು.

(ಆ) ಹಣಹೂಡಿಕೆದಾರರು ಅಗತ್ಯಾಧಾರಿತವಾಗಿ ಆಲೋಚಿಸುವಾಗ ಕನಿಷ್ಠ ಆದಾಯ ಪಡೆದು ಸಮಾಜದ / ನಿಸರ್ಗದ ಒಳಿತಿಗೆ ಶ್ರಮಿಸಬೇಕಾದ ಸಿರಿವಂತರು, ಗಾಂಧೀಜಿಯವರು ಪ್ರತಿಪಾದಿಸಿದ 'ಸಂಪತ್ತಿನ ವಿಶ್ವಸ್ಥರು' (ಟ್ರಸ್ಟೀಸ್ ಆಫ್ ವೆಲ್ತ್). ಆದರೆ ಅಧಿಕಾರ, ಅವರ ಭಾಗವಹಿಸುವಿಕೆ ಅವರಿಗೆ ಅನಿವಾರ್ಯ ಇಲ್ಲದಿರುವುದು ಹಾಗೂ ಕೆಳ ವರ್ಗದವರ ಬದುಕಿಗೆ ಉತ್ಪಾದನೆಯಲ್ಲೂ ಪಾಲ್ಗೊಂಡು ಅನಿವಾರ್ಯವಾಗಿರುವ ವಾಸ್ತವ ಗಮನಿಸಿ ಉದ್ದಿಮೆದಾರರು, ವ್ಯಾಪಾರಗಾರರು, ಅವರವರ ಶಕ್ತಿ ಮತ್ತು ಯುಕ್ತಿಗೆ ಅನುಸಾರ ಉದ್ಧಾರ ಆಗಿದ್ದಾರೆ, ಸುಸ್ಥಿತಿಯಲ್ಲಿದ್ದಾರೆ.

ಉಪಟಳ ಸಹಿಷ್ಣುಗಳಾದ ಕಠಿಣ ಶ್ರಮಗಾರರು, ಅಧಿಕಾರ ಇಲ್ಲದ ಅಸಹಾಯಕರು. ತಮ್ಮ ದುಡಿಮೆಯನ್ನು ಮಾರಿಕೊಳ್ಳದೆ ಗತ್ಯಂತರವಿಲ್ಲದವರು; ಹಣದ ಅಗತ್ಯವಿರುವವರು. ಈ ವರ್ಗದವರು, ವಿತರಣೆ, ವ್ಯಾಪಾರ ಎಲ್ಲ ಹಂತದಲ್ಲೂ ಇದ್ದಾರೆ. ಅವರಿಗೆ ತಲಪುವ ಭಾಗಾಂಶ ಕಡಿಮೆ ಎಂಬ ಬಗ್ಗೆ ಗ್ರಾಹಕರು ಆಲೋಚಿಸಬೇಕು. ಸ್ವತಃ ಕಠಿಣ ಶ್ರಮದವರೇ ಆದ ಗ್ರಾಹಕರಿಗೂ ಈ ಆಲೋಚನೆ ಬರುತ್ತಿಲ್ಲ!

ಮಾನ್ಯತೆ, ಮಹತ್ವಾಧನೆಯಿಂದಾಗಿ ಪಾಲುಗಳಿಂದ ವಂಚಿತರಾದರೂ, ಉತ್ಪಾದಕ ವ್ಯವಸ್ಥೆ ಸಂಶಯದಿಂದ ನೋಡಿದರೂ ಸಮಾಜದಲ್ಲಿ ಅವಗಣನೆಗೆ ಒಳಗಾದರೂ ಸಮಾಜದ ಆಧಾರಸ್ತಂಭಗಳಾದ ಇವರಿಗೆ – ಶ್ರಮಿಕ ದಿನಾಚರಣೆಯಂದು ಗೌರವಪೂರ್ವಕ ಅಭಿಮಾನ ಪೂರ್ವಕ ಮತ್ತು ಪ್ರೀತಿಪೂರ್ವಕ ಸಹಾನುಭೂತಿಗಳು.

೩

### ಶ್ರಮಿಕನಿಗೊಂದು ನಿಟ್ಟುಸಿರು

ಆದಿಮಾನವನಿಂದ ಆಧುನಿಕ ಮಾನವನವರೆಗೆ ಶ್ರಮಿಕನೇ ಸಮಾಜದ ಬೇರು. ಆದಿಮಾನವನ ಸಮಾಜದಲ್ಲಿ ಎಲ್ಲರೂ ಶ್ರಮಿಕರೇ ಆದ್ದರಿಂದ ಒಬ್ಬರ ಶ್ರಮದ ನಿಟ್ಟುಸಿರು ಇನ್ನೊಬ್ಬರಿಗೆ ಸಾಂತ್ವನವಾಗುತ್ತಿತ್ತು. ಸ್ಪರ್ಧೆ ಸಂಘರ್ಷಗಳು ವ್ಯಕ್ತಿ–ವ್ಯಕ್ತಿಗಳ ನಡುವೆ ಕನಿಷ್ಠ ಇದ್ದಿತು, ವ್ಯಕ್ತಿ–ಸಮುದಾಯ, ಸಮುದಾಯ–ಸಮುದಾಯ ಸಂಘರ್ಷಗಳಲ್ಲಿ ಆದಿಮಾನವ ಪಾಲ್ಗೊಳ್ಳುತ್ತಿದ್ದುದು ಅಪರೂಪ.

ಸಾಕುಪ್ರಾಣಿಗಳ ಸೇವೆಗೆ ಒಡೆಯನಾಗಿದ್ದ ಯುಕ್ತಶಾಲಿ ಮಾನವ ತನಗಿಂತ ಶಕ್ತಿಶಾಲಿ ಸಾಕುಪ್ರಾಣಿಗಳನ್ನು ಅಧೀನವಾಗಿಸಿಕೊಂಡ. ಅವುಗಳನ್ನು ಕ್ರೂರವಾಗಿ ನಡೆಸಿಕೊಂಡ. ಸಹಜೀವಿಗಳೊಡನೆ ಸ್ಪರ್ಧೆ ನಡೆಸಿ ಗೆದ್ದು ಅವರನ್ನೇ 'ಸಾಕು ಗುಲಾಮ'ರನ್ನಾಗಿಸಿಕೊಂಡಿದ್ದು ಪ್ರಾಣಿ ದಯೆಯಿಂದಲ್ಲ. ಬದಲಾಗಿ ಪ್ರಾಣಿ ಸೇವೆ, ಪ್ರಾಣಿ ಜಾಣ್ಮೆ ತನ್ನ ಗುರಿ ಸಾಧನೆಗೆ ಬಳಕೆ ಮಾಡಿಕೊಳ್ಳುವ ಅತಾಶೆಯಿಂದಾಗಿ. ಅಂತಹ ಯಜಮಾನನಲ್ಲಿ ಕರುಣೆ ಬರುವುದಾದರೂ ಹೇಗೆ? ಮಡಿಯಲು ಹೆದರಿ ದುಡಿಯುವ ಜೀತದಾಳಾಗಬೇಕಾಗಿತ್ತು.

ಯಂತ್ರವೇನೋ ಬಂತು. ಆಗಲಾದರೂ ಶ್ರಮಿಕನಿಗೆ ಬಿಡುವು ದೊರಕಿತೇ? ದೊರಕಿದ್ದು ಬಿಡುವಾಗಿರುವವರಿಗೆ ಲಾಭ; ಆ ಲಾಭದಿಂದ ಮತ್ತಷ್ಟು ಯಂತ್ರಗಳು. ಮಾನವರ ಕೈಲಿ ದುಡಿಸಿಕೊಂಡ ಗುಲಾಮನ ಯಜಮಾನ ಪ್ರಾಣಿಗಳ ಕೈಲಿ ದುಡಿಸಿಕೊಳ್ಳುವುದನ್ನು ಮುಂದುವರಿಸಿದ ಹಾಗೆ ಯಂತ್ರ ಚಾಲಕ ಗುಲಾಮನನ್ನೂ ರೂಪಿಸಿದ. ಈಗ ಶ್ರಮಿಕನಿಗೆ ಶ್ರಮದ ಆಯಾಸದೊಂದಿಗೆ ತನ್ನ ಸಹಜೀವಿಯನ್ನು, ನಿಸರ್ಗವನ್ನು ಮತ್ತು ತಾನೇ ಕಲ್ಪಿಸಿಕೊಂಡ ದೈವವನ್ನು ಓಲೈಸಿ ಅವರಿಗಿಂತ ಕೀಳಾಗಿ ಬಾಳುವ, ಆ ವೇದನೆಯನ್ನು ಮೂಕವಾಗಿ ಸಹಿಸುವ ಆಯಾಸ ಬೇರೆ.

ಅಸಹಾಯಕತೆ ಆವೇಶವನ್ನು ದಮನಿಸುತ್ತದೆ. ಆದರೂ ನಿರ್ನಾಮ ಮಾಡಲಾರದು, ಆದ್ದರಿಂದ ಪ್ರತಿಭಟನೆಗಳು ಶುರುವಾದವು, ಅಸಂಘಟಿತ ಗುಲಾಮ ಸಾಮೂಹಿಕವಾಗಿ ಮಾಲೀಕರ ವಿರುದ್ಧ ಬಂಡೆದ್ದರೂ ಬಂಡವಾಳಗಾರರ ಮುಂದೆ ಕ್ರಾಂತಿಯು ಕಾಂತಿಹೀನವಾಯಿತು. ಯಜಮಾನನು ದುಡಿಯುವವನಿಗೆ ಸೌಕರ್ಯವೊದಗಿಸಿದ್ದೂ ನಿಜ; ಅದನ್ನು ಮೀರಿದ ಶ್ರಮಿಕನ ದುಡಿಮೆಯ ಬಳಕೆಯ ತನ್ನ ಹಿರಿತನವನ್ನು ಕಾಯ್ದುಕೊಂಡದ್ದೇ ಅಲ್ಲದೆ ಸಾಂಘಿಕ / ಸಾಂಸ್ಥಿಕ ಆಡಳಿತ ವ್ಯವಸ್ಥೆಯನ್ನು ಜಾರಿಗೆ ತಂದ. ಉದ್ದಿಮೆ, ಸಂಸ್ಥೆಗಳ ಸಹಯೋಗದಿಂದ ತನಗೆ ದೊರೆಯುವ ಸೌಕರ್ಯ, ಘನತೆ ಕೊಂಚ ಉನ್ನತಿಗೆ ಪಡೆದ ಶ್ರಮಿಕ ಪ್ರಾರಂಭದಲ್ಲಿ ಆನಂದ ತುಂದಿಲನಾದ. ಆದರೆ ಕೊಡುವ ಸೌಕರ್ಯದ ಅನೇಕ ಪಟ್ಟು ಆದಾಯ ಬರುವಂತೆ ದುಡಿಯಬೇಕಾದ ನಿರ್ಬಂಧದ ಸಂಕೋಲೆ ಅವನಿಗರಿವಿಲ್ಲದೆ ಆತನನ್ನು ಬಂಧಿಸಿತು. ಆತನ ಶ್ರಮದ ಹೂಡಿಕೆಯಿಂದ ಬಂದ ಆದಾಯದ ಬಹುಪಾಲು ಸಂಸ್ಥೆಯ ತಳರಚನೆಯ ಹೆಚ್ಚಳಕ್ಕೆ, ಆಳುವವರ ಸೌಲಭ್ಯ ಪೂರೈಕೆಗೆ ಬಳಕೆಯಾಗಿ ಉಳಿದದ್ದೇ ಲಾಭವೆಂದು ಅದರಲ್ಲಿ ಒಂದು ಪಾಲನ್ನು ಎಲ್ಲ ದುಡಿವ ವರ್ಗಕ್ಕೆ ಹಂಚುವ ಪರಿಪಾಠ ರೂಪುಗೊಂಡಿರುವುದು ಇಂದಿನ ವಾಸ್ತವ.

ಅಸ್ತಿತ್ವಕ್ಕೆ ಹೋರಾಟ ಮಾಡುವಾಗ ನಿಸರ್ಗ ಒಡ್ಡಿದ್ದ ಸವಾಲು / ಅಸಹಾಯಕತೆ ಉಂಟುಮಾಡಿದ ವೇದನೆಗೆ ಮೀರಿದ ವೇದನೆ ಇದು. ಸಂಸ್ಥೆಯಿಂದ ಹೊರಬಂದ ವ್ಯಕ್ತಿಗೆ ತನ್ನ ಶ್ರಮ ಹಾಗೂ ಕೌಶಲಗಳ ನಗದೀಕರಣ ಮಾಡಿಕೊಂಡು ಬಾಳಲು ಅವಕಾಶವಿಲ್ಲ. ಸ್ವತಂತ್ರವಾಗಿ ಆತ ತನ್ನ ಶ್ರಮ / ಕೌಶಲಗಳನ್ನು ನಗದೀಕರಿಸಿಕೊಳ್ಳುವ ಮಾರುಕಟ್ಟೆ ವ್ಯವಸ್ಥೆಯೂ ಇಲ್ಲ; ಸಂಸ್ಥೆಯ ಅಂಗವಾಗಿದ್ದಾಗ ಇರುವ ಮಾನ್ಯತೆಯೂ ಇರದು. ಊಳಿಗಮಾನ್ಯ ಯಜಮಾನನ ವಿರುದ್ಧ ಹೋರಾಟ / ಗೆರಿಲ್ಲಾ ಸಮರ ಕೊಂಚವಾದರೂ ಸಾಧ್ಯವಿತ್ತು. ಆದರೆ ಸಾಂಸ್ಥಿಕ ವ್ಯವಸ್ಥೆಗೆ ನಿಯಂತ್ರಿಸುವ ಕೈಗಳಿವೆ. ಆ ಕೈಗಳಿಗೆ ಬಲ ನೀಡುವ ವ್ಯವಸ್ಥೆಯ ದೋಷವನ್ನು ಯಾರೂ ಬೆರಳು ಮಾಡಿ ತೋರಿಸಲಾಗದಷ್ಟು ಸಂಕೀರ್ಣ! ಇದೊಂದು ರೀತಿ ಅಗೋಚರ ಶರೀರ ವ್ಯವಸ್ಥೆಯೊಂದಿಗೆ ಬಡಿದಾಟ. ಸಂಘಟಿತ ಹೋರಾಟವೂ ಸಂಕಟ ನಿವಾರಣೆ ಮಾಡಲಾರದಷ್ಟು ಅಸಹಾಯಕ ಪತ್ರಕರ್ತರಲ್ಲಿ ಪತ್ರಿಕಾ ವ್ಯವಸ್ಥೆಯ ಅಂಗವಾಗದೆ ಸ್ವತಂತ್ರವಾಗಿ ದುಡಿಯುವ ಹವ್ಯಾಸಿ ಪತ್ರಕರ್ತರು ಇದ್ದಾರೆ. ಆದರೆ ಶ್ರಮ ಕೌಶಲಗಳ ಹವ್ಯಾಸಿ ಬದುಕನ್ನು ಶ್ರಮಿಕರು ಬಾಳಲಾದೀತೆ?

ಹೊಳೆಯ ತನಕ ಓಟ; ದೊರೆಯ ತನಕ ದೂರು – ಎಂಬ ಗಾದೆ ಇದೆ. ಶ್ರಮಿಕವರ್ಗ ದೂರು ಒಯ್ಯುವುದು ನ್ಯಾಯಾಲಯದ ತನಕ. ಆದರೆ ನ್ಯಾಯಾಂಗ ವ್ಯವಸ್ಥೆ ತನ್ನ ಸತ್ಯಸಂಧತೆಯನ್ನು ರುಜುವಾತು ಮಾಡಲು ಬೇಕಾದ ಹಣ/ಶ್ರಮ/ವೇಳೆ ಎಲ್ಲವೂ ಅಸಹಾಯಕ ಶ್ರಮಿಕನ ಕೈಗೆ ಎಟುಕುವಂತಹುದಲ್ಲ. ಇನ್ನು ಶಾಸಕಾಂಗದತ್ತ ಕಣ್ಣುಹಾಯಿಸಿದರೆ ಸರ್ಕಾರವೇ ಒಂದು ಸಾಂಸ್ಥಿಕ ವ್ಯವಸ್ಥೆ. ಅಲ್ಲಿಯ ಸಿಬ್ಬಂದಿಯನ್ನೇ ಸಂತೃಪ್ತಿಗೊಳಿಸದ ಸರ್ಕಾರ ಶ್ರಮಿಕರ ಅಹವಾಲಿಗೆ ಕಿವಿ ನೀಡೀತೆ? ನ್ಯಾಯ ಒದಗಿಸೀತೇ? ಈ ಗೊಂದಲಗಳಿಗೆ ಹೊಸ ಆಯಾಮ ನೀಡುವ ಹಾಗೆ ಶೀಘ್ರಗತಿಯಿಂದ ಬರಿದಾಗುತ್ತಿರುವ ಭೂಮಿಯ ಸಂಪನ್ಮೂಲಗಳು ಹಾಗೂ ಹೆಚ್ಚುತ್ತಿರುವ ಮಾಲಿನ್ಯ – ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿವೆ. ಈಗ ಹೊಸದೊಂದು ಸಮಸ್ಯೆ ಈ ಜಟಿಲತೆಗೆ ಕಲಶ ಇರಿಸಿದೆ. ಚಲಾವಣೆಯಲ್ಲಿದ್ದ ಹಣವೆಲ್ಲಾ ಚಿನ್ನವಾಗಿ, ನಗದಾಗಿ ಬ್ಯಾಂಕುಗಳಲ್ಲಿ ಹೆಪ್ಪುಗಟ್ಟಿದೆ. ನಗದಿನ ಕೊರತೆಯಾದಾಗ ಹೆಚ್ಚು ನಾಣ್ಯ ಚಲಾವಣೆಗೆ ತರುವ ಪ್ರಯತ್ನಗಳೂ ಕಪ್ಪು ಹಣ ಹೆಚ್ಚಿಸಿವೆಯೇ ವಿನಾ ಪರಿಹಾರ ದೊರೆತಿಲ್ಲ.

ಸುಡುವ ಚಿಂತೆಯಲ್ಲಿ ಸುಖಭೋಗ ಸಾಮಗ್ರಿಗಳೂ ಹಿತ ನೀಡಲಾರವು. ವಿಹಿತ ಸಾಮಾಜಿಕ ವ್ಯವಸ್ಥೆ ಹಾಗೂ ವಿಚಕ್ಷಣೆಯ ನಿಸರ್ಗ ಸಂಪನ್ಮೂಲ ಬಳಕೆ ಇಲ್ಲದೆ, ಗಳಿಕೆಯನ್ನು ಐಷಾರಾಮಿ ವರ್ಗದವರೇ ಹೀರಿದಾಗ, ಅಸಹಾಯಕತೆಯ ಆಯಾಸದೊಂದಿಗೆ, ಭರವಸೆಯ ಕೊರತೆಯ ಆಯಾಸದಲ್ಲಿ ಬಳಲುತ್ತಿರುವ ಶ್ರಮಿಕನೆಂಬ ಬೇರಿಗೆ ಹೊರೆಯಾಗಿಯೇ ಬದುಕುವವರಿಗೆ ಸೇರಿದ ಲೇಖಕನ ಲೇಖನಿಯ ಸಲಾಮ್.

ನಿಸರ್ಗವೇನೋ (ಕೊಂಚ ಅಪವಾದವನ್ನು ಹೊರತು ಪಡಿಸಿ) ಎಲ್ಲರಿಗೂ ಸಮಾನ ಶಕ್ತಿಸಾಮರ್ಥ್ಯ ನೀಡಿ ಜನಿಸುವಂತೆ ಮಾಡಿದೆ. ಹುಟ್ಟಿನಿಂದಲೇ, ಓದುವಾಗಲೇ, ದುಡಿಯುವ ಮುನ್ನವೇ ಸಿರಿವಂತಿಕೆ ಬಡತನಗಳನ್ನು ಒಪ್ಪಿ ಸಾಗಲೇಬೇಕಾದ ವ್ಯವಸ್ಥೆಯ ಭಾಗವಾಗಿ ನಿಟ್ಟುಸಿರು ಬಿಡುವ, ಮೆರೆದಾಡುವವರ ಮಧ್ಯದಲ್ಲೇ ತಿರಿದಾಡುವ, ಹುಟ್ಟುವ ಮೊದಲೇ ಅಂತಸ್ತು ನಿರ್ಧಾರವಾಗುವ ನಿಸ್ಸಹಾಯಕ ಬೇರುಗಳೇ, ನಿಮಗಿದೋ ವಂದನೆ.

**ಪ್ರೊ|| ಎಮ್. ಆರ್. ನಾಗರಾಜು**
ಎಫ್–೩, ಎಸ್‌ಎಫ್‌ಎಸ್ ನಿವಾಸ, ೭ನೇ 'ಬಿ' ಅಡ್ಡರಸ್ತೆ
ಯಲಹಂಕ ಉಪನಗರ, ಬೆಂಗಳೂರು – ೫೬೦ ೦೬೪



**ಅಭಿನಂದನೆಗಳು** . . . . . . . . . . . . . . . . . .

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಕೊಡುವ 'ರನ್ನ ಹಳೆಗನ್ನಡ' ಪ್ರಶಸ್ತಿಯು ಈ ಬಾರಿ ಸಾಹಿತಿ ಡಾ|| ಎಂ. ಎಂ. ಕಲಬುರ್ಗಿಯವರಿಗೆ ಲಭಿಸಿದೆ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದಿಂದ ಅಭಿನಂದನೆಗಳು



# ಯುರೇನಸ್ ಮತ್ತು ನೆಪ್ಚೂನ್

ಸಾಮಾನ್ಯವಾಗಿ ಬರಿಗಣ್ಣಿಗೆ ಸುಲಭವಾಗಿ ಗೋಚರಿಸುವ ಗ್ರಹಗಳು ಶುಕ್ರ, ಗುರು, ಮಂಗಳ ಮತ್ತು ಶನಿ. ಕೆಲವೊಂದು ಸಂದರ್ಭಗಳಲ್ಲಿ ಅಂದರೆ ಸೂರ್ಯನಿಂದ ಗರಿಷ್ಠ ದೂರದಲ್ಲಿರುವಾಗ ಬುಧ ಕೂಡ ಬರಿಗಣ್ಣಿಗೆ ಕಾಣುವುದು. ಇನ್ನೂ ದೂರದ ಯುರೇನಸ್ ಮತ್ತು ನೆಪ್ಚೂನ್‌ಗಳನ್ನು ಹುಡುಕುವುದು ಸುಲಭವಲ್ಲ. ಅವು ಬರಿಗಣ್ಣಿಗೆ ಕಾಣುವುದಿಲ್ಲ; ದುರ್ಬೀನು, ದೂರದರ್ಶಕಗಳಿಂದಲೂ ಚುಕ್ಕೆಯಂತೆಯೇ ಕಾಣುತ್ತವೆ. ಈ ತಿಂಗಳಲ್ಲಿ ಇವುಗಳನ್ನು ಹುಡುಕಲು ಸುಲಭ ಉಪಾಯಗಳಿವೆ.

ಸಂಜೆಯ ಆಕಾಶದಲ್ಲಿ ಪ್ರಕಾಶಮಾನವಾಗಿ ಕಾಣುವ ಗ್ರಹವೇ ಶುಕ್ರ. ಇದನ್ನು ದುರ್ಬೀನಿನ ಮೂಲಕ ವೀಕ್ಷಿಸಿ. ಇದರ ಸನಿಹದಲ್ಲಿಯೇ ಕ್ಷೀಣವಾದ ಚುಕ್ಕೆಯೊಂದು ಕಾಣುತ್ತದೆ. ಅದೇ ಯುರೇನಸ್ ಎಂದು ಖಚಿತಪಡಿಸಿಕೊಳ್ಳುವುದು ಹೇಗೆ? ಪ್ರತಿದಿನವೂ ಗಮನಿಸಿ. ೪ನೇ ತಾರೀಖು ಅದು ಶುಕ್ರಕ್ಕೆ ತೀರಾ ಸನಿಹಕ್ಕೆ ಬಂದು ಪುನಃ ದೂರ ಸರಿಯತೊಡಗುತ್ತದೆ. ಸನಿಹ ಎಂದರೆ ಅವೆರಡರ ನಡುವಿನ ಕೋನ – ಇದು ಕೇವಲ ೦.೧ ಡಿಗ್ರಿಯಷ್ಟು (ಅಂದರೆ ಪೂರ್ಣ ಚಂದ್ರನ ಅಗಲದ ಮೂರನೆಯ ಒಂದು ಭಾಗದಷ್ಟು) ಕಡಿಮೆಯಾಗುತ್ತದೆ. ಮುಂದೆ ಇವೆರಡೂ ದೂರ ಸರಿದು ಹುಡುಕಲು ಕಷ್ಟವಾಗುತ್ತದೆ. ಆದರೆ, ೧೧ರಂದು ಇನ್ನೂ ಒಂದು ಅವಕಾಶ ಇದೆ. ಮಂಗಳಗ್ರಹದಿಂದ ೧/೪ ಡಿಗ್ರಿ ಅಂತರದಲ್ಲಿ (ಅಂದರೆ ಪೂರ್ಣ ಚಂದ್ರನ ಅಗಲದ ಅರ್ಧ) ಕಾಣುತ್ತದೆ. ಆದ್ದರಿಂದ ಮಂಗಳವನ್ನೂ ದಿನವೂ ಗಮನಿಸುತ್ತಿದ್ದರೆ ಹೊಸದಾಗಿ ಬಂದು ಜೊತೆಗೂಡಿ ದೂರ ಸರಿಯುವ ಈ ಚುಕ್ಕೆಯನ್ನು ಗಮನಿಸಬಹುದು. ಒಳ್ಳೆಯ ಕ್ಯಾಮೆರಾ ಇದ್ದರೆ ಅದು ಬಿಲ್ಲೆಯಂತೆ ಕಾಣುತ್ತದೆ; ಚುಕ್ಕೆಯಲ್ಲ ಎಂದು ಚಿತ್ರದಿಂದ ತಿಳಿಯುತ್ತದೆ.

ಇದೇ ರೀತಿ ನೆಪ್ಚೂನ್‌ಅನ್ನು ಗುರುತಿಸಲು ಒಂದು ಒಳ್ಳೆಯ ಅವಕಾಶವಿದೆ. ೧೮ರ ಮುಂಜಾವು ಬುಧಗ್ರಹವನ್ನು ಹುಡುಕಿ. ಬಾಲಚಂದ್ರನ ಸಮೀಪವೇ ಇರುತ್ತದೆ. ೧೯ರಂದು ಪುನಃ ಬುಧಗ್ರಹವನ್ನು ಹುಡುಕಿ. ಚಂದ್ರ ಅದಕ್ಕೆ ಇನ್ನೂ ಹತ್ತಿರವಾಗಿರುತ್ತದೆ. ಚಂದ್ರನಿಗೂ ಬುಧಗ್ರಹಕ್ಕೂ ನಡುವೆ ಕ್ಷೀಣವಾದ ಚುಕ್ಕೆಯೊಂದಿರುತ್ತದೆ. ಅದೇ ನೆಪ್ಚೂನ್. ದುರ್ಬೀನಿನಲ್ಲಿ ಕಾಣಬಹುದು. ಕ್ಯಾಮೆರಾದಿಂದ ಎಕ್ಸ್‌ಪೋಷರ್ (ಹತ್ತಿರದ) ಚಿತ್ರ ತೆಗೆದರೆ ದಾಖಲಾಗುವುದು.



*22ರ ಸಂಜೆ – ಶುಕ್ರ, ಚಂದ್ರ, ಮಂಗಳ*

**ಅತಿ ಚಿಕ್ಕ ಚಂದ್ರ ?!**

ಈ ತಿಂಗಳ ಹುಣ್ಣಿಮೆಯಂದು ಚಂದ್ರ-ಭೂಮಿ ನಡುವಿನ ದೂರ ಗರಿಷ್ಠವಿರುತ್ತದೆ. ಅಂದರೆ ಸಾಮಾನ್ಯ ಹುಣ್ಣಿಮೆಗಿಂತ ಈ ಹುಣ್ಣಿಮೆಯ ಚಂದ್ರ ಚಿಕ್ಕದಿರುತ್ತದೆ. ಆದರೆ, ಬರಿಗಣ್ಣಿನಿಂದ ಅದನ್ನು ಗುರುತಿಸಲು ಸಾಧ್ಯವೇ? ಪ್ರಯತ್ನಿಸಿ.

ಸಂಜೆ ಪಶ್ಚಿಮದಲ್ಲಿ ಶುಕ್ರ ಮತ್ತು ಮಂಗಳ, ಪೂರ್ವದಲ್ಲಿ ಗುರುಗ್ರಹ ಕಾಣುವುದು. ಮಧ್ಯರಾತ್ರಿಗೆ ಉದಯಿಸುವ ಶನಿಗ್ರಹವನ್ನು ಮುಂಜಾವಿನಲ್ಲಿ ಕಾಣಬಹುದು. ೧೨ ಮತ್ತು ೧೩ರಂದು ಚಂದ್ರ ಶನಿಗ್ರಹದ ಸಮೀಪದಲ್ಲಿಯೇ ಕಾಣುವುದು.

ಈ ತಿಂಗಳ ೨೧ರಂದು ವಸಂತ ವಿಷುವ ಅಂದರೆ ಹಗಲು ರಾತ್ರಿಗಳ ಅವಧಿ ಸರಿಸಮ. ಚಳಿಗಾಲ ಮುಗಿಯಿತು. ಬೇಸಿಗೆ ಆರಂಭವಾಯಿತು ಎಂಬುದರ ಸೂಚನೆ. ಈ ವರ್ಷದಲ್ಲಿ ಅದು ಯುಗಾದಿ ಎಂಬ ಹೆಸರಿಗೆ ಅನ್ವರ್ಥವಾಗಿದೆ. ಏಕೆಂದರೆ ೨೦ರಂದು ಅಮಾವಾಸ್ಯೆ. ೨೧ರ ಪಾಡ್ಯವೇ ಚಾಂದ್ರಮಾನ ಹೊಸವರ್ಷದ ಆರಂಭ. ೧೯ರಂದು ಚಂದ್ರ–ಭೂಮಿ ನಡುವಿನ ದೂರ ಕನಿಷ್ಠವಾಗಿರುವುದರಿಂದ ೨೦ರ ಅಮಾವಾಸ್ಯೆಯ ಉಬ್ಬರದ ಜೋರನ್ನು (ಪ್ರತಿ ಅಮಾವಾಸ್ಯೆಗಿಂತ ಹೆಚ್ಚು) ಕಡಲತೀರದ ವಾಸಿಗಳು ಗಮನಿಸಬಹುದು. ೨೦ರಂದು ಸೂರ್ಯಗ್ರಹಣವೂ ಇದೆ; ಭಾರತಕ್ಕೆ ಕಾಣುವುದಿಲ್ಲ.

ಭಾರತ ಸರಕಾರ ಗೊತ್ತುಮಾಡಿರುವ ರಾಷ್ಟ್ರೀಯ ಪಂಚಾಂಗವೂ ಮಾರ್ಚ್ ೨೧ರಿಂದಲೇ ವರ್ಷದ ಗಣನೆಯನ್ನು ಆರಂಭಿಸಿದೆ. ವಸಂತವಿಷುವ ಇಲ್ಲಿ ಹೆಗ್ಗುರುತಾಗಿದೆ.

ನಕ್ಷೆಯನ್ನು ಸಂಜೆ ೭ ಗಂಟೆಗೆ ತಯಾರಿಸಲಾಗಿದೆ. ಪ್ರಮುಖವಾಗಿ ಕಾಣುವ ನಕ್ಷತ್ರಪುಂಜಗಳ ಹೆಸರು ಗಳಿವೆ. ಸುಲಭವಾಗಿ ಗುರುತಿಸಬಹುದಾದ ನಕ್ಷತ್ರಗಳು ಲುಬ್ಧಕ (ಸಿರಿಯಸ್) – ಅತಿ ಹೆಚ್ಚು ಪ್ರಕಾಶಮಾನವಾದದ್ದು ಮತ್ತು ಅಗಸ್ತ್ಯ (ಕೆನೋಪಸ್) – ಪ್ರಕಾಶದಲ್ಲಿ ಎರಡನೆಯ ಸ್ಥಾನ ಪಡೆದಿರುವುದು. ನೆತ್ತಿಯ ಮೇಲೆ ಇರುವ ಪ್ರಕಾಶಮಾನವಾದ ಪುಂಜವೇ ಮಹಾವ್ಯಾಧ (ಒರೈಯನ್). ತುಸು ಪಶ್ಚಿಮಕ್ಕೆ ವೃಷಭದ ಗುಚ್ಛ, ತುಸು ಉತ್ತರಕ್ಕೆ ವಿಜಯಸಾರಥಿ (ಆರಿಗಾ)ಯ ೫ ನಕ್ಷತ್ರಗಳು ಕಾಣುವುವು. ಅಗಸ್ತ್ಯದಿಂದ ಉತ್ತರಕ್ಕೆ ಲುಬ್ಧಕದ ಮೂಲಕ ಸಾಗುವ ಆಕಾಶಗಂಗೆಯ ಹರಿವನ್ನು ಗುರುತಿಸಲು ಚಂದ್ರ ನಿಲ್ಲದ ರಾತ್ರಿಗಳೇ ಬೇಕು. ಹಾಗೆಯೇ ಮುಂದುವರೆಯುವ ಈ ಗಂಗೆ ಉತ್ತರದ ಪಾರ್ಥ (ಪರ್ಸಿಯುಸ್) ಮತ್ತು ಕುಂತಿ (ಕೆಸಿಯೋಪಿಯಾ)ಯ ಮೂಲಕ ಹರಿಯುವುದು. ಒಟ್ಟಿನಲ್ಲಿ ಮಾರ್ಚ್ ಆಕಾಶ ಪ್ರಕಾಶಮಾನವಾದ ಚುಕ್ಕೆಗಳಿಂದ ತುಂಬಿರುವುದರಿಂದ ನಭೋ ವೀಕ್ಷಕರಿಗೆ ಕಣ್ತುಂಬ ಕೆಲಸ ಕೊಡಲಿದೆ.

**ಮಾರ್ಚ್ ತಿಂಗಳ ಖಗೋಳ ದಿನಚರಿ** (* ಛಾಯಾಗ್ರಹಣಕ್ಕೆ ಸದವಕಾಶ)

- ೩ ಗುರು–ಚಂದ್ರ ನಡುವೆ ೭ ಡಿಗ್ರಿ ಅಂತರ *
- ೪ ಶುಕ್ರ–ಯುರೇನಸ್ ೦.೧ ಡಿಗ್ರಿ ಅಂತರದಲ್ಲಿ*
- ೫ ಚಂದ್ರ–ಭೂಮಿ ನಡುವೆ ಗರಿಷ್ಠ ದೂರ; ಹುಣ್ಣಿಮೆ ೨೩:೩೫ಕ್ಕೆ
- ೧೧ ಮಂಗಳ–ಯುರೇನಸ್ ನಡುವೆ ೦.೨೫ ಡಿಗ್ರಿ ಅಂತರ*
- ೧೨ ಮತ್ತು ೧೩ ಶನಿ–ಚಂದ್ರ ನಡುವೆ ೬ ಡಿಗ್ರಿ ಅಂತರ (ಮುಂಜಾವು)
- ೧೩ ಚಾಂದ್ರಮಾಸದ ಕೊನೆಯ ಪಾದ
- ೧೪ ಶನಿಗ್ರಹದ ಹಿನ್ನಡೆ ಆರಂಭ
- ೧೯ ಬುಧ–ಚಂದ್ರ ನಡುವೆ ೨ ಡಿಗ್ರಿ ಅಂತರ (ಮುಂಜಾವು)*
- ೨೦ ಅಮಾವಾಸ್ಯೆ ೧೫:೦೬ಕ್ಕೆ; ಸೂರ್ಯಗ್ರಹಣ ಭಾರತಕ್ಕೆ ಕಾಣುವುದಿಲ್ಲ.
- ೨೧ ವಸಂತ ವಿಷುವ ೦೪:೧೫ಕ್ಕೆ; ಮಂಗಳ–ಚಂದ್ರ ೪ ಡಿಗ್ರಿ ಅಂತರದಲ್ಲಿ*
- ೨೨ ಸಂಜೆ ಶುಕ್ರ – ಚಂದ್ರ – ಮಂಗಳ ನಡುವೆ ೪ ಡಿಗ್ರಿ ಅಂತರ*
- ೨೭ ಚಾಂದ್ರಮಾಸದ ಮೊದಲಪಾದ
- ೩೦ ಗುರು–ಚಂದ್ರ ನಡುವೆ ೫ ಡಿಗ್ರಿ ಅಂತರ

**ಡಾ॥ ಬಿ. ಎಸ್. ಶೈಲಜಾ,** ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂ. – ೧

# ಆರ್. ಕೆ. ಲಕ್ಷ್ಮಣ್ ನೆನಪುಗಳು

ಆರಡಿ ಎತ್ತರ, ಸುಮಾರು ನೂರಇಪ್ಪತ್ತು ಕೆ. ಜಿ. ತೂಕದ ಒಬ್ಬ ಪೈಲ್ವಾನ... ಕೈಯಲ್ಲಿ ಡಂಬೆಲ್ ಹಿಡಿದು ವ್ಯಾಯಾಮಕ್ಕೆ ಸಿದ್ಧನಾಗುತ್ತಿದ್ದಾನೆ. ಅವನ ಹತ್ತಿರ ನಿಂತು ಒಬ್ಬ ನರಪೇತಲ ಆಸಾಮಿ ಕೈಯಲ್ಲೊಂದು ಪುಟ್ಟ ಫೌಂಟನ್ ಪೆನ್ ತೋರಿಸುತ್ತ "ಸಾರ್, ಸ್ವಲ್ಪ ಇದರ ಕ್ಯಾಪ್ ತೆಗೆದುಕೊಡಿ" ಎಂದು ಕೇಳುತ್ತಿದ್ದಾನೆ. ಪೈಲ್ವಾನ್ ಅದನ್ನು ತೆಗೆಯಲು 'ತಿನಿಕಿ ತಿನಿಕಿ' ಸೋತು ಕೆಟ್ಟ ಮುಖ ಹಾಕಿದ್ದಾನೆ... ಇದೊಂದು ವ್ಯಂಗ್ಯಚಿತ್ರ. ಡಾ॥ ಶಿವರಾಂ ಅವರ 'ಕೊರವಂಜಿ'ಯಲ್ಲಿನ ಬಹು ಪ್ರಸಿದ್ಧ ವ್ಯಂಗ್ಯಚಿತ್ರ ಅದನ್ನು ರಚಿಸಿದ್ದವರು ಆರ್. ಕೆ. ಲಕ್ಷ್ಮಣ್...

೧೯೪೦ರ ದಶಕದಲ್ಲಿ ಆರ್. ಕೆ. ಲಕ್ಷ್ಮಣ್‌ರ ಚಿತ್ರಗಳು ಮಾಮೂಲಾಗಿ ಕೊರವಂಜಿಯಲ್ಲಿ ಬರುತ್ತಿದ್ದವು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ನಾವು ಕೆಲವರು ಅವರ ಭಾಗ್ಯಶಾಲಿ ಸಹಪಾಠಿಗಳಾಗಿದ್ದ ಕಾಲ – ಕೇವಲ 'ಕೊರವಂಜಿ'ಯಲ್ಲಿ ಮಾತ್ರವಲ್ಲ, ಅವರು ನಮ್ಮ ಯೂನಿವರ್ಸಿಟಿ ಯೂನಿಯನ್‌ನ ವಾರ್ಷಿಕ ಸಂಚಿಕೆಯಲ್ಲಿ ಹತ್ತಾರು ಚಿತ್ರಗಳನ್ನು ರಚಿಸಿದ್ದರು. ನಮ್ಮ ಅಂದಿನ ಉಪಾಧ್ಯಾಯ ವೃಂದದಲ್ಲಿ ಲಕ್ಷ್ಮಣ್ ಅವರನ್ನು ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ಚಿರಂತನ ವ್ಯಕ್ತಿ ಆರ್. ಕೆ. ಲಕ್ಷ್ಮಣ್ ಈಗ ನೆನಪಿನ ಲೋಕಕ್ಕೆ ಸೇರಿಹೋಗಿದ್ದಾರೆ. ಅವರ ಅನ್ಯಾದೃಶ ಕಲಾತ್ಮಕತೆಯ ಬಗ್ಗೆ ನೂರಾರು ಜನರು ತಮ್ಮ ನೆನಪುಗಳನ್ನು ದಾಖಲಿಸುತ್ತಿದ್ದಾರೆ.

ನನಗೆ ಲಕ್ಷ್ಮಣ್ ನೆನಪಾಗುವುದು ಅವರ ತುಂಟನಗೆ ಮುಖ, ಕಪ್ಪು ಕನ್ನಡಕಧಾರಿ, always bubling with life... ನನ್ನ ಆ ಕಾಲದಲ್ಲಿ ಬಹುಶಃ ನಮ್ಮ ಕಾಲೇಜು ಗುಂಪಿನಲ್ಲಿ ಅತ್ಯಂತ ಸ್ನೇಹಮಯ ವ್ಯಕ್ತಿ... ಅವರು ಹುಬ್ಬು ಗಂಟಿಕ್ಕಿದ್ದನ್ನು ನಾನೆಂದೂ ನೋಡಿದ ನೆನಪಿಲ್ಲ.

ಒಂದು ಚಿರಸ್ಮರಣೀಯ ಸಂದರ್ಭ ನೆನಪಾಗುತ್ತದೆ. ಅಂದು ಬೆಳಿಗ್ಗೆ ಎರಡನೆಯ ಬಿ.ಎ. ತರಗತಿಯ ಕನ್ನಡ ಕ್ಲಾಸು – ವಿ. ಸೀ. ಅವರ 'ಅಶ್ವತ್ಥಾಮನ್' ಕುರಿತ ಕ್ಲಾಸು ಅದು. ಪ್ರಸಿದ್ಧ ಸೀನಿಯರ್ ಬಿ. ಎ. ಹಾಲ್ ಕಿಕ್ಕಿರಿದು ತುಂಬಿರುತ್ತಿತ್ತು. ಲಕ್ಷ್ಮಣ್ ಕಾರಿಡಾರ್‌ನಲ್ಲಿ ಒಂದು ವಿದ್ಯಾರ್ಥಿ ಗುಂಪಿನ ನಡುವೆ ನಿಂತು ಭಾವುಕತೆಯಿಂದ ಏನೋ ಹೇಳುತ್ತಿದ್ದರು. ಕುತೂಹಲ ಕೆರಳಿ ನಾನು ಮತ್ತು ನನ್ನ ಸಹಪಾಠಿ ದಿವಂಗತ ಎಸ್. ಎನ್. ಶಂಕರ್ ಹೊರಕ್ಕೆ ಹೋಗಿ ಗುಂಪಿನಲ್ಲಿ ಸೇರಿದೆವು. ಅಂದಿನ ದಿನ ಪತ್ರಿಕೆಯಲ್ಲಿ ಅಮೆರಿಕನ್ ಸೈನ್ಯ ಹಿರೋಷಿಮ ಮೇಲೆ ಅಣುಬಾಂಬು ಹಾಕಿ ಇಡೀ ನಗರ ರುದ್ರ, ಭೀಕರ ಸರ್ವನಾಶಕ್ಕೀಡಾದ ಘೋರ ಸುದ್ದಿ ಪ್ರಕಟವಾಗಿತ್ತು. ನಮ್ಮಲ್ಲಿ ಬಹುತೇಕ ಮಂದಿಗೆ 'ಅಣುಬಾಂಬಾಗಲಿ ಯುದ್ಧವಿಮಾನವಾಗಲಿ ಅವುಗಳ ಬಗ್ಗೆ – ಒಂದಿಷ್ಟೂ ಮಾಹಿತಿ ಇರಲಿಲ್ಲ. ಲಕ್ಷ್ಮಣ್ ಕಾರಿಡಾರ್‌ನಲ್ಲಿದ್ದ ಒಂದು ಬೆಂಚಿನ ಮೇಲೆ ಕುಳಿತು ಒಂದು ದೊಡ್ಡ ಕಾಗದದ ಹಾಳೆಯ ಮೇಲೆ ಚಿತ್ರಗಳನ್ನು ರೇಖಿಸಿ ಹಿರೋಷಿಮ ಮೇಲೆ ಬಿದ್ದ ಬಾಂಬಿನ ಬಗ್ಗೆ ಹತ್ತಾರು ವೈಜ್ಞಾನಿಕ ವಿವರಗಳನ್ನು ವರ್ಣಿಸಿದ್ದರು. ಅಷ್ಟು ಹೊತ್ತಿಗೆ ವಿ. ಸೀ. ಅವರ ತರಗತಿಯಿಂದ ಮತ್ತೆ ಹತ್ತಾರು ಮಂದಿ ಮೆಲ್ಲಗೆ ಇಳಿದು ಗುಂಪಾಗಿ ಬಂದು ಸೇರಿದ್ದರು. ...ಸುಮಾರು ೩೦ ನಿಮಿಷಗಳ 'ಭಾಷಣ'ದ ನಂತರ ಲಕ್ಷ್ಮಣ್ 'ಈ ಬಾಂಬು ಸ್ಫೋಟದ ಘನಘೋರ effects ಏನೇನಾಗಿದೆ ಎಂಬುದು ಇನ್ನೂ ವಿವರ ವಿವರವಾಗಿ ಪತ್ರಿಕೆಯಲ್ಲಿ ಬರುತ್ತಿದೆ. ಓದಿ ನೋಡಿ' ಎಂದು ಹೇಳಿ ಕಾರಿಡಾರ್‌ನಲ್ಲಿ ಹೊರಟಾಗ ನಾವು ಹಲವು ಮಂದಿ ವಾನರ ಸೈನ್ಯದಂತೆ ಅವರನ್ನು ಹಿಂಬಾಲಿಸಿದ ನೆನಪಾಗುತ್ತಿದೆ.



ಇದೊಂದೇ ಸೀರೆ ಇರೋದು ಕೊಂಡುಕೊಂಡು ಬಿಡೀಮ್ಮಾ : ನಿಮ್ಮ ಪಕ್ಕದ್ಮನೇ ಪಾರ್ವತಮ್ಮನವರು ಆಗಲೇ ಬಂದು ನೋಡ್ಕೊಂಡು ಹೋದರು.




ವಿದ್ಯಾರ್ಥಿಯಾಗಿದ್ದಾಗಲೆ ಅವರೊಬ್ಬ ಅಸಾಧಾರಣ ಮೇಧಾವಿ. ಹಾಗೆಂದು ಎಂದೂ ಅವರು ಕೊಬ್ಬಿ ಮೆರೆದವರಲ್ಲ. ಸಹಪಾಠಿಗಳೊಂದಿಗೆ ಅತ್ಯಂತ ಸಲುಗೆ, ಪ್ರೀತಿವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದರು. ಯಾರನ್ನೂ ಕಡೆಗಣಿಸಿ ನುಡಿದವರಲ್ಲ. ಅವರು ಕಾಲೇಜಿಗೆ ಬರುವಾಗ ಶುಭ್ರ ಸರಳ ಉಡುಪಿನಲ್ಲಿರುತ್ತಿದ್ದರು. ಒಮ್ಮೊಮ್ಮೆ ಅವರು ತಮ್ಮ ಜಗದ್ವಿಖ್ಯಾತ ಸೋದರ ಆರ್. ಕೆ. ನಾರಾಯಣ್‌ರಂತೆಯೇ ದಟ್ಟಿಪಂಚೆ, ಅರ್ಧ ತೋಳಿನ ಬಿಳಿ ಶರಟು ಹಾಕಿರುತ್ತಿದ್ದರು.

ಅವರೊಬ್ಬ ಜಗದ್ವಿಖ್ಯಾತ ವ್ಯಂಗ್ಯಚಿತ್ರಕಾರರೆಂದೂ, ಅವರು ವ್ಯಂಗ್ಯಚಿತ್ರವನ್ನು ಅಧ್ಯುತೋನ್ನತ ಕಲೆಯ ಮಟ್ಟಕ್ಕೇರಿಸಿದರೆಂದೂ... ಇತ್ಯಾದಿ ಕೋಟ್ಯಂತರ ಮಂದಿ ಹಾಡಿಹೊಗಳುತ್ತಿದ್ದಾರೆ; ಅವರ ಅನನ್ಯ ಹಾಸ್ಯಪ್ರಜ್ಞೆ, ಸಮಯಸ್ಫೂರ್ತಿ, ಇವೆಲ್ಲವೂ ಸರ್ವವಿದಿತ ಸಂಗತಿಗಳಾದರೂ ಅವರ ಒಂದೊಂದು ಮಾತಿನಲ್ಲಿಯೂ ಗಂಭೀರ ಚಿಂತನೆ ಬೆರೆತಿರುತ್ತಿತ್ತು. ಒಮ್ಮೆ ಯೂನಿಯನ್ ಚುನಾವಣೆಯ ರಂಪದ ಕಾಲದಲ್ಲಿ ಒಬ್ಬ ಹುರಿಯಾಳು ಭೀಕರ ಭಾಷಣ ಮಾಡುತ್ತ, "ಸ್ವಾಮಿ... ಅವನಿಗೆ, ಓಟು ಕೊಡ ಬೇಡಿ... ಅವನು 'ಡಿಬಾಚರಿ'..." ಎಂದು ಒರಲಿದ. ಆ ಮಾತು ಲಕ್ಷ್ಮಣ್ ಕಿವಿಗೆ ಬಿದ್ದಾಗ ಅವನ ಪ್ರತಿಕ್ರಿಯೆ... ಕೈಯನ್ನು ತಲೆಯ ಮೇಲಿಟ್ಟುಕೊಂಡು 'ಓ ಮೈ ಗಾಡ್' ಎಂದಾಗ ನನಗೆ ನೆನಪಾದುದು ರಾಮಾಯಣ ದಲ್ಲಿನ ಮಾರೀಚವಧೆಯ ದೃಶ್ಯ... ಕಣ್ಮರೆಯಾದ ಇಂಥ ಲೋಕವಿಖ್ಯಾತ, ಅನುಪಮ, ಪ್ರತಿಭಾವಂತ ಕಲಾವಿದನಿಗೆ 'ಹೊಸತು' ತನ್ನ ಹೃತ್ಪೂರ್ವಕ, ಭಾವಪೂರ್ಣ, ಬಾಷ್ಪಾಂಜಲಿಯನ್ನು ಸಲ್ಲಿಸುತ್ತದೆ.

**ಎಚ್. ಕೆ. ರಾಮಚಂದ್ರಮೂರ್ತಿ**

೧೦೨, ಶ್ರಾವಂತಿ ಪ್ಯಾಲೆಸ್, ಸಿ. ಆರ್. ಬಡಾವಣೆ, ೩ನೇ ಅಡ್ಡರಸ್ತೆ , ಜೆ.ಪಿ. ನಗರ, ೧ನೇ ಹಂತ, ಬೆಂಗಳೂರು – ೭೮




# ನಾಗಿ ಮತ್ತು ಸೀರೆ

■ ಮಧುಶ್ರೀ ಕೆ. ಶಂಕರ್

ನಾಗಿಗೆ ಈಗ ಅಣ್ಣ ಹೋದ ಅನ್ನೊ ಬೇಸರದ ಜೊತೆಗೆ ಚಿಂತೆಯೊಂದು ಶುರುವಾಯ್ತು. ಗೋಡೆಗೆ ಒರ್ಕೊಂಡು ಕುಂತವಳೆ ಮಧ್ಯಾಹ್ನ ಅಡುಗೆ ಮಾಡೊದ್ನು ಮರ್ತಿದ್ಲು. ಇತ್ತ ಎತ್ಗಳ್ಗೆ ಮೇವ್ ಹಾಕಿ ಊಟ ಮಾಡಕ್ಕೆ ಬಂದ ಮಾದ, ನಾಗಿ ಕೂತಿದ್ದ ಭಂಗಿ ನೋಡಿ ಆಶ್ಚರ್ಯದಿಂದ ನಾಗಿಯನ್ನು ಎಚ್ಚರಿಸಿದ. ಏನೆಂದು ವಿಚಾರಿಸಿದರೆ ನಾಗಿ ಸರಿಯಾಗಿ ಉತ್ತರ ಕೊಡದೆ ಅಡುಗೆಮನೆ ಕಡೆಗೆ ಹೊರಟ್ಳು. ಮಾದನು ಸಹ ಅಣ್ಣ ಹೊರಟುಹೋಗಿದ್ದಕ್ಕೆ ಬೇಸರ ಮಾಡಿಕೊಂಡವ್ಳೇನೊ ಅಂದುಕೊಂಡು ಸುಮ್ಮನಾದ. ಆದರೆ ವಿಷಯ ಅದಾಗಿರಲಿಲ್ಲ. ಕೆಲಸ ಮುಗಿಸಿ ಬಂದ ಮಾದನಿಗೆ ನಾಗಿ ಎಂದಿನಂತೆ ಕಾಣಲಿಲ್ಲ. ಮತ್ತದೇ ಯೋಚನೆಯಲ್ಲಿ ಮುಳುಗಿ ಹೋಗಿದ್ಲು ನಾಗಿ. ಇವರ ಇಷ್ಟು ವರ್ಷದ ದಾಂಪತ್ಯದಲ್ಲಿ ಗುಟ್ಟು ಅನ್ನೋದು ಯಾವುದು ಇರಲಿಲ್ಲ. ಏನೇ ಸಮಸ್ಯೆ ಇದ್ರು ಒಟ್ಟಿಗೆ ಬಗೆಹರಿಸಿಕೊಂಡು ಬಿಡೋರು. ಆದರೆ ಈ ಬಾರಿ ಇರೊ ಸಮಸ್ಯೆನ ಹೇಳಿಕೊಳ್ಳೋಕೆ ಯಾಕೊ ನಾಗಿಗೆ ಮನಸ್ಸಿಲ್ಲ. ಮಾದನಿಗೆ ನಾಗಿ ಮನಃಸ್ಥಿತಿ ಅರ್ಥ ಆಗ್ತಿಲ್ಲ. ಎಷ್ಟೇ ಬಾರಿ ಕೇಳಿದ್ರು ನಾಗಿ ಮಾತ್ರ ನಗುಮುಖ ಇಟ್ಕೊಂಡು ತನ್ನೊಳಗಿರೊ ಯೋಚನೇನ ಬಚ್ಚಿಡೊದಕ್ಕೆ ಪ್ರಯತ್ನ ಪಡ್ತಿದ್ಲು.



ಬೆಳ್ಳಂಬೆಳ್ಗೆ ಕೋಳಿ ಕೂಗೊ ಹೊತ್ತಿಗಾಗ್ಲೆ ಅಟ್ಟಿಯಿಂದ ಹೊಂಟು ಗೌಡ್ರುಮನೆ ಕೊಟ್ಟಿಗೆ ಸೇರಿದ್ದ ಮಾದ. ಎತ್ತುಗಳ್ನ ಈಚೆಗೆ ಕಟ್ಟಾಕಿ ಕಸ ಸವರಿ ಹೊಲುತ್ತವಿಂದ ಒಂದೊರೆ ಮೇವು ಕೊಯ್ಕಂಡ್ ಬಂದು ಗೌಡ್ರುಮನೆ ಹಜಾರುಕ್ಕೆ ಹಾಕಿದ್ರೆ ಬೆಳಗಿನ ಕೆಲ್ಸ ಮುಗಿದಂಗೆ. ಈ ಕಡೆ ನಾಗಿ ವತ್ತಾರೆನೆಯ ಎದ್ದು ಮನೆ ತಾರ್ಸಿ, ಈಚೆ ರಂಗೋಲಿ ಇಟ್ಟು, ಪಕ್ಕದ್ಮನೆ ಸಾಕಿತವ ಒಂದು ಲೋಟ ಹಾಲು ತಂದು ಕಾಫಿ ಕಾಯ್ಸಿ ಮಾದ ಬರೊದನ್ನೆ ಕಾಯ್ತ ಕೂತಿರ್ತಿದ್ಲು. ಮದುವೆ ಆಗಿ ಇಪ್ಪತ್ತು ವರ್ಷ ಆದ್ರು, ಇದುವರೆಗು ಜಗಳ, ಮನಸ್ತಾಪ ಅನ್ನೊ ಪದಗಳು ಇವರ ಸಂಸಾರದಲ್ಲಿ ಸುಳಿದಿಲ್ಲ. ಒಬ್ಬರಿಗೊಬ್ಬರು ಅರ್ಥಮಾಡಿಕೊಂಡು ಇರೊದ್ರಲ್ಲೆ ತೃಪ್ತಿಯಿಂದ ಜೀವನ ನಡೆಸ್ತಿದ್ರು. ನಾಗೀನೂ ಸಹ ಇದುವರೆಗು ಮಕ್ಕಳು ಬೇಕು ಅಂತ ಆಸೆಪಟ್ಟವಳಲ್ಲ. ಮಾದನೆ ಇವಳಿಗೆ ಗಂಡ, ಮಗ, ತಂದೆ, ತಾಯಿ ಎಲ್ಲಾ ಆಗಿದ್ದ.

ಕೇರಿ ಗಂಡಸ್ರೆಲ್ಲಾ ಬೆಳಿಗ್ಗೆಯಿಂದ ದುಡಿದ ದುಡಿಮೆನೆಲ್ಲ ಸಂಜೆ ಆದ್ರೆ ಸಾರಾಯಿ ಅಂಗಡಿಗೆ ಹಾಕ್ತಿದ್ರು. ದುಡ್ಡು ಸಿಗದೆ ಹೋದ್ರೆ, ಸಾಲ ಮಾಡಿಯಾದ್ರು ಕಂಠಪೂರ್ತಿ ಕುಡ್ದು ಮನೆಗೆ ಬಂದು ಹೆಂಡ್ತೀರ್ಗೆ ಹೊಡೆಯೊದು ಇವರ ಪ್ರತಿನಿತ್ಯದ ಚಾಳಿಯಾಗಿತ್ತು. ಆದರೆ ಇದಕ್ಕೆ ತದ್ವಿರುದ್ಧ ಎನ್ನುವಂತೆ ಮಾದ ಯಾವತ್ತು ಸಾರಾಯಿ ಅಂಗಡಿ ಕಡೆಗೆ ಹೋದವನಲ್ಲ, ಸಾಲಕ್ಕಾಗಿ ಒಬ್ಬರತ್ರ ಕೈ ಒಡ್ಡಿದವನಲ್ಲ. ಇದಕ್ಕಾಗಿಯೋ ಏನೊ ನಾಗೀನ ಕಂಡ್ರೆ ಬೀದಿ ಹೆಂಗಸರಿಗೆಲ್ಲ ಹೊಟ್ಟೆಉರಿ, ತಮ್ಮ ಗಂಡಂದಿರು ಯಾಕಿಂಗಿಲ್ವಲ್ಲ ಅಂತ. ಒಟ್ಟಿನಲ್ಲಿ ಮಾದ, ನಾಗಿ ಇಬ್ಬರು ಒಂದು ರೀತಿಲಿ ಕೇರಿಗೆ ಆದರ್ಶ ದಂಪತಿಗಳಾಗಿ ಬಾಳ್ತಿದ್ರು. ಗೌಡ್ರು ಮನೇಲಿ ದುಡಿಯೋದು ಮಾದನ ಕೆಲ್ಸ ಆದ್ರೆ, ಮೂರೊತ್ತು ಅಡಿಗೆ ಮಾಡ್ಕೊಂಡು ಮನೆ ಕಡೆ ಇರೋದು ನಾಗಿ ಕೆಲ್ಸ. ತಿಂಗಳೆಲ್ಲ ದುಡಿದು ತಿಂಗಳ ಕೊನೇಲಿ ಗೌಡ್ರು ಕೊಟ್ಟಷ್ಟು ಈಸ್ಕಂಡು ಬತ್ತಿದ್ದ. ಹೆಚ್ಚು ಕಡಿಮೆ ಮಾತಾಡ್ತಿರ್ಲಿಲ್ಲ. ಯಾಕಂದ್ರೆ ಅಪ್ಪನ ಕಾಲದಿಂದಲು ಗೌಡ್ರು ಮನೇಲೆ ಕೆಲ್ಸ. ಒಳ್ಳೆ ನಂಬಿಕೆ ಸಂಪಾದಿಸಿದ್ದ. ಗೌಡ್ರುಗೂ ಮಾದ ಅಂದ್ರೆ ಗೌರವ, ಯಾವತ್ತು ಜಾತಿ ಭೇದ ಮಾಡಿದವರಲ್ಲ. ಅಕ್ಕಿ, ರಾಗಿ ಮಾದ ಕೇಳದೆ ಇದ್ರೂ ಗೌಡ್ರೇ ಮನೆಗೆ ಕೊಟ್ಟು ಕಳುಹಿಸುತಿದ್ರು. ಇನ್ನು ಹಬ್ಬ ಹುಣ್ಣಿಮೇಲಿ ಗೌಡ್ರು ಮನೇಲೇ ಊಟ. ಗೌಡ್ತೀನೂ ಅಷ್ಟೆ ಮಾದುನ್ನ ಯಾವತ್ತೂ ಕೆಲಸದವ್ನು ಅಂತ ಭಾವಿಸಿರ್ಲಿಲ್ಲ, ಸ್ವಂತ ತಮ್ಮನ ರೀತಿ ಕಾಣ್ತಿದ್ರು. ಗೌಡ್ರು ಕೊಟ್ಟ ಸಲಿಗೇನ ಮಾದ ಯಾವತ್ತು ಬಳಸಿಕೊಂಡಿರಲಿಲ್ಲ. ಮಾದನ ಪಾಲಿಗೆ ಗೌಡ್ರು ಅಂದ್ರೆ ಅನ್ನ ಕೊಟ್ಟ ದಣಿಗಳು. ಮಾಡೊ ಕೆಲ್ಸನ ನಿಯತ್ತಿನಿಂದ ಮಾಡ್ಬೇಕು ಅನ್ನೋದು ಮಾದನ ಸ್ವಭಾವ. ಸಂಕೋಚದ ಜೊತೆಗೆ ತುಂಬಾ ಸ್ವಾಭಿಮಾನಿ, ಮೃದು ಮನಸ್ಸಿನ ಮನುಷ್ಯ. ತಾನಾಯ್ತು ತನ್ನ ಕೆಲಸ ಆಯ್ತು ಅಂತ ಇರ್ತಿದ್ದ. ಯಾರನ್ನೂ ಯಾವುದಕ್ಕೂ ಎದುರುಹಾಕಿಕೊಳ್ಳುವ ಗೋಜಿಗೆ ಹೋಗ್ತಿರ್ಲಿಲ್ಲ. ಚಂದಾಗೆ ಗೌಡ್ರು ಮನೆಲಿ ಕೆಲ್ಸ ಮಾಡ್ಬೇಕು, ನಾಗಿ ಜೊತೆ ನೆಮ್ಮದಿಯಿಂದ ಜೀವನ ಸಾಗಿಸ್ಬೇಕು; ಇದಿಷ್ಟೇ ಅವನ ಬದುಕು. ತಿಂಗಳ ದುಡಿಮೆ ಹೊಟ್ಟೆಗೆ ಸಾಕಾಗ್ತಿತ್ತು. ಮಕ್ಕಳಿಲ್ಲದ ಕಾರಣ ಕೂಡಿಡುವ ಬವಣೆ ಇರಲಿಲ್ಲ. ನಾಳೆ ಬಗ್ಗೆ ಚಿಂತಿಸದೆ ನೆಮ್ಮದಿಯಿಂದ ಬಾಳ್ವೆ ನಡೆಸ್ತಿದ್ರು.

ಅಂದು ಸೋಮವಾರ ಮಾದ ಎಂದಿನಂತೆ ಬೆಳಿಗ್ಗೆನೆ ಎದ್ದು ಗೌಡ್ರು ಮನೆ ಕಡೆಗೆ ಹೊಂಟ, ಇತ್ತ ನಾಗಿ ಮನೆ ತಾರ್ಸಿ ಸಾಕಿತವ ಹಾಲ್ ತರಕ್ಕೆ ಬಾಗಿಲು ಚಿಲ್ಕ ಸಿಕ್ಸಿ ಹೋಗಿದ್ಲು. ಹಾಲ್ ಈಸ್ಕಂಡು ವಾಪಸ್ ಬರೊ ಹೊತ್ತಿಗೆ ಮನೆ ಬಾಗಿಲು ತೆರೆದಿತ್ತು. ತೆರೆದಿದ್ದ ಬಾಗಿಲು ನೋಡಿ ನಾಗೀಗೆ ಆಶ್ಚರ್ಯ ಆಯ್ತು. ಒಳಗೆ ಇಣುಕಿ ನೋಡಿದ್ರೆ ಯಾರೊ ನಿಂತವ್ರೆ. ಬೆಳಗಿನ ಜಾವ ಬೇರೆ ಮನೆ ಒಳಗೆ ಇನ್ನು ಕತ್ತಲು ಕವಿದಿತ್ತು. ಬಿಳಿ ಶರ್ಟು, ಬಿಳಿ ಪಂಚೆ ಮುಂಜಾನೆ ಬೆಳಕಿಗೆ ಕಂಗೊಳಿಸುತಿತ್ತು. ಎತ್ತರದ ಮೈಕಟ್ಟು, ಸಪೂರ ದೇಹ ಇದು ನಾಗೀಗೆ ಮೊದಲ ನೋಟಕ್ಕೆ ಕಂಡಿದ್ದು. ಬಾಗಿಲ ಬಳಿಯಲ್ಲೇ ಒಂದು ಕ್ಷಣ ಯೋಚಿಸಿ ವ್ಯಕ್ತಿ ಯಾರೆಂದು ಪತ್ತೆ ಹಚ್ಚಲು ಸಾಧ್ಯವಾಗದೆ ಆಗಿದ್ದಾಗಲಿ ಎಂದು ಗಟ್ಟಿ ಧ್ವನಿಯಲ್ಲಿ, 'ಯಾರದು ಒಳಗಡೆ ಇರೋರು. ಬನ್ರಣ್ಣ ಈಚೆಗೆ' ಅಂದ್ಲು. ಒಳಗಿದ್ದವ ಬಾಗಿಲ ಕಡೆ ತಿರುಗಿ, 'ಬಾ ನಾಗಿ ನಾನೇಯ ಕಣ' ಅಂದ. ನಾಗಿಗೆ ಧ್ವನಿ ಗುರುತು ಸಿಗ್ಲಿಲ್ಲ. 'ನಾನೇಯ ಅಂದ್ರೆ ಯಾರದು ? ಚಿಲ್ಕ ಹಾಕಿದ್ ಮನೆ ಒಳಿಕೆ ಹೋಗ್ಬುಟ್ಟು ಏನ್ ಮಾಡ್ತಯಿದ್ದೀರಿ ? ಬನ್ರಣ್ಣ ಈಚೆಗೆ', ನಾಗಿಯ ಮಾತು ಮುಗಿಯುವಷ್ಟರಲ್ಲಿ ಆ ವ್ಯಕ್ತಿ ಬಾಗಿಲ ಸನಿಹಕ್ಕೆ ಸಮೀಪಿಸಿದ್ದ. ದೃಷ್ಟಿಸಿ ನೋಡಿದ ನಾಗಿಗೆ ಬಾಯಿ ಕಟ್ಟಿಹಾಕಿದಂತಾಯಿತು. ಖುಷಿಯಿಂದ ಕೈಲಿದ್ದ ಹಾಲಿನ ಲೋಟವನ್ನು ಕೆಳಕ್ಕೆ ಬಿಸಾಡಿ ಆತನನ್ನು ಬಾಚಿ ತಬ್ಬಿಕೊಂಡಳು. ಒಂದೇ ಸಮನೆ ಅಳುತ್ತ, 'ಹೇಗಿದ್ದೀಯ ತಿಮ್ಮಣ್ಣ ?' ಅಂದ್ಲು. 'ನಾ ಚಂದಾಗಿವ್ನಿ ನೀ ಯಂಗಿದ್ದಿಯವ್ವ ?', ಅಂದ

ತಿಮ್ಮ, 'ನಂಗೇನಾಗದೆ ? ಆಗೆಂಗಿದ್ನೋ ಈಗ್ಲು ಅಂಗೆ ಇವ್ನಿ, ನೀನೆ ಬದಲಾಗಿರೋದು ನೋಡು. ಅತ್ಗೆ ಬಂದ್‌ಮ್ಯಾಕೆ ಮನೆತವ ಬರದಿರ್ಲಿ, ಜೊತೆಯಾಗೆ ಒಬ್ಳು ಹುಟ್ಟವಳೆ ಅನ್ನೋದ್ನು ಮರ್ತ್ ಬುಟ್ಟಿದ್ದೀಯೇನೋ ಕಣ ಬುಡು...' ಎಂಬ ನಿಂಗಿ ಮಾತ್ಗೆ 'ಅಂಗಲ್ಲ ಕಣವ್ವ, ನಿಂಗೆ ಗೊತ್ತಲ್ಲ ನಿನ್ ಅತ್ಗೆ ಎಂತವ್ಳು ಅಂತ ? ಒಂದ್ ತಪ ಇಲ್ಲಿಗೆ ಬಂದು ಹೋದ್ರೆ ಸಾಕು, ಬೀದಿ ಹೆಂಗಸ್ರುನೆಲ್ಲ ಗುಂಪು ಕಟ್ಟಿ ನನ್ ಗಂಡ ತಂಗಿ ಮಾತ್ ಕೇಳ್ಕಂಡು ನಂಗೆ ಒಡಿಯಕ್ಕೆ ಬಂದಿದ್ದ ಅಂತ ಡಂಗುರ ಸಾರ್‍ತಳೆ, ಸುಳ್ಳ್ ಹೇಳಿ ಗಂಡನ್ ಮಾನ ತೆಗೆಯೋದ್ರಲ್ಲಿ ಅದೇನ್ ಸುಖನೊ ಆ ಹೆಂಗಸಿಗೆ. ಅದ್ಕೆ ಈಕಡೆ ಬರ್ಲೆ ಇರೋದೆ ಒಳ್ಳೇದು ಅಂತ ಬಂದಿರ್ಲಿಲ್ಲ, ಈಗ ಬರ್ಲೇ ಬೇಕಾಯ್ತು ಬಂದೆ', ಎಂದು ತಿಮ್ಮಣ್ಣ ಕಷ್ಟ ಹೇಳಿಕೊಂಡ.

ನಾಗಿ ಅತ್ತಿಗೆಯ ಹುಚ್ಚುತನವನ್ನು ನೆನೆಸ್ಕೊಂಡು ಒಳಗೊಳಗೆ ನಗುತ್ತ, 'ಬಾ ತಿಮ್ಮಣ್ಣ ಕೂರು' ಅಂದ್ಲು. ಮಾದ ಎಲ್ಲಿ ಅಂತ ತಿಮ್ಮ ಕೇಳಿದ್ದಕ್ಕೆ, "ಇಲ್ಲೆ ಗೌಡ್ರು ಮನೆತಕೆ ಹೋಗವ್ನೆ. ಇನ್ನೇನೊ ಬಂದ್ಬುಡ್ತನೆ ಕುಂತಿರು ಬತ್ತಿನಿ" ಅಂತ ಹೇಳಿ ಬಾಗಿಲ ಬಳಿ ಬಿದ್ದಿದ್ದ ಹಾಲಿನ ಲೋಟ ತಕೊಂಡು ಮತ್ತೆ ಸಾಕಿ ಮನೆಗೆ ಹೋಗಿ ಹಾಲಿಸ್ಕಂಡು ಬಂದು ಕಾಫಿ ಕಾಯ್ಸಿ ತಿಮ್ಮಂಗೆ ಕೊಡೊ ಹೊತ್ತಿಗೆ ಮಾದ ಬಂದ. ತಿಮ್ಮನ್ನ ನೋಡಿ ಮಾದನಿಗೂ ಖುಷಿಯಾಯ್ತು. ಮೂವರೂ ಒಟ್ಟಿಗೇ ಕಾಫಿ ಕುಡಿದ್ರು. ತಿಮ್ಮ, ಮಾದ ಇಬ್ಬರೂ ಮೊದಲಿನಿಂದಲು ಒಳ್ಳೆ ಸ್ನೇಹಿತರು. ಮಾದನ ಒಳ್ಳೆ ಗುಣ ನೋಡಿ ತಂಗಿನ ಕೊಟ್ಟು ಮದುವೆ ಮಾಡಿದ್ದ ತಿಮ್ಮ. ಇರೋದು ಪಕ್ಕದೂರೆ ಆದ್ರು ಭೇಟಿ ಮಾಡೋದು ಮಾತ್ರ ವರ್ಷಕ್ಕೊ ಆರು ತಿಂಗಳಿಗೊ ಒಂದ್ಸಲ. ತಿಮ್ಮಂಗೆ ಇಬ್ರು ಮಕ್ಳು. ಮಗಳು ಈಗ ಮದುವೆಗೆ ಬಂದವ್ಳೆ, ಲಗ್ನನು ಗೊತ್ತಾಗದೆ. ಲಗ್ನ ಪತ್ರಿಕೆ ಸಮೇತ ಮಾದ–ನಾಗಿನ ಕರಿಯಕೆ ಬಂದವ್ನೆ ತಿಮ್ಮ. ವಿಷ್ಯ ಕೇಳಿ ನಾಗಿಗೆ ತುಂಬ ಸಂತೋಷ ಆಯ್ತು. ನಾಟಿಕೋಳಿ ಸಾರು, ರಾಗಿ ಮುದ್ದೆ ಉಣ್ಣಕ್ಕೆ ಇಕ್ಕಿ ಖುಷಿ ಖುಷಿಯಾಗಿ ಅಣ್ಣುನ್ನ ಕಳಿಸಿಕೊಟ್ಲು. ಮಾದನು ಅಂಗೆ ಮೇವ್ ತತ್ತಿನಿ ಅಂತ ಹೊಂಟ.

ನಾಗಿಗೆ ಈಗ ಅಣ್ಣ ಹೋದ ಅನ್ನೊ ಬೇಸರದ ಜೊತೆಗೆ ಚಿಂತೆಯೊಂದು ಶುರುವಾಯ್ತು. ಗೋಡೆಗೆ ಒರ್‍ಗೊಂಡು ಕುಂತವಳೆ ಮಧ್ಯಾಹ್ನ ಅಡುಗೆ ಮಾಡೊದ್ನು ಮರ್‍ತಿದ್ಲು. ಇತ್ತ ಎತ್ಗಳ್ಗೆ ಮೇವ್ ಹಾಕಿ ಊಟ ಮಾಡಕ್ಕೆ ಬಂದ ಮಾದ, ನಾಗಿ ಕೂತಿದ್ದ ಭಂಗಿ ನೋಡಿ ಆಶ್ಚರ್ಯದಿಂದ ನಾಗಿಯನ್ನು ಎಚ್ಚರಿಸಿದ. ಏನೆಂದು ವಿಚಾರಿಸಿದರೆ ನಾಗಿ ಸರಿಯಾಗಿ ಉತ್ತರ ಕೊಡದೆ ಅಡುಗೆಮನೆ ಕಡೆಗೆ ಹೊರಟ್ಳು. ಮಾದನು ಸಹ ಅಣ್ಣ ಹೊರಟುಹೋಗಿದ್ದಕ್ಕೆ ಬೇಸರ ಮಾಡಿಕೊಂಡವ್ಳೇನೊ ಅಂದುಕೊಂಡು ಸುಮ್ಮನಾದ. ಆದರೆ ವಿಷಯ ಅದಾಗಿರಲಿಲ್ಲ. ಕೆಲಸ ಮುಗಿಸಿ ಬಂದ ಮಾದನಿಗೆ ನಾಗಿ ಎಂದಿನಂತೆ ಕಾಣಲಿಲ್ಲ. ಮತ್ತದೇ ಯೋಚನೆಯಲ್ಲಿ ಮುಳುಗಿಹೋಗಿದ್ಲು ನಾಗಿ. ಇವರ ಇಷ್ಟು ವರ್ಷದ ದಾಂಪತ್ಯದಲ್ಲಿ ಗುಟ್ಟು ಅನ್ನೋದು ಯಾವುದು ಇರಲಿಲ್ಲ. ಏನೇ ಸಮಸ್ಯೆ ಇದ್ರು ಒಟ್ಟಿಗೆ ಬಗೆಹರಿಸಿಕೊಂಡು ಬಿಡೋರು. ಆದರೆ ಈ ಬಾರಿ ಇರೊ ಸಮಸ್ಯೆನ ಹೇಳಿಕೊಳ್ಳೋಕೆ ಯಾಕೊ ನಾಗಿಗೆ ಮನಸ್ಸಿಲ್ಲ. ಮಾದನಿಗೆ ನಾಗಿ ಮನಃಸ್ಥಿತಿ ಅರ್ಥ ಆಗ್ತಿಲ್ಲ. ಎಷ್ಟೇ ಬಾರಿ ಕೇಳಿದ್ರು ನಾಗಿ ಮಾತ್ರ ನಗು ಮುಖ ಇಟ್ಕೊಂಡು ತನ್ನೊಳಗಿರೊ ಯೋಚನೇನ ಬಚ್ಚಿಡೊದಕ್ಕೆ ಪ್ರಯತ್ನ ಪಡ್ತಿದ್ಲು. ಇಪ್ಪತ್ತು ವರ್ಷ ಜೊತೆಯಾಗಿ ಸಂಸಾರ ಮಾಡಿದವನಿಗೆ ಅದು ನಾಟಕೀಯ ನಗು ಅನ್ನೋದು ತಿಳಿಯದೆ ಇರ್ಲಿಲ್ಲ.

ಮಾರನೆ ದಿನ ಮಾದ ಗೌಡ್ರುಮನೆ ಕೆಲ್ಸ ಬೇಗ ಮುಗ್ಸಿ ಸಂಜೆ ಹೊತ್ತಿಗಾಗ್ಲೆ ಮನೆ ಸೇರಿದ್ದ. ನಾಗಿ ಅಡುಗೆಮನೇಲಿ ಏನೊ ಸದ್ದು ಮಾಡ್ತಾ ಇದ್ಲು. ಮಾದ ಮನೆ ಒಳಕ್ಕೆ ಬಂದಿದ್ದು ನಾಗಿ ಗಮನಕ್ಕೆ ಬಂದಿರಲಿಲ್ಲ. ಬಂದು ಇಷ್ಟೋತ್ತಾದ್ರು ಮುಖ ತೋರಿಸ್ದೇನೆ ಒಳಗೆ ಏನ್ ಮಾಡ್ತಾವ್ಳೆ ಅಂತ ಅಡುಗೆಮನೆ ಕಡೆ ಬಗ್ಗಿ ನೋಡಿದ್ರೆ ಅಡುಗೆಮನೆಲೆಲ್ಲ ಬಟ್ಟೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದವೆ, ನಾಗಿ ಹಳೆ ಟ್ರಂಕ್ ತವ ಕೂತ್ಕಂಡು ಏನೊ ಹುಡುಕ್ತಾವ್ಳೆ. ಮಾದ ಸದ್ದು ಮಾಡ್ದೆ ನೋಡ್ತಾ ಇದ್ದ. ಇತ್ತ ನಾಗಿ ಟ್ರಂಕಲ್ಲಿರೊ ಬಟ್ಟೆಗಳನ್ನೆಲ್ಲ ಈಚೆಗೆ ಹಾಕಿ ಇನ್ನು ಏನಾದ್ರು ಇದ್ಯಾ ಅಂತ ಇಣುಕಿ ನೋಡಿದ್ಲು. ಒಳಗೆ ಏನೂ ಇರಲಿಲ್ಲ. ಈಚೆ ಬಿದ್ದಿದ್ದ ಸೀರೆಗಳನ್ನೆಲ್ಲ




ಒಂದೊಂದಾಗೆ ತೆಗೆದು ನೋಡಿದ್ಲು. ಎಲ್ಲಾ ಹಳೇ ಸೀರೆಗಳೆ, ಅಲ್ಲಲ್ಲಿ ತ್ಯಾಪೆ ಹಾಕಿರೋದು. ಹಾಗೆ ಕೆದಕಿ ನೋಡಿದಾಗ ಹಸಿರು ಬಣ್ಣದ್ದು ರೇಷ್ಮೆ ಅಂಚಿನ ಸೀರೆ ಕಾಣಿಸ್ತು. ನಾಗಿ ಮದುವೇಲಿ ಅವಳ ತವರು ಮನೆಯವರು ಉಡಿಸಿದ್ದಿದ್ದು. ಖುಷಿಯಿಂದ ತೆಗೆದು ನೋಡಿದ್ರೆ, ಸೀರೆ ಒಳಗೆಲ್ಲಾ ಸಣ್ಣ ಸಣ್ಣ ತೂತುಗಳು. ಟ್ರಂಕಲಿದ್ದ ಸೀರೆಗೆ ತೂತು ಹೇಗಾಯ್ತು ಅಂತ ಯೋಚಿಸಿ, ಟ್ರಂಕನ್ನೊಮ್ಮೆ ಎತ್ತಿ ನೋಡಿದ್ರೆ ಟ್ರಂಕಿನ ತಳ ತುಕ್ಕುಹಿಡಿದು ಅಲ್ಲಲ್ಲಿ ಕಿಂಡಿಗಳು ಕಾಣಿಸ್ತಿದ್ವು. 'ಹಾಳಾದ ಜಿರಲೆಗಳ ಕೆಲಸವೇ ಇರ್ಬೇಕು. ಇದೊಂದು ಸೀರೆಯನ್ನಾದ್ರು ಬಿಟ್ಟಿದ್ದಿದ್ರೆ ಆಗ್ತಿರ್ಲಿಲ್ವೇನೊ', ಅಂದುಕೊಂಡು ಮೂಲೇಲಿ ಹಾಗೇ ಸುಮ್ನೆ ಕೂತುಬಿಟ್ಲು.

ನಾಗಿಯ ಹಾವಭಾವವನ್ನು ಸದ್ದಿಲ್ಲದೆ ನೋಡುತ್ತಿದ್ದ ಮಾದನಿಗೆ ತಲೆಯಲ್ಲಿ ಹುಳ ಬಿಟ್ಟಂಗಾಯ್ತು. ಅವಳಣ್ಣ ಮನೆಗೆ ಬಂದು ಹೋದಾಗಿಂದ ನಾಗಿಯಲ್ಲಾಗಿರೊ ಬದಲಾವಣೆ ಕೊಂಚ ವಿಚಿತ್ರ ಅನಿಸಿತ್ತು. ಏನೋ ಹೇಳ್ಬೇಕು ಅಂತ ಬತ್ತಳೆ ಇನ್ನೇನೊ ಹೇಳ್ತಳೆ, ಏನೊ ಕೇಳ್ಬೇಕು ಅನ್ಕೊಂಡೋಳು ಮುಖನ ಒಂದ್ ಸಲ ದಿಟ್ಟಿಸಿ ನೋಡಿ ಸುಮ್ನೆ ಆಗ್ಬುಡ್ತಾಳೆ. ತನ್ನ ವರ್ತನೆಯಲ್ಲಾಗಿರೊ ಬದಲಾವಣೆ ನಾಗಿ ಗಮನಕ್ಕೆ ಬಂದಿದ್ರು ಸಹ ಸರಿಪಡಿಸಿಕೊಳ್ಳೊ ಪ್ರಯತ್ನ ಮಾಡ್ಲಿಲ್ಲ. ರಾತ್ರಿ ಊಟ ಬಡಿಸುವಾಗ ಮೊದಲಿನ ಪ್ರೀತಿ ನಾಗಿಯಲ್ಲಿ ಕಾಣಿಸ್ಲಿಲ್ಲ. ಮಾದನು ಅವಳ ಮನಸ್ಸನ್ನ ಕೆದುಕೋಕೆ ಹೋಗ್ಲಿಲ್ಲ. ಪ್ರತಿ ರಾತ್ರಿ ಮಲಗೋಕು ಮುನ್ನ ದಿನವಿಡೀ ನಡೆದದ್ದನ್ನ ಒಬ್ಬರಿಗೊಬ್ಬರು ಹಂಚಿಕೊಳ್ತಿದ್ರು. ಆದ್ರೆ ಈ ರಾತ್ರಿ ಮನೆ ತುಂಬಾ ಮೌನ. ನಾಗಿನೇ ಬೇಕು ಅಂತ ಬೇಗ ಊಟ ಮುಗ್ಸಿ ಮಲ್ಕೊಂಡ್ಳು. ಮಾದ ಮಾತ್ರ ದಿನವಿಡೀ ನಡೆದದ್ದನ್ನೆಲ್ಲ ಒಬ್ಬನೆ ಯೋಚಿಸ್ತಾ ಕೂತ. ನಾಗಿ ಸೀರೆಗಳನ್ನೆಲ್ಲಾ ಕೆದುಕಿ ನೋಡ್ತಿದ್ದುದ್ದು, ಚೆನ್ನಾಗಿರೊ ಸೀರೆ ಒಂದೂ ಸಿಗದಿದ್ದಾಗ ಅವಳ ಮುಖದಲ್ಲಿ ಮೂಡಿಬಂದ ಬೇಸರ ನೆನಪಿಗೆ ಬಂತು. 'ಇಷ್ಟು ದಿನ ಇಲ್ದೆಯಿದ್ದ ಸೀರೆ ಚಿಂತೆ ನಾಗಿಗೆ ಈಗ ಯಾಕೆ ಬಂತು', ಅಂತ ತಂತಾನೆ ಪ್ರಶ್ನಿಸಿಕೊಂಡಾಗ ಮಾದನ ತಲೆಗೆ ಥಟ್ಟಂತ ಉತ್ತರ ಸಿಕ್ತು. ಅದೇನಂದ್ರೆ, 'ಬರೋ ಬೇಸ್ತಾರ ನಾಗಿ ಅಣ್ಣನ್ ಮಗಳ ಮದುವೆ, ಮದುವೆಗೆ ಹೋಗಕ್ಕೆ ಒಂದೂ ಒಳ್ಳೆ ಸೀರೆ ಇಲ್ವಲ್ಲ ಅಂತ ನಾಗಿಗೆ ಯೋಚನೆ ಅತ್ಕಂಡದೆ. ಈ ಕಾರಣಕ್ಕೆ ಇರ್ಬೇಕು ಇವ್ಳು ಇಂಗೆಲ್ಲಾ ಆಡ್ತಾ ಅವ್ಳೆ'... ಹಿಂಗೆಲ್ಲಾ ಮಾದ ಯೋಚಿಸ್ತಿದ್ರೆ, ಬೇಗ ಉಂಡು ಮಲಗಕ್ಕೆ ಹೋದ ನಾಗಿಗೆ ಇನ್ನು ನಿದ್ದೆ ಬಂದಿರ್ಲಿಲ್ಲ. 'ಅರುಕ್ಲು ಸೀರೆ ಹಾಕಂಡು ಮದುವೆಗೆ ಹೋಗೊದಾದ್ರು ಹೇಗೆ, ಅಣಕಿಸೋಕೆ ಅಂತಾನೆ ಆ ಅತ್ಗೆ ಕಾಯ್ತಾ ಕೂತಿರ್‍ತಾಳೆ. ಮದುವೆ ಮನೆ ಅನ್ನೋದ್ನು ನೋಡ್ದೆ ಬಂದಿರೊ ಜನಗಳ್ ಮುಂದೆ ಮರ್ವಾದೆ ತೆಗಿಯದಂತು ದಿಟಾನೇಯ. ಹಂಗಂತ ಮದುವೆಗೆ ಹೋಗ್ದೆ ಇರಕ್ಕೂ ಆಗಾಕಿಲ್ಲ, ಅಣ್ಣ ಮನೆಗಂಟ ಬಂದು ಕರ್‍ದು ಹೋಗವ್ನೆ. ಮಾದನ ದುಡಿಮೆ ಗೊತ್ತಿದ್ರು ಹೊಸ ಸೀರೆ ತಕ್ಕೊಡು ಅಂತ ಹೆಂಗೆ ಕೇಳ್ಲಿ ?' ಎಂದೆಲ್ಲಾ ಯೋಚನೆಗಳು ಒಂದೊಂದಾಗಿ ತಲೆಯಲ್ಲಿ ಓಡುತ್ತಲೇ ನಾಗಿ ನಿದ್ರೆಗೆ ಜಾರಿದ್ಲು. ಇತ್ತ ಮಾದ ಹೆಂಡತಿ ಸಮಸ್ಯೆನ ಬಗೆಹರಿಸೋದು ಹೇಗೆ ಅಂತ ತಲೆಕೆಡಿಸಿಕೊಂಡಿದ್ದ.

ಮುಂಜಾನೆ ಬೇಗನೆ ಎದ್ದ ನಾಗಿಗೆ ರಾತ್ರಿಯಿಡಿ ಮಾದ ಪಕ್ಕದಲ್ಲಿ ಮಲಗಿಲ್ಲದಿರುವುದು ಗೊತ್ತಾಯ್ತು. ಪಕ್ಕದಲ್ಲೆ ಇದ್ದ ಬೆಂಕಿಪೊಟ್ಟಣದಿಂದ ಬೆಂಕಿಕಡ್ಡಿ ಗೀರಿ ದೀಪ ಹಚ್ಚಿ ಮನೆಯನ್ನೆಲ್ಲ ಒಮ್ಮೆ ಕಣ್ಣಾಡಿಸಿದ ನಾಗಿಗೆ ಮೂಲೆಲಿ ಮಲಗಿದ್ದ ಮಾದನ ಸ್ಥಿತಿ ನೋಡಿ ದುಃಖ ಉಮ್ಮಳಿಸಿ ಬಂತು. ತಡರಾತ್ರಿಯವರೆಗೂ ಯೋಚಿಸ್ತಾ ಕೂತಿದ್ದ ಮಾದ ಹಾಗೇ ನಿದ್ರೆ ಮಾಡಿಬಿಟ್ಟಿದ್ದ. ತನ್ನ ವರ್ತನೆಯಿಂದ ಬೇಸರಗೊಂಡು ಹೀಗೆ ಮಲಗಿದ್ದಾನೆ ಅಂದುಕೊಂಡ ನಾಗಿ ಮಾದನ ಬಳಿಹೋಗಿ ಎಚ್ಚರಿಸೊ ಪ್ರಯತ್ನ ಮಾಡಿದ್ಲು. ಆದರೆ ಮಾದ ಎದ್ದೇಳಲಿಲ್ಲ. ಇನ್ನು ನಿದ್ರೆ ಮುಗಿದಿಲ್ವೇನೊ ಇನ್ನು ಸ್ವಲ್ಪಹೊತ್ತು ಮಲಗಲಿ ಅಂತ ಸುಮ್ಮನಾದ್ಲು. ಮಲಗಿರೊ ಮಾದುನ್ನ ನೋಡುತ್ತಿದ್ದ ನಾಗಿಯ ಕಣ್ಣುಗಳಲ್ಲಿ ನೀರು ಬರಲಾರಂಭಿಸಿತು. 'ಇದುಕ್ಕೆಲ್ಲ ಕಾರಣ ನಾನೇಯ', ಅನ್ನುತ್ತ ಸೀರೆ ಸರ್‍ಗಲ್ಲಿ ಕಣ್ಣೀರು ಒರೆಸುತ್ತಾ ಕೂತ್ಲು. ಅವಳ ಸೊರ ಸೊರ ಸದ್ದು ಕೇಳಿ ಮಾದ ನಿದ್ದೆಯಿಂದ ಎದ್ದ. ನಾಗಿ ಮುಖ ನೋಡಿ, 'ಯಾಕಮ್ಮಿ ಏನಾಯ್ತು ? ವತ್ತಾರೆನೆಯ ಯಾಕಿಂಗೆ ಅಳ್ತ ಕೂತಿದ್ದಿ' ಅಂದ. ತಕ್ಷಣ ಕಣ್ಣೀರನ್ನ ಒರೆಸ್ಕೊಂಡು,

'ಏನು ಇಲ್ಲ ಕಣ ಎದ್ದೇಳು ಒತ್ತಾಯ್ತು, ದನಗಳು ಬಡ್ಕತಾಯಿರ್ತವೆ. ಹೋಗಿ ಒಸಿ ಮೇವ್ ಹಾಕ್ಬುಟು ಬರೋಗು' ಅಂದ್ಲು. ಮಾದ ಹೊರಗೆ ಹೋಗ್ತಿದ್ದಂಗೆ ತನ್ನ ಹುಚ್ಚುತನನ ನೆನೆಸ್ಕೊಂಡು ಮತ್ತೆ ಅಳಕ್ಕೆ ಶುರುಮಾಡುದ್ಲು. 'ಒಂದೇ ಒಂದು ಸೀರೆಗೋಸ್ಕರ ಯಾಕೀತರ ಆಗ್ಬುಟ್ಟೆ ? ಮಾದುನ್ನ ಕೇಳುದ್ರೆ ಕಷ್ಟ ಆದ್ರು ಪರವಾಗಿಲ್ಲ ಅಂತ ಕೂಲಿನಾಲಿ ಮಾಡಿಯಾದ್ರು ತಂದ್‌ಕೊಡ್ತನೆ. ಅದು ಬಿಟ್ಟು ತಾನು ಮನಸ್ಸು ಕೆಡಿಸ್ಕೊಂಡಿದ್ದು ಸಾಲ್ದು ಅಂತ ಮಾದುಂಗೂ ಯೋಚನೆ ಬರಿಸ್ಬುಟ್ನಲ್ಲ...' ಒಬ್ಬೊಬ್ಳೆ ಮಾತನಾಡಿಕೊಳ್ಳೋಕೆ ಶುರು ಮಾಡಿದ್ಲು ನಾಗಿ.

ಮೇವ್ ತರಕ್ಕೆ ಹೋದ ಮಾದ ರಾತ್ರಿ ಯೋಚನೆಯನ್ನೇ ಮುಂದುವರಿಸಿದ್ದ. 'ಗಂಡುನ್ ತವ ಯಂಗೆ ಕೇಳದು ಅಂತ ಒಳಗೊಳಗೆ ಕೊರುಗ್ತಾ ಅವಳಲ್ಲ, ಅವಳಾಗೆ ಕೇಳಲಿ ಅಂತ ಕಾಯೋದು ಸರಿ ಅಲ್ಲ, ಏನಾರ ಮಾಡಿ ಮುಂದಿನ ಬೇಸ್ತಾರುದಷ್ಟ್ರಲ್ಲಿ ಅವಳಿಗೆ ಒಂದು ರೇಷ್ಮೆ ಸೀರೆ ತಕೊಡ್‌ಬೇಕಲ್ಲ ಏನ್ ಮಾಡೋದು... ಹೌದು... ಈ ರೇಷ್ಮೆ ಸೀರೆಗೆ ಬೆಲೆ ಎಷ್ಟಾಗಬಹುದು ? ಯಾರನ್ನ ಕೇಳದು ?', ಪ್ರಶ್ನೆಗಳು ಹೆಚ್ಚಾಗತೊಡಗಿದವು. ಮೇವ್ ತಂದು ಗೌಡ್ರುಮನೆ ಹಜಾರುಕ್ಕೆ ಹಾಕೊಹೊತ್ನಾಗೆ ಒಳಗಿಂದ ಗೌಡ್ತಿ ಬಂದ್ಲು. ಮಾದನ ಮುಖ ನೋಡಿ, 'ಏನೋ ಮಾದ, ಬೆಳಿಗ್ಗೆನೆ ಏನೊ ಯೋಚಿಸ್ತಿರಂಗದೆ, ಏನೊ ಅದು ?' ಜಗಲಿ ಮೇಲೆ ಕೂರುತ್ತಾ ನುಡಿದಳು ಗೌಡ್ತಿ. ಅದುನ್ನ ಕೇಳಕ್ಕೆ ಇವರೇ ಸರಿಯಾದ ವ್ಯಕ್ತಿ ಅಂತ ಮನಸ್ನಲ್ಲೆ ಅಂದುಕೊಂಡು, 'ಏನಿಲ್ಲ ಅವ್ವರೆ ಈ ರೇಷ್ಮೆಸೀರೆ ಅಂತಾರಲ್ಲ ಅದ್ರುದು ಬೆಲೆ ಎಷ್ಟಿರ್ತದೆ ?' ಕೈಕಟ್ಟಿ ಕೇಳಿದ ಮಾದ. 'ಏನು ನಾಗಿ ಮ್ಯಾಲೆ ಜಾಸ್ತಿ ಪಿರುತಿ ಬಂದಂಗದೆ, ರೇಷ್ಮೆಸೀರೆ ಬಗ್ಗೆ ವಿಚಾರಸ್ತಿದ್ದಿ, ಏನು ವಿಷ್ಯ ?' ಛೇಡಿಸಿದಳು ಗೌಡ್ತಿ. 'ಹಂಗೇನು ಇಲ್ಲ ಅವ್ವರೆ ನಾಗಿತವ ಒಂದು ಒಳ್ಳೆ ಸೀರೆ ಇಲ್ಲ, ಬರೊ ಬೇಸ್ತಾರ ಅವಳ ಅಣ್ಣನ ಮಗಳ ಮದುವೆ ಅದೆ, ರೇಷ್ಮೆಸೀರೆ ತಕೊಟ್ರೆ ಅವಳಿಗೂ ಖುಷಿ, ಅಂಗೆ ಮದುವೆಗು ಹಾಕಹೋಗ್ಬದಲ್ಲ ಅದಿಕ್ಕೆ'. 'ಒಳ್ಳೆ ಯೋಚನೇನೆ ಮಾಡಿದ್ದಿ, ಪಾಪ ನಾಗಿನು ಒಳ್ಳೆ ಮನ್ಸೆ, ಯಾವುದಕ್ಕೂ ಆಸೆ ಪಟ್ಟವಳಲ್ಲ ತಕೊಂಡೋಗಿ ಕೊಡು, ಹಾಕೊಂಡು ಸಂತೋಷಪಡ್ತಳೆ'. 'ಅದ್ಕೆ ಅವ್ವರೆ ಅದ್ರು ಬೆಲೆಯಲ್ಲ ನಂಗೆ ಗೊತ್ತಾಗಕಿಲ್ಲ, ನೀವೇನಾರ ಅಷ್ಟು ಇಷ್ಟು ಅಂತ ಹೇಳುದ್ರೆ ಮುಂದಿಂದು ಯೋಚನೆ ಮಾಡ್ತಿನಿ' ಗೌಡ್ತಿ ಉತ್ತರಕ್ಕೆ ಕಾಯುತ್ತ ನಿಂತ ಮಾದ. ಒಂದು ಕ್ಷಣ ಯೋಚಿಸಿದ ಗೌಡ್ತಿ, 'ನನಗೆ ತಿಳಿದಂಗೆ ಈ ರೇಷ್ಮೆಸೀರೆಗಳೆಲ್ಲ ಒಂದು ಸಾವಿರದ ಮೇಲೆ ವರ್ತು ಕೆಳಗಂತು ಇಲ್ಲ ಕಣ'. 'ಏನು ಅವ್ವರೆ ಒಂದು ಸಾವಿರವ !', ಮಾದ ಪಿಣಿ ಪಿಣಿ ಎಂದು ಕಣ್ಣು ಬಿಡುತ್ತಾ ಕೇಳಿದ. 'ಹೌದು ಮಾದ ರೇಷ್ಮೆಸೀರೆ ಅಂದ್ರೆ ಏನು ಕಮ್ಮಿಯ, ಸಿರಿವಂತ್ರು ಹಾಕಳೊ ಸೀರೆಗಳವು'. ಗೌಡ್ತಿ ಮಾತು ಕೇಳುತ್ತಲೇ ಮಾದನ ಮುಖ ಚಿಕ್ಕದಾಯಿತು. ಮಾತು ಮುಂದುವರಿಸದೆ ಮನೆ ಕಡೆ ಹೊರಟ. ದಾರಿಯುದ್ದಕ್ಕೂ ಗೌಡ್ತಿ ಹೇಳಿದ ಒಂದು ಸಾವಿರ ಅನ್ನೋ ಪದ ಮತ್ತೆ ಮತ್ತೆ ಕೇಳಿಸಿದಂತಾಗುತ್ತಿತ್ತು. ಮಾದ ಒಟ್ಟಿಗೆ ಅಷ್ಟು ದುಡ್ಡನ್ನು ನೋಡಿದವನಲ್ಲ. ಚಿಕ್ಕಂದಿನಿಂದಲೂ ಗೌಡ್ರು ಮನೇಲಿ ಕೆಲಸಕ್ಕಿದ್ದುದ್ರಿಂದ ಬೇರೆ ಕಡೆ ಹೋಗಿ ಕೆಲಸ ಮಾಡ್ಬೇಕು, ಹಣ ಸಂಪಾದನೆ ಮಾಡ್ಬೇಕು ಅಂತ ಅನ್ನಿಸಿರಲಿಲ್ಲ. ನಾಗಿನೂ ದುಡ್ಡಿಗಾಗಿ ಆಸೆ ಪಟ್ಟೋಳಲ್ಲ. ಇಷ್ಟು ದಿನ ದುಡಿದಿದ್ರಲ್ಲಿ ಒಂದು ರೂಪಾಯಿನೂ ಇಟ್ಕೊಂಡಿಲ್ಲ. 'ಬೇರೆಯವರತ್ರ ಸಾಲ ಕೇಳಿ ಅಭ್ಯಾಸನೂ ಇಲ್ಲ, ಹಂಗೂ ಮೀರಿ ಈಸ್ಕಂಡ್ರುನು ತೀರಿಸದಾದ್ರು ಹೆಂಗೆ ? ಗೌಡ್ರು ಮನೆ ಬಿಟ್ಟು ಬೇರೆಯವತ್ರಕ್ಕೆ ಕೆಲಸಕ್ಕೆ ಹೋದ್ರೆ, ಗೌಡ್ರು ಸರಿಯಾಗಿ ದುಡ್ಡುಕೊಡ್ತಿರ್ಲ್ವೇನೊ ಅದುಕ್ಕೆ ನಮ್‌ತವ ಬಂದವ್ನೆ ಅನ್ಕೊಂಡರೇನೊ, ಇಲ್ಲ ಸಾಯೋತನ್ಕ ನಿಮ್ಮನೇಲೆ ಕೂಲಿ ಮಾಡ್ಕಂಡಿರ್ತಿನಿ ಅಂತ ಹೇಳಿ ಗೌಡ್ರುತವನೇ ದುಡ್ ಕೇಳ್ಬುಡನಾ...', ಹಿಂಗೆ ಹತ್ತಾರು ಪ್ರಶ್ನೆಗಳನ್ನ ಮನಸ್ಸಿನಲ್ಲೇ ಹಾಕಿಕೊಂಡ. ಎಷ್ಟೇ ಯೋಚಿಸಿದರು ಯಾವುದೂ ಸರಿ ಅನ್ನಿಸಲಿಲ್ಲ.

ಮೇವ್ ತರಕ್ಕೋದವ್ನು ಇಷ್ಟೊತ್ತಾದ್ರು ಬರ್ಲಿಲ್ವಲ್ಲ ಅಂತ ನಾಗಿ ಬಾಗಿಲತ್ರನೇ ದಾರಿ ನೋಡ್ಕಂಡು ನಿಂತಿದ್ಲು. ದೂರದಿಂದ ಮಾದ ಬರೋದು ಕಾಣಿಸ್ತು, ತಣ್ಣಗಾಗಿರೊ ಕಾಫಿನ ಬಿಸಿ ಮಾಡವ ಅಂತ ಒಳಿಕೆ ಹೊಂಟ್ಲು. ಒಳಿಕೆ ಬಂದ ಮಾದ ಮೂಲೆಮಡಿಕೆಲಿ ಎಲ್ಲಾರ ಯಾವಗಾರ ದುಡ್ಡಿಟ್ಟಿರಬಹುದು ಅಂತ ಹುಡುಕಿ ನೋಡಿದ. ಒಂದು ಪೈಸೆನೂ ಸಿಗಲಿಲ್ಲ. 'ಸಿಗೋದಿಲ್ಲ ಅಂತ ಗೊತ್ತಿದ್ರು ಹುಡುಕಿದೆನಲ್ಲ, ನಂಗೇನಾದ್ರು ತಲೆಗಿಲೆ ಕೆಟ್ಟದ ?', ಎಂದು ಮನಸ್ಸಿನಲ್ಲೇ ಅಂದುಕೊಂಡು ಸುಮ್ಮನಾದ. ಅಷ್ಟ್ರಲ್ಲಿ 'ಯಾಕಿಷ್ಟು ತಡ ಆಯ್ತು' ಅನ್ಕೊಂಡು ಕೈಯಲ್ಲಿ ಕಾಫಿ ಲೋಟ ಇಡ್ಕಂಡು ನಾಗಿ ಬಂದ್ಲು. ಮುಖ ಕೊಟ್ಟು ಮಾತನಾಡದೆ, 'ಹಂಗೆ ಒಸಿ ಕೆಲ್ಸ ಇತ್ತು' ಅಂದ. ಬಿಸಿ ಬಿಸಿ ಕಾಫಿನ ಗಟಗಟ ಕುಡಿದು ಹೊರಟೇಬಿಟ್ಟ. ರಾತ್ರಿ ಬೇಸರದಿಂದ ಇನ್ನು ಹೊರಗೆ ಬಂದಿಲ್ಲ ಅನ್ನೋದು ನಾಗಿಗೆ ತಿಳಿತು. ಮಧ್ಯಾಹ್ನ ಊಟಕ್ಕೆ ಬಂದಾಗ ಸೀರೆ ವಿಷ್ಯ ಕೇಳುವ ಅಂದುಕೊಂಡೋಳು ಊಟಕ್ಕೆ ಬಂದ ಮಾದನ ಮುಖ ನೋಡಿ ಈಗ ಕೇಳದು ಸರಿ ಅಲ್ಲ ಅಂತ ಸುಮ್ಮನಾಗಿದ್ಲು. ಈಕಡೆ ಮಾದನ ಪ್ರಶ್ನೆಗಳಿಗೆ ಉತ್ತರವೇ ಸಿಗಲಿಲ್ಲ. ಎಷ್ಟೇ ಯೋಚಿಸಿದ್ರು ಆ ಒಂದು ಸಾವಿರಕ್ಕೆ ದಾರಿನೇ ಕಾಣಿಸ್ತಿಲ್ಲ. ಆಗಿದ್ದಾಗಲಿ ಗೌಡ್ರುತವನೇ ಕೇಳಿಬಿಡುವ ಅಂತ ಹೊರಟೇ ಬಿಟ್ಟ. ಅಷ್ಟೊತ್ತಿಗಾಗಲೇ ರೇಷ್ಮೆಸೀರೆ ವಿಷ್ಯ ಗೌಡ್ತಿಯಿಂದ ಗೌಡ್ರು ಕಿವಿಗೆ ಬಿದ್ದಿತ್ತು. ಗೌಡ್ರು ಮುಂದೆ ಕೈ ಕಟ್ಟಿ ತಲೆತಗ್ಗಿಸಿ ನಿಂತ ಮಾದನಿಗೆ ಹೇಗೆ ಕೇಳ್ಬೇಕು ಅಂತ ತಿಳಿಲಿಲ್ಲ. 'ಏನ್ ಮಾದ, ನಾಗಿಗೆ ರೇಷ್ಮೆಸೀರೆ ತಕೊಡ್ತೀನಿ ಅಂತಿದ್ದಂತೆ ದಿಟ್ವ ?' ಗೌಡ್ರೇ ಮಾತನ್ನು ಶುರುಮಾಡಿದ್ರು. 'ಹೂ ಬುದ್ಧಿ. ಏನೊ ತಕೊಡುವ ಅನ್ಕಂದೆ, ಆದ್ರೆ ಈ ಬಡವನ ಕೈಯಲ್ಲಿ ಅಟೊಂದು ದುಡ್ಡು ಎಲ್ಲಿಂದ ಬರ್ಬೇಕು ಹೇಳಿ, ಅದ್ಕೆಯ...', ಅರ್ಧಕ್ಕೆ ನಿಲ್ಲಿಸಿದ ಮಾದ. 'ಅದ್ಕೆ ಏನ್ ಮಾಡುವ ಅಂತ ?'. ಗೊತ್ತಿಲ್ರ, ನಮ್ಗೆ ದಣಿಗಳು ಅಂತ ಇರೋರು ನೀವೊಬ್ರೆಯ, ನೀವೆ ಏನಾದ್ರು ಸಹಾಯ ಮಾಡಿದ್ರೆ...'. 'ಅಂಗಂದ್ರೆ ಎಂಗೆ ಮಾದ, ನಾಳಿಕ್ ಬಾ ನೋಡವ', ಅಂದವ್ರೆ ಮನೆ ಒಳಿಕೆ ಒಂಟ್ಬುಟ್ರು. 'ನೋಡವ ಅಂದ್ರೆ ದಿಟ ಕೊಡ್ತಾರೆ, ಅಂಗಾರೆ ನಾಗಿಗೆ ರೇಷ್ಮೆಸೀರೆ ತಕೊಡದೇಯ', ಅಂದುಕೊಂಡು ಒಳಗೊಳಗೆ ಖುಷಿಪಟ್ಟುಕೊಂಡ. 'ಆದ್ರು ಈಸ್ಕಂಡ್ ದುಡ್ನ ವಾಪಸ್ ಯಂಗೆ ಕೊಡದು ? ಇಷ್ಟು ದಿನದಿಂದ ಗೌಡ್ರುತವ ಏನನ್ನು ಕೇಳ್ದೆ ಇದ್ದವ ಈಗ ಕೇಳಿ ಸಣ್ಣವನಾಗಿ ಬಿಟ್ನೇನೊ' ಅನ್ನಿಸಕ್ಕೆ ಶುರುವಾಯ್ತು.

ಇತ್ತ ಮಾದ ಇನ್ನು ಮನೆಗೆ ಬರ್ದೆ ಇರೊದನ್ನ ನೋಡಿ ತಾನೆ ಗೌಡ್ರುಮನೆತಕೆ ಹೊಂಟ್ಲು ನಾಗಿ. ನಾಗಿನ ನೋಡಿ ಗೌಡ್ತಿ, 'ಎಲ್ಲೆ ರೇಷ್ಮೆಸೀರೆ' ಅಂದ್ಲು. ನಾಗಿಗೆ ಗೌಡ್ತಿ ಮಾತು ಅರ್ಥ ಆಗ್ಲಿಲ್ಲ. 'ಯಾವ್ ಸೀರೆನವ್ವ ?', ಅಂದ್ಲು. 'ನಿನ್ ಅಣ್ಣನ್ ಮಗಳು ಮದುವೆ ಅಂತೆ, ನೀನು ರೇಷ್ಮೆಸೀರೆ ಹಾಕೊಂಡು ಹೋಗ್ಲಿ ಅಂತ ನಿನ್ ಗಂಡ ಸೀರೆ ತಕೊಡಕ್ಕೆ ದುಡ್ಡ್ ಏನ್ ಮಾಡದು ಅಂತ ಯೋಚನೆ ಮಾಡ್ತಿದ್ದ, ಸಿಕ್ತಂತ ದುಡ್ಡು ? ತಕೊಟ್ನ ಸೀರೆನ ? ಎಂತ ಬಣ್ಣದ್ದು ?'. ಗೌಡ್ತಿ ಪ್ರಶ್ನೆಗಳಿಗೆ ಏನ್ ಉತ್ತರಿಸ್ಬೇಕು ಅಂತ ತಿಳಿಲಿಲ್ಲ. 'ನಂಗೇನು ಗೊತ್ತಿಲ್ಲ ಕಣ್ರವ್ವ', ಅಂದವಳೇ ಮನೆ ದಾರಿ ಹಿಡಿದ್ಲು. ನಾಗಿ ಮನಸ್ಸಿನಲ್ಲಿದ್ದ ಸೀರೆ ವಿಷ್ಯ ಮಾದನಿಗೆ ಅರ್ಥ ಆಗಿ, ಸೀರೆ ತಕೊಡಕ್ಕೆ ಅವನು ಮನಸ್ಸು ಕೆಡಿಸ್ಕೊಂಡಿರೊದು ನಾಗಿಗೆ ತಡವಾಗಿ ಮನವರಿಕೆ ಆಯ್ತು. ಒಂದು ಕ್ಷಣ ಈ ಎರಡು ದಿನಗಳಿಂದ ತಮ್ಮಿಬ್ಬರ ನಡುವೆ ನಡೆದ ಘಟನೆಗಳನ್ನ ನೆನೆಸ್ಕೊಂಡ್ಲು, ತನ್ನ ಒಂದೇ ಒಂದು ಆಸೆಯಿಂದಾಗಿ ಇಬ್ಬರ ಮನಸ್ಸು ಒಡೆದಿರೋದು ಅರಿವಾಯ್ತು. 'ತನ್ನಿಂದಲೇ ಹಿಂಗೆಲ್ಲಾ ಆಗಿದ್ದು, ತಾನೊಬ್ಬಳು ಮದುವೆಗೆ ಹೋಗದಿದ್ರೆ ಮದುವೆಯೇನು ನಡೀದೆ ಇರಲ್ಲ. ಆದ್ರೆ ನಾನೇನಾದ್ರು ಮನಸ್ಸು ಕೆಡಿಸ್ಕೊಂಡ್ರೆ ನನ್ನನ್ನೇ ಜೀವ ಅಂದುಕೊಂಡಿರೊ ಮಾದನ ಸ್ಥಿತಿ ಏನಾಗ್ಬೇಕು ? ನನಗೆ ಸೀರೆ, ಮದುವೆಗಿಂತ ಮಾದನ ನೆಮ್ಮದಿ, ಪ್ರೀತಿ ಮುಖ್ಯ. ಸಾಕು ಈ ಹಾಳಾದ ಸೀರೆ ಹುಚ್ಚು', ಅನ್ನುತ್ತಾ ಮನೆ ಸೇರಿ ಒಲೆ ಮುಂದೆ ಕುತ್ಲು. ತುಂಬಾ ಹೊತ್ತು ಆದ ಮೇಲೆ ಮಾದ ಮನೆಗೆ ಬಂದ, 'ಯಾಕೆ ತಡ ಆಯ್ತು' ಅಂತ ನಾಗಿನೂ ಕೇಳಲಿಲ್ಲ. ಬದಲಾಗಿ ಮೊದಲಿನಂತೆ ಪ್ರೀತಿ ತುಂಬಿದ ನಗುವಿನೊಂದಿಗೆ ಊಟ ಹಾಕಿದಳು. ಮಾದನು ನಾಳೆ ದುಡ್ಡು ಸಿಗುತ್ತಲ್ಲ ಅಂತ ನೆಮ್ಮದಿಯಿಂದ ಇದ್ದ. ಬೆಳಿಗ್ಗೆ ಇನ್ನು ಮಲಗಿದ್ದ ಮಾದನಿಗೆ ಯಾರೊ ಜೋರಾಗಿ ಕೂಗಿದ ಶಬ್ಧ ಕೇಳಿಸಿತು. ಥಟ್ ಅಂತ ಎದ್ದು ನೋಡಿದರೆ ನಾಗಿ ಬಚ್ಚಲಲ್ಲಿ ಕಾಲು ಜಾರಿ ಬಿದ್ದಿದ್ದಳು. ನಾಗಿಯ ಕೈ ಹಿಡಿದು ಕರೆದುಕೊಂಡು ಬಂದ, ಏನಾಗಿದೆ ಎಂದು ನೋಡಿದರೆ, 'ಬಲಗಾಲು ಉಳುಕಿರ್ಬೇಕು' ಅಂದ್ಲು. ಇತ್ತ ಮಾದ ಎಣ್ಣೆ ಬಿಸಿ ಮಾಡಿ ತಂದು ಕಾಲಿಗೆ ಸವರ್ತಾಯಿದ್ರೆ, ನಾಗಿ ಅಳುತ್ತ, 'ಈ ಕುಂಟ ಕಾಲು ಹೊತ್ಕೊಂಡು ಮದುವೆಗೆ ಹೆಂಗೋಗ್ಲಿ, ನಾನು ಹೋಗಕಿಲ್ಲ' ಅಂದ್ಲು. ಮಾದನಿಗೆ ಏನ್ ಹೇಳ್ಬೇಕು ಅಂತ ಗೊತ್ತಾಗ್ದೆ, 'ಸರಿ ನಿನ್ ಇಷ್ಟ' ಅಂತ ಹೇಳಿ ಎಣ್ಣೆ ಹಚ್ಚುವುದನ್ನು ಮುಂದುವರಿಸಿದ.

**ಮಧುಶ್ರೀ ಕೆ. ಶಂಕರ್**
ಕೋಣಸಾಲೆ, ಮದ್ದೂರು ತಾಲ್ಲೂಕು
ಮಂಡ್ಯ ಜಿಲ್ಲೆ – ೫೭೧ ೪೧೯



# ಭಾರತ ಅಮೆರಿಕದ ತೆಕ್ಕೆಗೆ – ಒಬಾಮಾ ಭೇಟಿ ಫಲಶ್ರುತಿ

**ಭಾ**ರತಕ್ಕೆ ಅಮೆರಿಕ ಅಧ್ಯಕ್ಷ ಬರಾಕ್ ಒಬಾಮಾ ನೀಡಿದ ಮೂರು ದಿನಗಳ ಭೇಟಿ ನಿರೀಕ್ಷಿತ ಪರಿಣಾಮಗಳನ್ನೇ ತಂದಿದೆ. ಭಾಜಪ ನಾಯಕತ್ವದ ಮೋದಿ ಸರಕಾರ ಅಮೆರಿಕದೊಂದಿಗೆ ಸಂಬಂಧಗಳನ್ನು ಬೆಸೆಯಲು ಏನು ಬೇಕಾದರೂ ಮಾಡಲು ಸಿದ್ಧ ಎನ್ನುವುದನ್ನು ರುಜುವಾತು ಮಾಡಿದೆ. ಎರಡೂ ದೇಶಗಳು ಸಹಿ ಹಾಕಿದ ಒಪ್ಪಂದಗಳು ಹಲವು. ಇದರಲ್ಲಿ ಬಚ್ಚಿಟ್ಟಿರುವುದು ಎಷ್ಟು, ಬಹಿರಂಗಪಡಿಸಿರುವುದು ಎಷ್ಟು ಎನ್ನುವುದು ಮುಖ್ಯ. ಬಲಪಂಥೀಯ ಮತೀಯವಾದಿ ಭಾಜಪ ಅಮೆರಿಕ ದೊಂದಿಗೆ ಕೈಜೋಡಿಸಲು ಕಾಂಗ್ರೆಸ್ಸಿನ ಮನಮೋಹನ್ ಸಿಂಗ್ ಸರಕಾರಕ್ಕಿಂತ ಒಂದು ಹೆಜ್ಜೆ ಮುಂದು. ಅಧಿಕಾರದಲ್ಲಿಲ್ಲದಾಗ ಒಂದು ನಡೆ, ಅಧಿಕಾರ ಗ್ರಹಣ ಮಾಡಿದ ಮೇಲೆ ಇನ್ನೊಂದು ಎಂಬುದನ್ನು ಮೋದಿ ಸರಕಾರ ಸಾಕ್ಷೀಕರಿಸಿದೆ. ಪೂರ್ಣ ವಿವರಗಳನ್ನು ನೀಡದಿರುವ ನಾಗರಿಕ ಪರಮಾಣು ಒಪ್ಪಂದ ಕಾರ್ಯಗತ ಮಾಡುವ ಕುರಿತ ವ್ಯವಹಾರವೇ ಅದಕ್ಕೆ ಉದಾಹರಣೆ.

ಅಮೆರಿಕದೊಂದಿಗೆ ನಾಗರಿಕ ಪರಮಾಣು ಒಪ್ಪಂದವನ್ನು ೨೦೦೮ರಲ್ಲಿ ಯುಪಿಎ ಸರಕಾರದ ಪ್ರಧಾನಿ ಮನಮೋಹನ್ ಸಿಂಗ್ ಮಾಡಿಕೊಂಡಾಗಲೇ ಬೇಕಾದಷ್ಟು ವಿವಾದಗಳಿದ್ದವು. ಎಡಪಕ್ಷಗಳು ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂಪಡೆದಿದ್ದು ಕೂಡ ಈ ಒಪ್ಪಂದದ ಸಲುವಾಗಿಯೆ. ನಾಡಿನ ವಿಜ್ಞಾನಿಗಳು, ತಂತ್ರಜ್ಞರು, ಭದ್ರತಾ ಪರಿಣತರು ಒಪ್ಪಂದವನ್ನು ವಿರೋಧಿಸಿದ್ದರು. ಈ ಒಪ್ಪಂದದಿಂದ ಭಾರತದ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಅಮೆರಿಕಾಗೆ ಮೂಗು ತೂರಿಸಲು ಅವಕಾಶವಾಗುತ್ತದೆ. ದೇಶದ ಭದ್ರತೆಗೆ ಸಾರ್ವಭೌಮತ್ವಕ್ಕೆ ಧಕ್ಕೆಯಾಗುತ್ತದೆ ಎಂಬ ಟೀಕೆಗಳಿದ್ದುವು. ಈ ಒಪ್ಪಂದದ ಪ್ರಕಾರ ಭಾರತ ಅಮೆರಿಕದಿಂದ ೧೦,೦೦೦ ಮೆಗಾವಾಟ್ ಸಾಮರ್ಥ್ಯದ ನ್ಯೂಕ್ಲಿಯರ್ ರಿಯಾಕ್ಟರುಗಳನ್ನು ಖರೀದಿಸಲು ಒಪ್ಪಿಕೊಂಡಿತ್ತು. ಇದು ಒಂದು ಅನಗತ್ಯವಾದ, ಅಮೆರಿಕದ ನ್ಯೂಕ್ಲಿಯರ್ ಲಾಬಿಯನ್ನು ಓಲೈಸಲು ಮಾಡಿಕೊಂಡ ದುಬಾರಿಯಾದ ಒಪ್ಪಂದ. ಅಪಘಾತ ಏನಾದರೂ ಸಂಭವಿಸಿದರೆ ಹೊಣೆ ಯಾರು ? ರಿಯಾಕ್ಟರ್ ಒದಗಿಸಿದವರೇ, ಇಲ್ಲ ಅದನ್ನು ನಡೆಸುವವರೇ ಎನ್ನುವುದಕ್ಕೆ ಯುಪಿಎ ಸರಕಾರ ಮಸೂದೆಯೊಂದನ್ನು ಪಾರ್ಲಿಮೆಂಟಿನಲ್ಲಿ ಮಂಡಿಸಿತ್ತು. ಸರಕಾರ ತಂದ ಮಸೂದೆಯಲ್ಲಿ ರಿಯಾಕ್ಟರ್ ಸರಬರಾಜು ಮಾಡಿದ ಕಂಪೆನಿಗಳನ್ನು ರಕ್ಷಿಸುವ ನಿಬಂಧನೆಗಳಿದ್ದುವು. ಪಾರ್ಲಿಮೆಂಟಿನಲ್ಲಿ ತಿದ್ದುಪಡಿ ತಂದು ಸರಬರಾಜುದಾರರನ್ನು ಹೊಣೆಯಾಗಿಸಿತ್ತು. ಈಗ ಮೋದಿ ಸರಕಾರ ಅವಘಡದ ಹೊಣೆಗಾರಿಕೆಗೆ ಇನ್ಶೂರೆನ್ಸ್ ಕವಚ ತೊಡಿಸಿ ಸರಬರಾಜುದಾರರನ್ನು ಕಾಪಾಡಿದೆ. ಈ ಬಗ್ಗೆ ತೆರೆಯಮರೆಯಲ್ಲಿ ಏನೇನು ನಡೆದಿದೆಯೋ ಅದು ಇನ್ನೂ ರಹಸ್ಯವೆ. ಅಮೆರಿಕ ಅವಘಡದ ವಿಚಾರದಲ್ಲಿ ಹೊಣೆ ಹೊರಲು ತೀವ್ರ ವಿರೋಧ ವ್ಯಕ್ತಪಡಿಸಿತ್ತು. ಹಾಗಾಗಿ ಒಪ್ಪಂದ ಕಾರ್ಯಗತವಾಗಿರಲಿಲ್ಲ ಆರೇಳು ವರ್ಷಗಳಿಂದ. ಈಗ ಮೋದಿ ಸರಕಾರ ಅಮೆರಿಕದ ಒತ್ತಡಗಳಿಗೆ ಮಣಿದು ಒಪ್ಪಂದವನ್ನು ಕಾರ್ಯಗತಗೊಳಿಸಲು ಸಿದ್ಧವಾಗಿದೆ.

ಇದು ಒಂದು ಬಗೆಯಾದರೆ, ಇದಕ್ಕಿಂತ ಹೆಚ್ಚು ಅಪಾಯಕಾರಿಯಾದದ್ದು ಏಷಿಯಾ – ಪೆಸಿಫಿಕ್ ಮತ್ತು ಹಿಂದು ಮಹಾಸಾಗರ ವಲಯದಲ್ಲಿ ಅಮೆರಿಕದ ಹುನ್ನಾರಗಳ ಜೊತೆ ಕೈಜೋಡಿಸಲು ಭಾರತ ಮುಂದಾಗಿರುವುದು. ಹಾಗೂ ರಕ್ಷಣಾ ಸಾಮಗ್ರಿಗಳನ್ನು ದೊಡ್ಡ ಪ್ರಮಾಣದಲ್ಲಿ ಖರೀದಿಸಲು ಮಾಡಿಕೊಂಡಿರುವ ಒಪ್ಪಂದಗಳು. ಹಿಂದೆ ವಾಜಪೇಯಿ ಪ್ರಧಾನಿಯಾಗಿದ್ದಾಗ ಎನ್‌ಡಿಎ ಸರಕಾರ ವಾಷಿಂಗ್ಟನ್–ಟೆಲ್‌ಅವೀವ್ (ಇಸ್ರೇಲ್) – ದೆಹಲಿ ಕೂಟದ ಯೋಚನೆ ಮಾಡಿತ್ತು. ಈಗ ಮೋದಿ ಸರಕಾರ ಅದಕ್ಕೆ ಟೋಕಿಯೊ ಮತ್ತು ಕ್ಯಾನ್‌ಬೆರಾಗಳನ್ನು ಸೇರಿಸಿದೆ. ಮೋದಿ ಅಧಿಕಾರ ವಹಿಸಿಕೊಂಡ ಮೇಲೆ ಜಪಾನ್ ಮತ್ತು ಆಸ್ಟ್ರೇಲಿಯಗಳಿಗೆ ಭೇಟಿ ನೀಡಿದ್ದರು ಎನ್ನುವುದನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಈ ಹೊಂದಾಣಿಕೆ ಏಷಿಯಾದ ಪ್ರಬಲ ರಾಷ್ಟ್ರಗಳಲ್ಲಿ ಒಂದಾದ ಚೀಣಾದ ಪ್ರಾಬಲ್ಯಕ್ಕೆ ಕಡಿವಾಣ ಹಾಕುವ ಉದ್ದೇಶದಿಂದ ಕೂಡಿದ್ದು ಎನ್ನುವುದು ಬೇರೆಯೇ ಪ್ರಶ್ನೆ. ಏಕೆಂದರೆ ಅಮೆರಿಕ ಚೀಣಾದ ಮಿತ್ರರಾಷ್ಟ್ರವಾಗಿದ್ದರೂ, ಅದನ್ನು ನಿಯಂತ್ರಿಸಲು ಅಗತ್ಯವಾದ ಎಲ್ಲ ಕ್ರಮಗಳನ್ನೂ ಜಾಗರೂಕತೆಯಿಂದ ಕೈಗೊಳ್ಳುತ್ತಿದೆ.

ಭಾರತಕ್ಕೆ ಒಬಾಮಾ ಭೇಟಿಯಿಂದ ಅಮೆರಿಕದ ಮಿಲಿಟರಿ–ಕೈಗಾರಿಕಾ ಸಂಕೀರ್ಣಕ್ಕೆ ಭಾರಿ ಪ್ರಯೋಜನವಾಗಿದೆ. ಈಗ ಮಾಡಿಕೊಂಡಿರುವ ವಿವಿಧ ಒಪ್ಪಂದಗಳು ಭಾರತವನ್ನು ಅಮೆರಿಕದ ಮೇಲೆ ಹೆಚ್ಚು ಅವಲಂಬಿತವಾಗಿ ಮಾಡುತ್ತದೆ. ಮೊದಲಿನಿಂದಲೂ ಅಮೆರಿಕ ತನ್ನ ರಕ್ಷಣಾ ಸಾಮಗ್ರಿಗಳಿಗೆ ಸಂಬಂಧಪಟ್ಟ ದೇಶಗಳನ್ನು ಮಾರುಕಟ್ಟೆಯಾಗಿ ಪರಿಗಣಿಸುವುದೇ ಹೊರತು, ತಯಾರಿಕೆಗೆ ಅವಕಾಶ ನೀಡುವುದಿಲ್ಲ, ತಂತ್ರಜ್ಞಾನವನ್ನೂ ಹಂಚಿಕೊಳ್ಳುವುದಿಲ್ಲ. 'ಭಾರತದಲ್ಲೇ ತಯಾರಿಸಿ' ಎನ್ನುವುದನ್ನು ಅಮೆರಿಕ ಯಾವತ್ತೂ ಒಪ್ಪಿಲ್ಲ. ಇದುವರೆಗೆ ನಮ್ಮ ರಕ್ಷಣಾ ವ್ಯವಸ್ಥೆಗೆ ಪ್ರಧಾನವಾಗಿ ರಷ್ಯಾದ ಶಸ್ತ್ರಾಸ್ತ್ರಗಳು ಸರಬರಾಜು ಆಗುತ್ತಿತ್ತು. ಈಗ ಅದನ್ನು ಹಿಂದಿಕ್ಕುವುದು ಅಮೆರಿಕದ ಗುರಿ. ಅಮೆರಿಕದ ಬಂಡವಾಳವನ್ನು ಆಕರ್ಷಿಸಲು ನಡೆಮುಡಿ ಕಟ್ಟಿ ನಿಂತಿರುವ ಮೋದಿ ಸರಕಾರ ಎಷ್ಟು ಬೇಕಾದರೂ ಶರಣಾಗಲು ಸಿದ್ಧ ಎಂಬುದಕ್ಕೆ ಒಬಾಮಾನ ಮೂರು ದಿನಗಳ ಭೇಟಿ ಸಾಕ್ಷಿಯಾಗಿದೆ. ಈಗಾಗಲೇ ಇನ್ಶೂರೆನ್ಸ್ ಕ್ಷೇತ್ರದಲ್ಲಿ ವಿದೇಶೀ ಬಂಡವಾಳದ ಪ್ರಮಾಣವನ್ನು ಹೆಚ್ಚಿಸಲು ಕಾನೂನಿಗೆ ತಿದ್ದುಪಡಿ ಮಾಡಿದೆ ಸುಗ್ರೀವಾಜ್ಞೆ ಮೂಲಕ. ಭಾರತದ ಪೇಟೆಂಟ್ ಕಾಯಿದೆಯನ್ನು ಅಮೆರಿಕದ ಬಹುರಾಷ್ಟ್ರೀಯ ಕಂಪೆನಿಗಳಿಗೆ ಅನುಕೂಲ ವಾಗುವಂತೆ ಮಾರ್ಪಾಟು ಮಾಡಲು ಸರಕಾರ ಮೊದಲ ಹೆಜ್ಜೆ ಇರಿಸಿದೆ. ವಿಶ್ವ ವಾಣಿಜ್ಯ ಸಂಸ್ಥೆ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಅಮೆರಿಕ ಬೌದ್ಧಿಕ ಆಸ್ತಿ ಹಕ್ಕುಗಳನ್ನು ಕಾಪಾಡುವಂತೆ ಭಾರತದ ಮೇಲೆ ಒತ್ತಡ ತರುತ್ತಲೇ ಇತ್ತು. ಈಗ ಮೋದಿ ಸರಕಾರ ಪೇಟೆಂಟ್ ಕಾಯಿದೆಯನ್ನು ಪರಿಶೀಲಿಸಲು ಸಮಿತಿಯೊಂದನ್ನು ರಚಿಸಿದೆ.

ಒಟ್ಟಿನಲ್ಲಿ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮ ನೀಡಿದ ಭೇಟಿ ಭಾರತವನ್ನು ತನ್ನ ತೆಕ್ಕೆಗೆ ಸೇರಿಸಿಕೊಳ್ಳುವುದರಲ್ಲಿ ಯಶಸ್ವಿಯಾಗಿದೆ. ಸ್ವಾತಂತ್ರ್ಯಾನಂತರದಲ್ಲಿ ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಎತ್ತಿಹಿಡಿದು, ಯಾವ ಬಣಕ್ಕೂ ಸೇರದೆ ಅಲಿಪ್ತ ನೀತಿಯನ್ನು ಅನುಸರಿಸುತ್ತ ಬಂದಿದ್ದ ದೇಶ ಇಂದು ಸಂಪೂರ್ಣವಾಗಿ ಅಮೆರಿಕದ ಹಿಂಬಾಲಕವಾಗಿರುವುದು ವಿಪರ್ಯಾಸ. ಮನಮೋಹನ್ ಸಿಂಗ್ ಪ್ರಾರಂಭಿಸಿದ ಕಾರ್ಯವನ್ನು ಈಗ ಮೋದಿ ಮುಗಿಸಿದ್ದಾರೆ. ಉಳಿದಂತೆ ಒಬಾಮಾ ಭಾರತದ ಭೇಟಿ, ಗಣರಾಜ್ಯೋತ್ಸವದಲ್ಲಿ ಭಾಗವಹಿಸಿದ್ದು, ಇತರ ಕಲಾಪಗಳಲ್ಲಿ ಭಾಗವಹಿಸಿದ್ದು ಮೋದಿ ಸರಕಾರದ ಪಾಲಿಗೆ ಹೆಗ್ಗಳಿಕೆ. ಆದರೆ ಭಾರತದ ಭವಿಷ್ಯದ ಮಟ್ಟಿಗೆ ಆತಂಕಕಾರಿ. ಭಾರತದ ವಿದೇಶಾಂಗ ವ್ಯವಹಾರಗಳನ್ನು ಅಮೆರಿಕದ ಹಿತಾಸಕ್ತಿಗಳಿಗೆ ಲಗತ್ತಿಸಿರುವುದು ವಿಷಾದನೀಯ. ಅದರ ಪರಿಣಾಮಗಳನ್ನು ಮುಂದಿನ ಪೀಳಿಗೆ ಹೊರಬೇಕಾದೀತು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಜಾನಪದ ಲೋಕದ ತಾತ್ಕಾಲಿಕ ಜಾತ್ಯತೀತತೆ

ಅರುಣ್ ಜೋಳದಕೂಡ್ಲಿಗಿ

**ಕ**ರ್ನಾಟಕದಾದ್ಯಂತ ನಡೆವ 'ತೇರು' ಎಳೆವ ಆಚರಣೆಯ ಒಂದು ಸಂಗತಿಯನ್ನು ನೋಡೋಣ. ಸಾಮಾನ್ಯವಾಗಿ ಗಂಡು ದೇವರ ಹಬ್ಬವನ್ನು ತೇರು ಎಳೆವ ಸಂಪ್ರದಾಯದ ಮೂಲಕ ಹಬ್ಬ ಆಚರಿಸುವ ಪರಂಪರೆ ಕರ್ನಾಟಕದ ತುಂಬ ಇದೆ. ಹೀಗೆ ತೇರು ಎಳೆಯುವಾಗ ಬಾಳೆಹಣ್ಣನ್ನು ಎಸೆಯಲಾಗುತ್ತದೆ. ಎಲ್ಲಾ ಜಾತಿಯ, ಸಮುದಾಯದ ಜನ ಸೇರಿ ಎಸೆವ ಬಾಳೆಹಣ್ಣು ಅವರವರ ಭಕ್ತಿಯನ್ನು ಅರ್ಪಿಸಲು ಮಾಡುವ ಒಂದು ಕ್ರಿಯೆ. ಹೀಗೆ ಎಸೆದ ಬಾಳೆಹಣ್ಣು ಯಾರಿಗೆ ಸಿಗುತ್ತದೆಯೋ ಅದು ಅವರಿಗೆ ದೇವರ ಪ್ರಸಾದವಾಗಿ ಮಾರ್ಪಡುತ್ತದೆ. ಆ ಬಾಳೆಹಣ್ಣನ್ನು ಯಾರು ಎಸೆದರು ಎನ್ನುವುದು ಮುಖ್ಯವಲ್ಲ, ವಿಪರೀತ ಜನಸಂದಣಿಯಲ್ಲಿ ಹಾಗೆ ಗುರುತಿಸುವುದು ಸಾಧ್ಯವೂ ಇಲ್ಲ.

ಹೀಗೆ ಭಿನ್ನ ಜಾತಿ ಸಮುದಾಯದ ಜನ ಎಸೆದ ಬಾಳೆಹಣ್ಣು ಪ್ರಸಾದವಾಗಿ ಜಾತ್ಯತೀತ ಸಂಕೇತವಾಗಿ ಮಾರ್ಪಡುತ್ತದೆ. ಇಲ್ಲಿ ದಲಿತ ಎಸೆದ ಬಾಳೆಹಣ್ಣು ಬ್ರಾಹ್ಮಣನಿಗೆ ಸಿಕ್ಕರೆ ಅವನು ಪ್ರಸಾದವೆಂದೇ ಸ್ವೀಕರಿಸುತ್ತಾನೆ. ಆದರೆ ಅದೇ ದಲಿತ ವ್ಯಕ್ತಿ ನೇರವಾಗಿ ಬ್ರಾಹ್ಮಣನಿಗೆ ಕೊಟ್ಟರೆ, ಆತ ಆ ಬಾಳೆಹಣ್ಣನ್ನು ಸ್ವೀಕರಿಸಲು ನಿರಾಕರಿಸುತ್ತಾನೆ. ಜಾತಿ ಅಡ್ಡಬರುತ್ತದೆ. ಹೀಗೆ ಜಾನಪದ ಆಚರಣೆಯೊಂದು ತಾತ್ಕಾಲಿಕವಾಗಿ ಜಾತ್ಯತೀತ ಸಂದರ್ಭವೊಂದನ್ನು ಸೃಷ್ಟಿಸುತ್ತದೆ. ಆ ಮೂಲಕ ಜಾತಿಯ ಕಟ್ಟುಗಳು ತಾತ್ಕಾಲಿಕವಾಗಿ ಮುರಿಯುತ್ತಿರುತ್ತವೆ. ಬಹುಶಃ ಈ ಸಂಗತಿ ಕರ್ನಾಟಕದ ಜನಪದ ಜಾತ್ಯತೀತತೆಯನ್ನು ಅರ್ಥಮಾಡಿಕೊಳ್ಳುವ ವೈರುಧ್ಯವನ್ನು ಕಾಣಿಸುತ್ತಿದೆ. ಇದು ಈ ಬರಹದ ಪ್ರಮೇಯವೂ ಕೂಡ.

ಜನಪದ ಜಾತ್ಯತೀತತೆಯನ್ನು ಟ್ರಾನ್ಸ್ ಸೆಕ್ಯುಲರಿಸಂ ಎಂದು ಕರೆಯಬಹುದು. ಕಾರಣ ಜಾನಪದ ಹಬ್ಬ ಆಚರಣೆಯ ಸಂದರ್ಭದಲ್ಲಿ ಎಲ್ಲರೂ ಬೆರೆಯುತ್ತಾರೆ, ಈ ಬೆರೆಯುವಿಕೆಯಲ್ಲಿ ಜಾತಿ ಮತಗಳ ಅಂತರ ತಾತ್ಕಾಲಿಕವಾಗಿ ಅಳಿಸಿಹೋಗಿ ಜಾತ್ಯತೀತ ಭಾವವೊಂದರ ಟ್ರಾನ್ಸ್ ಸ್ಥಿತಿಗೆ ತಲುಪುತ್ತಾರೆ. ಈ ಸ್ಥಿತಿಯಲ್ಲಿ ಜಾತಿ ಮರೆತ ಭಾವವೊಂದು ತಾತ್ಕಾಲಿಕವಾಗಿ ಉಂಟಾಗುತ್ತದೆ. ಈ ಭಾವವು ಜಾತಿ ನೆಲೆಯ ಭಾವನೆಯನ್ನು ಸಡಿಲಗೊಳಿಸುತ್ತದೆ. ಹೀಗೆ ಸಡಿಲಗೊಳ್ಳುವಿಕೆಯ ಕಾರಣ ಜಾತಿ ನೆಲೆಯಲ್ಲಿ ಹುಟ್ಟಬಹುದಾದ ದ್ವೇಷವನ್ನು ಕಡಿಮೆಮಾಡುತ್ತಾ ಹೋಗುತ್ತದೆ. ಇಂತಹ ಆಚರಣೆಗಳು ವಾರ್ಷಿಕವಾಗಿ ಪುನರಾವರ್ತನೆ ಆಗುವುದರಿಂದ ಮತ್ತೆ ಮತ್ತೆ ತಾತ್ಕಾಲಿಕ ಜಾತ್ಯತೀತ ಭಾವವೊಂದು ಸೃಷ್ಟಿಯಾಗುತ್ತದೆ. ಇದು ಕರ್ನಾಟಕದ ಜಾನಪದದ ನೆಲೆಯಲ್ಲಿ ವಿವರಿಸಿ ಕೊಳ್ಳಬಹುದಾದ ಜಾತ್ಯತೀತತೆಯ ನೆಲೆಯಾಗಿದೆ.



ಯಾವುದೇ ಕಾಲದ ಹೊಸ ಅನುಭವ, ಹೊಸ ಸಂಗತಿಗಳ ಹೊಟ್ಟೆಯೊಳಗಿಂದಲೇ ಜಾನಪದದ ಹೊಸ ರೂಪಗಳು ಹುಟ್ಟುತ್ತವೆ. ಈ ಹೊಸ ರೂಪಗಳು ಈಗಾಗಲೆ ಸಿದ್ಧಗೊಂಡ ಜಾನಪದದ ಲಕ್ಷಣಗಳಂತೆ ಇರುವುದಿಲ್ಲ. ಬದಲಾಗಿ ಹೊಸ ಲಕ್ಷಣಗಳನ್ನು ಹೊಂದಿರುತ್ತವೆ. ಹಾಗಾಗಿ ಯಾವುದೇ ಜನಸಮುದಾಯ ಹೊಸ ಕಾಲದ ಸಂಗತಿಗಳ ಬಗ್ಗೆ ಹುಟ್ಟಿಸಿಕೊಂಡ ಕುತೂಹಲ, ವಿಸ್ಮಯ, ಭಯ, ಅಚ್ಚರಿ ಎಲ್ಲವನ್ನೂ ಒಳಗೊಂಡ ಕಥನವೋ, ನಿರೂಪಣೆಗಳೋ ಹೊಸ ಜಾನಪದದ ಸ್ವರೂಪವನ್ನು ಪಡೆಯುತ್ತವೆ. ಉದಾಹರಣೆಗೆ, ಇಂದು ಇಂಟರ್‌ನೆಟ್ ಬಳಕೆದಾರರ ಜನಸಮುದಾಯ ಹೆಚ್ಚುತ್ತಿರುವುದರಿಂದ ನೆಟ್‌ಲೋರ್ ತರಹದ ಹೊಸ ಅಧ್ಯಯನ ಶಾಖೆಗಳು ಹುಟ್ಟುತ್ತಿರುವುದನ್ನು ಗಮನಿಸಬಹುದು. ಹಾಗಾಗಿ ಬದಲಾದ ಜಾನಪದದ ಗ್ರಹಿಕೆಯ ಹಿನ್ನೆಲೆಯಲ್ಲಿಯೂ ಫೋಕ್ ಸೆಕ್ಯುಲರಿಸಂಅನ್ನು ನೋಡಲು ಸಾಧ್ಯವಾಗಬೇಕು.

ಪಶ್ಚಿಮದಿಂದ ಬಂದ ಸೆಕ್ಯುಲರಿಸಂ ಪದವನ್ನು ನೇರವಾಗಿ ನಮ್ಮ ಭಾರತಕ್ಕೆ ಅನ್ವಯಿಸಲು ಸಾಧ್ಯವಿಲ್ಲ. ಕಾರಣ ಮೂಲತಃ ಕ್ರಿಶ್ಚಿಯಾನಿಟಿಯ ನೆಲೆಯಲ್ಲಿ ಮಧ್ಯಮವರ್ಗದಲ್ಲಿ ನಾಸ್ತಿಕವಾದಿ ಸೆಕ್ಯುಲರಿಸಂ ಹುಟ್ಟಿತು. ಆದರೆ ಭಾರತದಲ್ಲಿ ನಾಸ್ತಿಕವಾದಿ ಜಾತ್ಯತೀತತೆ/ಮತಾತೀತತೆ ಕಾಣುವುದು ತುಂಬಾ ವಿರಳ. ಬದಲಾಗಿ ಆಸ್ತಿಕವಾದಿ ಸೆಕ್ಯುಲರಿಸಂ ಇದೆ. ಈ ಸಂಗತಿಯನ್ನು ಮುಖ್ಯ ನೆಲೆಯಾಗಿಟ್ಟುಕೊಂಡು ಕರ್ನಾಟಕದ ಜಾನಪದದ ಹಿನ್ನೆಲೆಯಲ್ಲಿ ಈ ಚರ್ಚೆಯನ್ನು ವಿಸ್ತರಿಸಲು ಪ್ರಯತ್ನಿಸುವೆ.

ವರ್ತಮಾನದಲ್ಲಿ ಕರ್ನಾಟಕದಾದ್ಯಂತ ಪ್ರಚಲಿತ ಇರುವ ಎರಡು ಮುಖ್ಯ ಆಚರಣೆಗಳಾದ ಗ್ರಾಮದೇವತೆಗಳ ಜಾತ್ರೆ ಮತ್ತು ಮೊಹರಂ ಹಬ್ಬವನ್ನು ಆಧಾರವಾಗಿಟ್ಟುಕೊಂಡು ಜಾನಪದದ ತಾತ್ಕಾಲಿಕ ಜಾತ್ಯತೀತತೆಯನ್ನು ವಿವರಿಸಲು ಪ್ರಯತ್ನಿಸುವೆ. ಈ ಎರಡೂ ವರ್ತಮಾನದಲ್ಲಿಯೂ ನಿರಂತರವಾಗಿ ನಡೆವ ಆಚರಣಾ ಲೋಕವಾದ್ದರಿಂದ ಈ ಹಿನ್ನೆಲೆಯ ಚರ್ಚೆಯನ್ನು ನೇರವಾಗಿ ಸದ್ಯದ ಕರ್ನಾಟಕಕ್ಕೆ ಅನ್ವಯಿಸಿ ನೋಡಲು ಸಾಧ್ಯವಿದೆ.

ಮುಖ್ಯವಾಗಿ ಆಧುನಿಕ ಶಿಕ್ಷಣದಿಂದಾಗಿ ವಿದ್ಯಾವಂತ ಸಮುದಾಯದಲ್ಲಿ ಒಂದು ಬಗೆಯ ಜಾತ್ಯತೀತತೆ ಇರುತ್ತದೆ. ಇದನ್ನು ಶಿಕ್ಷಿತ ಜನವರ್ಗದ ಜಾತ್ಯತೀತತೆ ಎಂದು ಕರೆಯಬಹುದು. ಇನ್ನೊಂದು ವಿದ್ವಾಂಸರ ಸೆಕ್ಯುಲರಿಸಂ ಇದೆ. ಇದರಿಂದಾಗಿ ವಿದ್ವತ್ತಿನ ತಿಳುವಳಿಕೆಯಿಂದಾಗಿ ಜಾತಿಭೇದವನ್ನು ಮರೆಯುವಿಕೆ ಸಾಧ್ಯವಾಗಿದೆ. ಈ ಎರಡೂ ಬಗೆಯ ಜಾತ್ಯತೀತತೆಯಲ್ಲಿ ನಟಿಸುವಿಕೆ ಇರುತ್ತದೆ.ಇಲ್ಲಿ ಜಾತಿ ಭೇದವನ್ನು ಮರೆಯುವಿಕೆ ಪ್ರಜ್ಞಾಪೂರ್ವಕವಾಗಿರುತ್ತದೆ. ಹಾಗಾಗಿ ಇಲ್ಲಿ ಜಾತಿಯನ್ನು ಪೂರ್ತಿ ಬಿಟ್ಟಿರುವುದಿಲ್ಲ. ಆದರೆ ಜಾತಿಯನ್ನು ಬಿಟ್ಟ ಹಾಗೆ ವೇಷ ಧರಿಸಿರುವಿಕೆಯೂ ಇರುತ್ತದೆ.

## ವಿಮಾನ

ಆಗಸದಲ್ಹಾರುವ
ಅಲ್ಯುಮಿನಿಯಮ್
ಹಕ್ಕಿ ;
ಆಯ ತಪ್ಪಿ
ಅಪಘಾತವಾಗುವುದು
ಎದುರಾಗುವ ಹಕ್ಕಿ
ಹೊಡೆದರೆ ಡಿಕ್ಕಿ।

**ಡಾ॥ ವಿ. ಪುಗಳೇಂದಿ**
ಬಳ್ಳಾರಿ




# ಕೇಳದ ಪಿಸುಮಾತು



**ನೀ** ಬದುಕಿರುವೆನೆನಬೇಡ
ನೀ ನಡೆವ ಹಾದಿಗೆ ಹದಿನಾರು ಮುಳ್ಳುಗಳು
ಹದಿನಾರು ಕಾಸುಗಳು ಹಾಳು ವಿಷಾದಗಳು
ಎಸೆಯುವರು ಹಾಳಾಗಲೆಂದು.

ನೀ ಬದುಕಿರುವೆನೆನಬೇಡ
ನೀ ನೋಡೊ ನೋಟಕ್ಕೆ ಹದಿನಾರು ಬಣ್ಣಗಳು
ಕಾಣದಿರಲೆಂದು ಕಣ್ಣು ಆಸೆ ನಿರೀಕ್ಷೆ ಭರವಸೆ
ಬಚ್ಚಿಟ್ಟಿದ್ದಾರೆ ಆಕಾಶ ತೋರದೆ.

ನೀ ಬದುಕಿರುವೆನೆನಬೇಡ
ನೀ ಮೂಸೊ ವಾಸನೆಗೆ ಹದಿನಾರು ಗಾಳಿ ಬೆರೆಸುವರು
ಉಸಿರಾಟದಲಿ ಆಮ್ಲಜನಕ ತೆಗೆದು ಬಿರಟೆ ಹಾಕಿಡುವರು
ನಕಾರದ ಭರ್ಜಿಗಳಲ್ಲಿ ತಿವಿದುಬಿಡುವರು.

ನೀ ಬದುಕಿರುವೆನೆನಬೇಡ
ಚಿಂತನೆಯ ಮನಸ್ಸಿಗೆ ಹದಿನಾರು ಒಳಮನಸ್ಸುಗಳ
ನಿಲ್ಲಿಸಿಹರು
ಭಯದ ನೆರಳಲಿ ನೆರಳ ಶಬ್ದದಲ್ಲಿ
ಬಂಧಿಸಿಡುವರು
ಮನರಂಜನೆ ಹೆಸರಲಿ ಪೂಜೆ ನಡೆಸಿಹರು.

ನೀ ಬದುಕಿರುವೆನೆನಬೇಡ
ನಿನ್ನ ಕನಸಿಗೆ ಹದಿನಾರು ಓಟಗಳು ಗೆರೆಗಳು
ಬಣ್ಣವಿಲ್ಲದ ನೀರು ರೂಪವಿಲ್ಲದ ಆಕಾರಗಳು
ಸಮುದ್ರದಲ್ಲಿ ಮುಳುಗಿಸಿ ಸೂರ್ಯನೆದುರು.

ನೀ ಬದುಕಿರುವೆನೆನಬೇಡ
ನಿನ್ನ ದೇಹಕ್ಕೆ ಬೆವರಿನ ಹದಿನಾರು ಸೂತಕಗಳು
ಪರಿಹಾರಗಳು ಅರಿಶಿನದಾರ ನಿಂಬೆಹಣ್ಣು
ಮೆಣಸಿನಕಾಯಿ
ತೆಂಗಿನಕಾಯಿ ಬಾಳೆಹಣ್ಣು ಬೆಲ್ಲ ಜೀರಿಗೆ.

**ಗಂಗಾರಾಂ ಚಂಡಾಳ**
ನಂ. ೪೪೩೭, 'ಜೆ' ಬ್ಲಾಕ್, ಕನಕದಾಸನಗರ
ಮೈಸೂರು – ೫೭೦ ೦೨೨

ಹೀಗಿರುವಾಗ ಜಾನಪದದ ಸೆಕ್ಯುಲರಿಸಂಅನ್ನು ಭಿನ್ನವಾಗಿ ನೋಡಬೇಕಾಗಿದೆ. ಅದನ್ನು ಜನತೆಯ ಸೆಕ್ಯುಲರಿಸಂ, ಟ್ರಾನ್ಸ್ ಸೆಕ್ಯುಲರಿಸಂ ಎಂದು ಹೆಚ್ಚಿನ ಮಟ್ಟಿಗೆ ಕರೆಯಬಹುದಾಗಿದೆ. ಇಲ್ಲಿ ಮುಖ್ಯವಾಗಿ ಹೆಚ್ಚಿನ ಮಟ್ಟಿಗೆ ಗ್ರಾಮೀಣ ಪ್ರದೇಶದಲ್ಲಿ ಈ ಬಗೆಯ ಟ್ರಾನ್ಸ್ ಸೆಕ್ಯುಲರಿಸಂ ಇರುವುದನ್ನು ನೋಡಬಹುದಾಗಿದೆ. ಜನಪದರು ಆತ್ಯಂತಿಕವಾಗಿ ಜಾತ್ಯತೀತತೆಯನ್ನು ಅನುಭವಿಸುತ್ತಾರೆ ಎನ್ನುವುದು ಅತಿರೇಕದ ವಿವರಣೆಯಾಗುತ್ತದೆ. ಆದರೆ ಜಾನಪದದಲ್ಲಿ ಜಾತಿಕಟ್ಟುಗಳನ್ನು ಮೀರಿ ಬೆರೆಯಲು, ಒಂದಾಗಲು ಹಲವು ಆಚರಣೆ, ಸಂಪ್ರದಾಯಗಳಿರುವಂತೆ, ಜಾತಿಯನ್ನು ಗಟ್ಟಿಯಾಗಿ ನಿರೂಪಿಸುವ ಆಚರಣ ಲೋಕವೂ ಇದೆ. ಈ ವೈರುಧ್ಯಗಳ ನೆಲೆಯಲ್ಲಿಯೇ ಜನಪದ ಜಾತ್ಯತೀತತೆಯನ್ನು ಅರ್ಥಮಾಡಿಕೊಳ್ಳ ಬೇಕಿದೆ. ಕೆಲವೊಮ್ಮೆ ಜಾನಪದದಲ್ಲಿ ಜಾತಿಯ ಕಟ್ಟುಗಳ ಒಳಗೇ ಕಲಾಪ್ರಾಕಾರಗಳು, ಆಚರಣೆ, ಸಂಪ್ರದಾಯಗಳು ಏರ್ಪಟ್ಟರೂ ಅವು ಜಾತಿಯನ್ನು ಮೀರಿನಿಲ್ಲುವ ಸಾಧ್ಯತೆಯನ್ನು ಪ್ರಕಟಪಡಿಸುತ್ತವೆ. ಇದುವೆ ಜನಪದ ಜಾತ್ಯತೀತತೆಯ ಲಕ್ಷಣವೆಂದು ಹೇಳಬಹುದು.

ಜನಪದ ಜಾತ್ಯತೀತತೆಯನ್ನು ಟ್ರಾನ್ಸ್ ಸೆಕ್ಯುಲರಿಸಂ ಎಂದು ಕರೆಯಬಹುದು. ಕಾರಣ ಜಾನಪದ ಹಬ್ಬ ಆಚರಣೆಯ ಸಂದರ್ಭದಲ್ಲಿ ಎಲ್ಲರೂ ಬೆರೆಯುತ್ತಾರೆ, ಈ ಬೆರೆಯುವಿಕೆಯಲ್ಲಿ ಜಾತಿ ಮತಗಳ ಅಂತರ ತಾತ್ಕಾಲಿಕವಾಗಿ ಅಳಿಸಿಹೋಗಿ ಜಾತ್ಯತೀತ ಭಾವವೊಂದರ ಟ್ರಾನ್ಸ್ ಸ್ಥಿತಿಗೆ ತಲುಪುತ್ತಾರೆ. ಈ ಸ್ಥಿತಿಯಲ್ಲಿ ಜಾತಿ ಮರೆತ ಭಾವವೊಂದು ತಾತ್ಕಾಲಿಕವಾಗಿ ಉಂಟಾಗುತ್ತದೆ. ಈ ಭಾವವು ಜಾತಿ ನೆಲೆಯ ಭಾವನೆಯನ್ನು ಸಡಿಲಗೊಳಿಸುತ್ತದೆ. ಹೀಗೆ ಸಡಿಲಗೊಳ್ಳುವಿಕೆಯ ಕಾರಣ ಜಾತಿ ನೆಲೆಯಲ್ಲಿ ಹುಟ್ಟಬಹುದಾದ ದ್ವೇಷವನ್ನು ಕಡಿಮೆಮಾಡುತ್ತಾ ಹೋಗುತ್ತದೆ. ಇಂತಹ ಆಚರಣೆಗಳು ವಾರ್ಷಿಕವಾಗಿ ಪುನರಾವರ್ತನೆ ಆಗುವುದರಿಂದ ಮತ್ತೆ ಮತ್ತೆ ತಾತ್ಕಾಲಿಕ ಜಾತ್ಯತೀತ ಭಾವವೊಂದು ಸೃಷ್ಟಿಯಾಗುತ್ತದೆ. ಇದು ಕರ್ನಾಟಕದ ಜಾನಪದದ ನೆಲೆಯಲ್ಲಿ ವಿವರಿಸಿ ಕೊಳ್ಳಬಹುದಾದ ಜಾತ್ಯತೀತತೆಯ ನೆಲೆಯಾಗಿದೆ.

ಆಯಾ ಹಬ್ಬ ಆಚರಣೆ ಮುಗಿದಾದ ನಂತರ, ಜನರು ತಮ್ಮದೇ ಜಾತಿಯ ವಕ್ತಾರರಾಗುತ್ತಾರೆ. ತಮ್ಮ ಜಾತಿಯ ಕಟ್ಟುಗಳ ಒಳಗೆ ಒದರುತ್ತಾರೆ. ಜಾತಿ ನೆಲೆಯಲ್ಲಿ ಧಾರ್ಮಿಕ ವಿಧಿಗಳನ್ನು, ಆಚರಣೆಗಳನ್ನು ಆರಂಭಿಸುತ್ತಾರೆ. ಇದು ಅತಿಗೆ ಹೋದಾಗ ಜಾತಿ ಕಲಹಗಳಿಗೂ ಕಾರಣವಾಗುತ್ತದೆ. ಹೀಗಿರುವಾಗ ಜನರು ಧಾರ್ಮಿಕರಾಗಿದ್ದೂ, ಜಾತಿಯ ಕಟ್ಟುಗಳ ಒಳಗೆ ಜೀವಿಸಿಯೂ ಜಾತ್ಯತೀತತೆಯನ್ನು ಅನುಭವಿಸುವ ವಾತಾವರಣವನ್ನು ಜಾನಪದ ಸೃಷ್ಟಿಸುತ್ತದೆ. ಹಾಗಾಗಿ ಜಾನಪದದ ಜಾತ್ಯತೀತತೆಗೆ ಒಂದೇ ಮುಖವಿಲ್ಲ. ವೈರುಧ್ಯಗಳ ನೆಲೆಯಲ್ಲಿಯೇ ಅರ್ಥಮಾಡಿಕೊಳ್ಳಬೇಕಿದೆ.

'ಭಿನ್ನ ಭೇದವ ಮಾಡಬೇಡಿರೋ...' ತರಹದ ಜನಪದ ಗೀತೆಗಳು ಜಾತಿಪದ್ಧತಿಯನ್ನು ವಿರೋಧಿಸುವ ಅಂಶವನ್ನು ಒಳಗೊಂಡಿವೆ. ಅದೇ ಹೊತ್ತಿಗೆ ಜಾತಿಪದ್ಧತಿಯನ್ನು ಬೆಂಬಲಿಸುವ ಹಾಡುಗಳ ಸಂಖ್ಯೆಯೂ ದೊಡ್ಡದಿದೆ. ಕಾರಣ ಈ ಎಲ್ಲಾ ಹಾಡುಗಳು ಹುಟ್ಟುತ್ತಿದ್ದುದು, ಹಾಡಲ್ಪಡುತ್ತಿದ್ದುದು ಇದೇ ಜಾತಿ ಶ್ರೇಣೀಕರಣವಿರುವ ಸಮಾಜದಲ್ಲಿ ಎನ್ನುವುದನ್ನು ನೆನೆಯಬೇಕು. ಜನಪದ ಗೀತೆಗಳಿಗೆ ಹೋಲಿಸಿದರೆ, ಜನಪದ ಮಹಾಕಾವ್ಯಗಳಲ್ಲಿ ವಿರುದ್ಧ ಆಯಾಮವಿರುವುದನ್ನು ನೋಡಬಹುದು. ಮಲೆಮಹಾದೇಶ್ವರ ಮತ್ತು ಮಂಟೇಸ್ವಾಮಿ, ಮೈಲಾರಲಿಂಗೇಶ್ವರ ಮಹಾಕಾವ್ಯಗಳಲ್ಲಿ ಜಾತಿಯ ಕಟ್ಟುಗಳನ್ನು ಮೀರುವ ಬಗೆ ಶಕ್ತಿಯುತವಾಗಿದೆ. ಮಾದೇಶ್ವರನು ೧೨ನೇ ಶತಮಾನದ ವಚನ ಚಳವಳಿಯನ್ನೇ ಪರೀಕ್ಷೆಗೆ ಒಡ್ಡಿ ಜಾತಿಪದ್ಧತಿಯನ್ನು ವಿರೋಧಿಸುವ ಸಂಗತಿ ಬರುತ್ತದೆ. ಹೀಗೆ ಜನಪದ ಸಾಹಿತ್ಯದ ನೆಲೆಯಲ್ಲಿಯೂ ಜನಪದ ಜಾತ್ಯತೀತತೆಯ ವೈರುಧ್ಯದ ನೆಲೆಗಳು ಕಾಣುತ್ತವೆ. ಜನಪದ ಜಾತ್ಯತೀತತೆಯನ್ನು ಎರಡು ಆಚರಣೆಗಳ ಮೂಲಕ ವಿವರಿಸಲು ಪ್ರಯತ್ನಿಸುವೆ.

**ಗ್ರಾಮದೇವತೆಗಳ ಜಾತ್ರೆ**

ಗ್ರಾಮದೇವತೆಗಳ ಜಾತ್ರೆ ಕರ್ನಾಟಕದಾದ್ಯಂತ ವಾರ್ಷಿಕವಾಗಿ ಪುನರಾವರ್ತನೆಯಾಗುವ ಒಂದು ಆಚರಣೆ. ಇದೊಂದು ದ್ರಾವಿಡ ಸಂಸ್ಕೃತಿಯ ಚಹರೆ. ಈ ಆಚರಣೆಯಲ್ಲಿ ಕೆಳಜಾತಿಗಳು ಗ್ರಾಮದೇವತೆಗೆ ಬಲಿ ಕೊಡುವ ಮೂಲಕ ತಮ್ಮ ಭಕ್ತಿಯನ್ನು ವ್ಯಕ್ತ ಪಡಿಸುತ್ತಾರೆ. ಹಾಗಾಗಿ ಇದೊಂದು ಮಾಂಸಾಹಾರಿಗಳ ಹಬ್ಬವೂ ಹೌದು. ಇದನ್ನು ಗ್ರಾಮೀಣ ಭಾಗದಲ್ಲಿ ಈಗಲೂ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಒಂದೊಂದು ಊರಿನಲ್ಲೂ ಸಾವಿರಾರು ಪ್ರಾಣಿಗಳು ಬಲಿಯಾಗುತ್ತವೆ. ಈ ಹಬ್ಬದಲ್ಲಿ ಕೆಳಜಾತಿಗಳ ಭಾಗವಹಿಸುವಿಕೆ ಹೆಚ್ಚಿರುತ್ತದೆ. ಹೀಗೆ ಕೆಳಜಾತಿಗಳು ವೀರಾವೇಶದಿಂದ ಕುಣಿದು ಕುಪ್ಪಳಿಸಿ ಪ್ರಾಣಿಗಳನ್ನು ಹಿಂಸಿಸುವ ಮೂಲಕ ತಾವು ವರ್ಷಪೂರ್ತಿ ಮೇಲುಜಾತಿಗಳಿಂದ ಅನುಭವಿಸಿದ ಹಿಂಸೆ ಅಪಮಾನವನ್ನು ಮರೆತು ನಿರಾಳ ವಾಗುವಿಕೆಯ ಬಗ್ಗೆ ಮನಃಶಾಸ್ತ್ರೀಯ ವಿಶ್ಲೇಷಣೆಗಳಿವೆ. ಇದರ ಬಗ್ಗೆ ತಕರಾರುಗಳೂ ಇವೆ.



ನೀವು ಇದ್ದೀರಾ, ದಂಡಕ್ಕೆ ಈವರೆಗೆ ಒಂದು ಕೆ.ಜಿ. ಚಿನ್ನವನ್ನು ತರಲಿಲ್ಲಾ ಕಣ್ರೀ..!

ಈ ಹಬ್ಬದ ಉಸ್ತುವಾರಿಯನ್ನು ಆಯಾ ಊರಿನ ಮೇಲುಜಾತಿಯವರು ವಹಿಸಿಕೊಂಡಿರುತ್ತಾರೆ. ಇಲ್ಲಿ ಜಾತಿಗನುಗುಣವಾಗಿ ಕೆಲಸ ಹಂಚಿಕೆಯಾಗಿರುತ್ತದೆ. ಇದು ಜಾತಿ ಶ್ರೇಣೀಕರಣಕ್ಕೆ ತಕ್ಕನಾಗಿರುತ್ತದೆ. ದಲಿತರು ಊರಂಗಳವನ್ನು ಗುಡಿಸುವುದು, ಹಲಗೆ ಬಾರಿಸುವುದು, ತಳವಾರ ಬೆಳಕಿಗೆ ಲೈಟ್ ಹಿಡಿಯುವುದು, ಜೀರರು (ಹೂಗಾರರು) ದೇವಿಗೆ ಹೂ ಸಲ್ಲಿಸುವುದು, ಮಡಿವಾಳರು ಮಡಿ ಹಾಸುವುದು ಇತ್ಯಾದಿ. ಮೇಲುಜಾತಿಯ ಪ್ರತಿನಿಧಿಯೊಬ್ಬ ನಡೆದು ಬರುತ್ತಿದ್ದರೆ ಮಡಿವಾಳ ಜಾತಿಯವ ಆತನ ದಾರಿಗೆ ಮಡಿಸೀರೆಯನ್ನು ಹಾಸುವ ಕೆಲಸವನ್ನು ಮಾಡುತ್ತಾನೆ.

ಈ ಜಾತ್ರೆಯಲ್ಲಿ ಊರಿಗೆ ಊರೇ ಪಾಲ್ಗೊಳ್ಳುತ್ತದೆ. ಜಾತ್ಯತೀತವಾಗಿ ಎಲ್ಲರೂ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ ಎನ್ನುವ ಭಾವವೊಂದನ್ನು ಉಂಟುಮಾಡುತ್ತದೆ. ಆದರೆ ಆ ಹಬ್ಬದ ಸಂದರ್ಭದ ಒಳಗೇ ಒಂದು ಬಗೆಯ ಜಾತಿಯ ಕಟ್ಟುಗಳ ಆಚರಣೆಯೂ ನಡೆಯುತ್ತಿರುತ್ತದೆ. ಆಯಾ ಜಾತಿಯ ಕೆಲಸಗಳನ್ನು ಕೆಳಜಾತಿಗಳು ನಿರ್ವಹಿಸುತ್ತಾ ಜಾತಿ ಪ್ರಜ್ಞೆಯನ್ನು ಗಟ್ಟಿಗೊಳಿಸಿ ಹೊಸ ತಲೆಮಾರಿಗೆ ವರ್ಗಾಯಿಸು ತ್ತಿರುತ್ತಾರೆ. ಅಂದರೆ ಜಾತ್ರೆ ಸಂಭ್ರಮದಲ್ಲಿ ಜಾತ್ಯತೀತ ನೆಲೆಯೊಂದು ಕಾಣಿಸಿದರೆ, ಅದರೊಳಗೇ ಕೆಳಜಾತಿಗಳು ಜಾತಿಪ್ರಜ್ಞೆಯನ್ನು ಮುಂದುವರಿ ಸುತ್ತಿರುತ್ತಾರೆ. ಇದು ಕರ್ನಾಟಕದ ಬಹುಪಾಲು ಜಾತ್ರೆಗಳ ಲಕ್ಷಣ. ಈ ವಾರ್ಷಿಕ ಆಚರಣೆಯಲ್ಲಿ ಜಾತಿ ಮತ್ತೆ ಮತ್ತೆ ರೂಪುಗೊಳ್ಳುತ್ತಾ ಹೋಗುತ್ತದೆ.

ಈಚೆಗೆ ಗ್ರಾಮದೇವತೆಗಳ ಜಾತ್ರೆಗಳು ಕೆಲವೆಡೆ ಬಹುಮಟ್ಟಿಗೆ ನಿಂತಿವೆ. ಇದಕ್ಕೆ ಕಾರಣವನ್ನು ಹುಡುಕಿದರೆ, ಅನೇಕ ಕಡೆ ದಲಿತರು ತಾವು ಜಾತಿಗೆ ಸೀಮಿತವಾದ ಕೆಲಸಗಳನ್ನು ಮಾಡುವುದನ್ನು ನಿರಾಕರಿಸಿದ ಕಾರಣವಿದೆ. ಅಂದರೆ ಹಲಗೆ ಬಾರಿಸುವುದರ, ಊರಂಗಳವನ್ನು ಗುಡಿಸುವುದರ ನಿರಾಕರಿಸುವಿಕೆ ಇದೆ. ಹೀಗೆ ಕೆಳಜಾತಿಗಳು ತಮ್ಮ ಜಾತಿಬದ್ಧ ಕೆಲಸವನ್ನು ನಿರಾಕರಿಸಿದ ಕಾರಣ ಮೇಲುಜಾತಿಗಳು ಇದನ್ನು ಸಹಿಸದೆ ಜಾತಿ ಕಲಹಗಳೂ ನಡೆದಿವೆ. ಇನ್ನು ಕೆಲವೆಡೆ ಜಾತ್ರೆಯ ಆಚರಣೆ ನಿಂತಿದೆ. ಹೀಗೆ ಜಾತ್ರೆ ನಿಂತಿರುವ ಬಗ್ಗೆ ಬಹುಪಾಲು ಜಾನಪದ ವಿದ್ವಾಂಸರು ವಿಷಾದ ವ್ಯಕ್ತಪಡಿಸುತ್ತಾರೆ. ಬದಲಾಗಿ ಕೆಳಜಾತಿಗಳಲ್ಲಿ ಎಚ್ಚೆತ್ತ ಪ್ರಜ್ಞೆ ಬಂದಿರುವುದನ್ನು ಗುರುತಿಸುವುದಿಲ್ಲ. ಕರ್ನಾಟಕದ ಗ್ರಾಮದೇವತೆಗಳ ಜಾತ್ರೆಗಳಲ್ಲಿ ಹೀಗೆ ವೈರುಧ್ಯದ ನೆಲೆಯ ಜಾತ್ಯತೀತತೆಯ ಸ್ವರೂಪವಿದೆ.

**ಮೊಹರಂ**

ಇದು ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆ ಗಳನ್ನು ಹೊರತುಪಡಿಸಿದರೆ, ಕರ್ನಾಟಕದಾದ್ಯಂತ



ಆಚರಣೆಗೊಳ್ಳುವ ವರ್ಣರಂಜಿತ ಹಬ್ಬವಾಗಿದೆ. ಇದು ಮೂಲತಃ ಮುಸ್ಲಿಮರ ಹಬ್ಬ. ಆದರೆ ಹಿಂದೂ ಮುಸ್ಲಿಮರು ಗುರುತಿಸಲು ಸಾಧ್ಯವಾಗದ ರೀತಿ ಬೆರೆತ ಸ್ವರೂಪದಲ್ಲಿ ಈ ಆಚರಣೆ ನಡೆಯುತ್ತದೆ. ಈ ಹಬ್ಬ ಭಾರತಕ್ಕೆ ೧೭ನೇ ಶತಮಾನದಲ್ಲಿ ಬಂದಂತಿದೆ. ಕಾರಣ ದೆಹಲಿಯಲ್ಲಿ ಮುಸ್ಲಿಂ ಆಡಳಿತದ ಜತೆ ಈ ಹಬ್ಬ ವ್ಯಾಪಕತೆ ಪಡೆದಿದೆ. ಕರ್ನಾಟಕದಾದ್ಯಂತ ಅಲೆಹಬ್ಬ, ಪೀರ್ಲಬ್ಬ, ಬಾಬಯ್ಯನ ಜಲ್ದಿ, ಅಲಾಯಿ, ಅಲಾವಿ, ಅಲಾಬಿ ಮುಂತಾದ ಹೆಸರುಗಳಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹೆಸರುಗಳೇ ಮೊಹರಂ ಆಚರಣೆಯ ವೈವಿಧ್ಯಗಳನ್ನು ತೋರುತ್ತದೆ.

ಉತ್ತರ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದ ಭಾಗದಲ್ಲಿ ಮೊಹರಂನ ಆಚರಣೆ ಹೆಚ್ಚು. ಈ ಹಬ್ಬದಲ್ಲಿ ಹಿಂದೂ ಮುಸ್ಲಿಂ ಭೇದವು ಅಳಿಸಿಹೋದ ರೀತಿಯಲ್ಲಿ ಸಂಕರಗೊಂಡಿರುವುದನ್ನು ನೋಡಬಹುದು. ಎಷ್ಟೋ ಗ್ರಾಮಗಳಲ್ಲಿ ಮುಸ್ಲಿಮರಿಲ್ಲದೆಯೂ ಈ ಹಬ್ಬ ವಿಜೃಂಭಣೆಯಿಂದ ಆಚರಣೆಗೊಳ್ಳುತ್ತದೆ. ಹಾಗಾಗಿ ಈ ಹಬ್ಬದಾಚರಣೆಗೆ ಕೆಲವೆಡೆ ಮುಸ್ಲಿಮರ ಅಗತ್ಯವಿಲ್ಲ. ಈ ಹಬ್ಬದಲ್ಲಿ ಕೆಳಜಾತಿಗಳ ಭಾಗವಹಿಸುವಿಕೆ ದೊಡ್ಡದು. ಇದು ಒಂಬತ್ತು ದಿನ ನಡೆವ ಆಚರಣೆ. ಇಲ್ಲಿ ಹಿಂದು ಧರ್ಮದ ಬಹುಪಾಲು ಜಾತಿಗಳು ಈ ಹಬ್ಬದಲ್ಲಿ ಮುಸ್ಲಿಂ ಬಾಂಧವರನ್ನು ಅಣ್ಣ ತಮ್ಮಂದಿರಂತೆ, ಮಾವ – ಅಳಿಯಂದಿರಂತೆ ಸಂಬೋಧಿಸುತ್ತಾರೆ.

ಮೊಹರಂ ಅಧ್ಯಯನಕ್ಕಾಗಿ ಕರ್ನಾಟಕ ಕೆಲವೆಡೆ ಕ್ಷೇತ್ರಕಾರ್ಯ ಮಾಡಬೇಕಾಯಿತು. ಆಗ ಭಿನ್ನ ಪ್ರದೇಶಗಳ ಮೊಹರಂ ಹಾಡುಗಳು ಸಂಗ್ರಹಗೊಂಡವು. ಈ ಹಾಡುಗಳ ರಚನೆಯಲ್ಲಿಯೇ ಹಿಂದೂ ಮುಸ್ಲಿಂ ಬೆರೆಯುವಿಕೆ ಇರುವುದನ್ನು ನೋಡಬಹುದು. ಹಸೇನ್, ಹುಸೇನ್, ಬೀಬಿ, ಫಾತಿಮರ ಹಾಡುಗಳ ನಡುವೆಯೇ ಹಿಂದು ದೈವಗಳ ಉಲ್ಲೇಖಗಳೂ ಕಾಣಬರುತ್ತವೆ. ಹಿಂದು–ಮುಸ್ಲಿಂ ದೈವಗಳು ಕೊಡುಕೊಳೆ ಮಾಡುತ್ತವೆ. ಹೀಗಾಗಿ ನೂರಾರು ಹಿಂದು–ಮುಸ್ಲಿಂ ಮೊಹರಂ ಗಾಯಕರಿರುವುದನ್ನು ನೋಡಬಹುದು.

ಮೊಹರಂ ಹಬ್ಬದಲ್ಲಿ ಉಂಟಾಗುವ ಸೆಕ್ಯುಲರಿಸಂ ವಾತಾವರಣದ ಸೃಷ್ಟಿಗೆ ರಿವಾಯ್ತ್ ಹಾಡುಗಳ ಕೊಡುಗೆಯೂ ದೊಡ್ಡದು. ಇಲ್ಲಿ ಸೃಜನಶೀಲ ಕಲಾಪರಂಪರೆಗಳು ಜಾತಿಮತವನ್ನು ಮೀರುವ ಸ್ಥಿತಿ ತಲುಪುತ್ತವೆ ಎನ್ನುವ ವಿವರಣೆಗಳಿವೆ. ಇದು ಇಲ್ಲಿ ನಿಜವಾದಂತೆ ಕಾಣುತ್ತದೆ. ಈ ಮೊಹರಂ ಹಬ್ಬ ವ್ಯಾಪಕವಾಗಿರುವ ಕಾರಣ, ಮೊಹರಂ ಹಿಂದು–ಮುಸ್ಲಿಮರನ್ನು ಬಾಂಧವ್ಯದ ನೆಲೆಯಲ್ಲಿ ಬೆಸೆದಿದೆ. ಹೀಗಾಗಿ ದಿನನಿತ್ಯದ ಬದುಕಿನಲ್ಲಿಯೂ, ಉತ್ತರ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದಾದ್ಯಂತ ಹಿಂದೂ ಮುಸ್ಲಿಂರಲ್ಲಿ ಒಂದು ಬಗೆಯ ಸಾಮರಸ್ಯ ಸಾಧ್ಯವಾದಂತಿದೆ. ಹಾಗಾಗಿ ಈ ಭಾಗಗಳಲ್ಲಿ ಹಿಂದೂ ಮುಸ್ಲಿಂ ಕೋಮು ಘರ್ಷಣೆಗಳು ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆ.

ಇದಕ್ಕೆ ವಿರುದ್ಧವಾಗಿ ಕರಾವಳಿ ಕರ್ನಾಟಕದ ಭಾಗವನ್ನು ಅವಲೋಕಿಸಬಹುದು. ಈ ಭಾಗದಲ್ಲಿ, ಅದರಲ್ಲೂ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಹಿಂದು–ಮುಸ್ಲಿಂ ಕೋಮುಗಲಭೆಗಳು ವ್ಯಾಪಕವಾಗುತ್ತಿವೆ. ಅಲ್ಲಿ ಮುಸ್ಲಿಮರು ಉಸಿರುಗಟ್ಟಿ ಬದುಕುತ್ತಿದ್ದಾರೆ. ದಿನಬೆಳಗಾದರೆ ಹಿಂದು–ಮುಸ್ಲಿಂರ ನಡುವೆ ಕೋಮುಗಲಭೆಯ ಹೊಗೆಯಾಡುತ್ತದೆ. ಹಿಂದೂ ಮೂಲಭೂತವಾದ ಹಿಂಸಾವಾದಿಯಾಗಿ ಬೆಳೆಯುತ್ತಿದೆ. ಈ ಬಗೆಯ ವಾತಾವರಣಕ್ಕೂ, ಇಲ್ಲಿ ಹಿಂದೂ ಮುಸ್ಲಿಂರನ್ನು ಧರ್ಮ ಮರೆತು ಬೆರೆಸುವ ದೊಡ್ಡದೊಂದು ಆಚರಣ ಲೋಕ ಇಲ್ಲದ್ದಕ್ಕೂ ಸಂಬಂಧವಿದ್ದಂತಿದೆ. ಇಲ್ಲಿ ವಿರಳವಾಗಿದ್ದ ಮೊಹರಂ ಆಚರಣೆಯಲ್ಲಿ ಹಿಂದುಗಳು ಭಾಗವಹಿಸುವಂತಿಲ್ಲ ಎಂಬ ಠರಾವು ಹೊರಡಿಸಲಾಗಿದೆ. ಹೀಗಾಗಿ ಮೊಹರಂ ಆಚರಣೆಯನ್ನು ಸೆಕ್ಯುಲರಿಸಂ ನೆಲೆಯಲ್ಲಿ ಇನ್ನಷ್ಟು ಸೂಕ್ಷ್ಮವಾಗಿ ವಿಶ್ಲೇಷಿಸುವ ಅಗತ್ಯವಿದೆ.

**ಕಲಾ ಪ್ರಕಾರಗಳ ಜಾತ್ಯತೀತತೆ**

ಕರ್ನಾಟಕದ ಜನಪದ ಕಲೆಗಳು ಜಾತಿನೆಲೆಯಲ್ಲಿ ಹುಟ್ಟಿದಂಥವು. ಕರ್ನಾಟಕದ ಯಕ್ಷಗಾನ ಮೇಲುಜಾತಿಯವರೆ ಬಹುಪಾಲು ಭಾಗವಹಿಸುವ ಕಲೆ. ಹಾಗಾಗಿ ಈ ಕಲೆ ಜಾನಪದ ಅಲ್ಲ, ಶಿಷ್ಟ ಎಂದು ನಿರೂಪಿಸುತ್ತಾ ಬರಲಾಗಿದೆ. ಇದರ ಪ್ರಭಾವಕ್ಕೆ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಒಡೆದು, ಅದೀಗ ಪ್ರತ್ಯೇಕ ಯಕ್ಷಗಾನ ಅಕಾಡೆಮಿಯಾಗಿದೆ. ಈ ಪ್ರಕ್ರಿಯೆಯ ಹಿಂದೆ ಜಾನಪದ ಎನ್ನುವುದು ಕೆಳಜಾತಿಗಳ ಸಂಕೇತ, ಯಕ್ಷಗಾನ ಮೇಲುಜಾತಿಯ ಕಲೆ ಎನ್ನುವ ಜಾತಿಕಾರಣವಿದೆ. ಯಕ್ಷಗಾನವನ್ನೂ ಜಾನಪದ ಕಲೆ ಎಂದರೆ ಅದು ಕೆಳಜಾತಿಗಳ ಸಂಕೇತದಲ್ಲಿ ಬೆರೆತು ಕಳಂಕವನ್ನು ಮೈಗೆ ಅಂಟಿಸಿಕೊಳ್ಳುವ ಆತಂಕ ನಿರಂತರವಾಗಿ ಕಾಡುತ್ತಲೇ ಬಂದಿದೆ. ಇದು ಇಡಿಯಾಗಿ ಜಾನಪದವನ್ನೇ ಕೆಳಜಾತಿಗಳ ಸಂಕೇತವನ್ನಾಗಿ ಮೇಲುಜಾತಿಗಳು ಗ್ರಹಿಸಿದ್ದರ ಫಲ.

ಇನ್ನು ಕೆಲವು ಜಾನಪದ ಕಲೆಗಳನ್ನು ಆಯಾ ಜಾತಿಯ ಐಡೆಂಟಿಟಿಯಾಗಿ ರೂಪಿಸುತ್ತಾ ಬರಲಾಗಿದೆ. ಕರ್ನಾಟಕದಲ್ಲಿ ರೂಪುಗೊಳ್ಳುತ್ತಿರುವ ಜಾತಿ ಸಂಘಟನೆಗಳು, ಜಾತಿಯಾಧಾರಿತ ಮಠಾಧೀಶರು ಹೆಚ್ಚುತ್ತಿರುವುದರ ಪ್ರಭಾವವೂ ಇದರ ಮೇಲಿದೆ. ಜನಪದ ಕಲೆಯ ಚರ್ಮ ವಾದ್ಯಗಳು ಇಂದು ಫೈಬರ್, ಪ್ಲಾಸ್ಟಿಕ್ ವಾದ್ಯಗಳಾಗಿ ಪರಿವರ್ತನೆಯಾಗುತ್ತಿವೆ. ಇದು ಜನಪದ ಕಲೆ, ಜಾತಿ, ಧರ್ಮ, ವಾದ್ಯ, ಮತ್ತು ಮಾಂಸಾಹಾರ ಸೇವಿಸುವ ಸಮುದಾಯಕ್ಕಿದ್ದ ನಂಟನ್ನು ನಿಧಾನಕ್ಕೆ ಬದಲಾಯಿಸುತ್ತಿದೆ. ಚರ್ಮದ ಹಲಗೆಯನ್ನು ಮುಟ್ಟುವುದು ಮೇಲು ಜಾತಿಗಳಿಗೆ ಕೀಳಿನ ಸಂಕೇತವಾಗಿತ್ತು. ಆದರೆ ಅದೇ ಫೈಬರ್ ವಾದ್ಯವನ್ನು ಮುಟ್ಟುವುದು ಈಗ ಕೀಳಿನ ಸಂಕೇತವಾಗಿ ಉಳಿದಿಲ್ಲ.

ಇಂತಹ ಕಾರಣಗಳಿಂದಾಗಿ ಕರ್ನಾಟಕದ ಜನಪದ ಕಲೆಗಳು ಸೆಕ್ಯುಲರ್ ಆಗುವತ್ತ ಸಾಗುತ್ತಿರುವುದು ಆಶಾದಾಯಕ ಬೆಳವಣಿಗೆ. ಡೊಳ್ಳು ಕಲೆ ಇಂದು ಕೇವಲ ಕುರುಬರ ಕಲೆಯಾಗಿ ಮತ್ತು ವೀರಗಾಸೆಯು ಕೇವಲ ಲಿಂಗಾಯತರ ಕಲೆಯಾಗಿ ಮಾತ್ರ ಉಳಿದಿಲ್ಲ. ಆದರೆ ಆಶ್ಚರ್ಯಕರ ಸಂಗತಿಯೆಂದರೆ ದಲಿತರ ಹಲಗೆ ಮೇಲು ಜಾತಿಗಳಿಗೆ ಚಲನೆಹೊಂದದಿರುವುದು. ಕಾರಣ ಕೆಳಜಾತಿಗಳಲ್ಲಿಯೇ ಮುಟ್ಟಿಸಿ ಕೊಳ್ಳುವ ಜಾತಿಗಳಲ್ಲಿ ಆಯಾ ಕಲೆಗಳು ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಪ್ರವೇಶ ಪಡೆದಿವೆ. ಮುಟ್ಟಿಸಿಕೊಳ್ಳದ ಕೆಳಜಾತಿಗಳ ಕಲೆಗಳು ಮುಟ್ಟಿಸಿಕೊಳ್ಳುವ ಜಾತಿಗಳಿಗೆ ಪ್ರವೇಶ ಪಡೆಯುವುದರಲ್ಲಿ ಅಷ್ಟಾಗಿ ಚಲನೆಯನ್ನು ಕಂಡಿಲ್ಲದಿರುವುದನ್ನು ಗಮನಿಸುವ ಅಗತ್ಯವಿದೆ. ಹಾಗಾಗಿ ಹಲಗೆ ಫೈಬರ್‌ನದಾದರೂ ಅದು ದಲಿತರನ್ನು ಪ್ರತಿನಿಧಿಸುವ ಕಲೆಯಾಗಿಯೇ ಮುಂದುವರಿದಿದೆ.

ಹೀಗೆ ಕೆಲವು ಸಂಗತಿಗಳ ಮೂಲಕ ಕರ್ನಾಟಕದ ಜಾನಪದದ ತಾತ್ಕಾಲಿಕ ಜಾತ್ಯತೀತ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಿರುವೆ. ಇಲ್ಲಿ ಜನಪದರ ಜಾತ್ಯತೀತತೆ ಬಹುಮುಖಿಯಾಗಿದೆ. ಈ ಬಹುಮುಖಿ ನೆಲೆಗಳಲ್ಲಿ ಆಧುನಿಕತೆಗೆ ಪೂರಕವಾಗಿ ಕೆಲ ಬದಲಾವಣೆಗಳೂ ಸಂಭವಿಸಿವೆ. ಇಲ್ಲಿ ನಿರೂಪಿಸುವ ಮುಖ್ಯ ಅಂಶವೆಂದರೆ, ಮೊಹರಂನಂತಹ ಜನಪದ ಆಚರಣೆಗಳಲ್ಲಿ ತಾತ್ಕಾಲಿಕ ಜಾತ್ಯತೀತತೆಯೊಂದು ಸಂಭವಿಸುತ್ತದೆ. ಇದು ಜಾತಿ, ಧರ್ಮದ ಭಾವನೆಗಳ ಕಟ್ಟುಗಳನ್ನು ಸಡಿಲಗೊಳಿಸುತ್ತದೆ. ಜಾತಿದ್ವೇಷವನ್ನು ಕಡಿಮೆ ಮಾಡುತ್ತದೆ. ಅಂತೆಯೇ ಗ್ರಾಮದೇವಿಯ ಜಾತ್ರೆಯಂತಹ ಕೆಲ ಆಚರಣೆಗಳು ಜಾತಿ ಪ್ರಜ್ಞೆಯನ್ನು ಪೋಷಿಸುತ್ತವೆ. ಆದರೆ ಈ ನೆಲೆಯಲ್ಲಿ ಸಂಭವಿಸುವ ಜಾತಿ ಸಾಮರಸ್ಯದ ಕಾರಣದಿಂದಾಗಿ ಸ್ವಲ್ಪಮಟ್ಟಿಗೆ ಜಾತಿದ್ವೇಷಗಳು ಮಂಕಾಗುತ್ತವೆ.

**ಅರುಣ್ ಜೋಳದಕೂಡ್ಲಿಗಿ**
ಯು.ಜಿ.ಸಿ. ಫೆಲೋ, ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ



# ಕಾಗದದ ಘೋಷಣೆಯಾಗಿ ಉಳಿಯಲಿರುವ ಆರೋಗ್ಯದ ಹಕ್ಕು

ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯ

ಎದುರಲ್ಲೊಂದು ಹೇಳಿ, ಅದಕ್ಕೆ ತದ್ವಿರುದ್ಧವಾದುದನ್ನು ಮಾಡುವವರು ಅಧಮರೋ, ಅದಕ್ಕಿಂತಲೂ ಕೆಟ್ಟವರೋ ಅನಿಸಿಕೊಳ್ಳುತ್ತಾರಂತೆ. ಆದರೆ ಈ ದೇಶದ ಜನರಿಂದ ಚುನಾಯಿಸಲ್ಪಟ್ಟಿರುವ ಸರಕಾರವೇ ಹಾಗೆ ವರ್ತಿಸಿದರೆ ಅದಕ್ಕೆ ಏನನ್ನಬೇಕು ? ಏನು ಮಾಡಬೇಕು ? ದೇಶವಾಸಿಗಳಿಗೆಲ್ಲ ಒಳ್ಳೆಯ ದಿನಗಳ ಆಸೆ ಹುಟ್ಟಿಸಿ ಎಂಟು ತಿಂಗಳ ಹಿಂದೆ ಗದ್ದುಗೆಯೇರಿರುವ ಕೇಂದ್ರ ಸರಕಾರದ ವರ್ತನೆಯೂ ಹಾಗೆಯೆ ಇದೆ ; ಹೊಸವರ್ಷದ ಮುನ್ನಾದಿನ ಹೊರಡಿಸಿರುವ ಹೊಸ ಆರೋಗ್ಯ ನೀತಿ ೨೦೧೫ರ ಕರಡನ್ನು ಓದಿದರೆ ಇದು ದಿಟವಾಗುತ್ತದೆ.

ದೇಶದ ಆರೋಗ್ಯ ಸೇವೆಗಳ ಕುಂದುಕೊರತೆಗಳನ್ನೆಲ್ಲ ಅದರಲ್ಲಿ ಪಟ್ಟಿಮಾಡಲಾಗಿದೆ. ಖಾಸಗಿ ಆರೋಗ್ಯಸೇವೆಗಳ ಮೋಸಗಳ ಬಗ್ಗೆಯೂ ಹೇಳಲಾಗಿದೆ. ಖಾಸಗಿ ಆಸ್ಪತ್ರೆಗಳು, ವಿಮಾ ಕಂಪೆನಿಗಳು, ವೈದ್ಯಕೀಯ ಕಾಲೇಜುಗಳು ನಿಯಂತ್ರಣಕ್ಕೆ ಸಿಗದಿರುವ ಕಷ್ಟಗಳ ಬಗ್ಗೆಯೂ ಅದರಲ್ಲಿ ಗೋಳು ತೋಡಿಕೊಳ್ಳಲಾಗಿದೆ. ಆದರೆ ಈ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಒಂದೇ ಒಂದು ಉಪಾಯವೂ ಅದರಲ್ಲಿ ಕಾಣಸಿಗುವುದಿಲ್ಲ. ಅದಕ್ಕೆ ಬದಲಾಗಿ ಅದೇ ಖಾಸಗಿ ಸಂಸ್ಥೆಗಳಿಗೆ ಸಂಪೂರ್ಣವಾಗಿ ಶರಣಾಗಿ, ಆರೋಗ್ಯ ಸೇವೆಗಳನ್ನೆಲ್ಲ ಖಾಸಗಿ ಒಡೆತನಕ್ಕೆ ವಹಿಸುವ ಹುನ್ನಾರವಿದೆ. ಆಧುನಿಕ ವೈದ್ಯವಿಜ್ಞಾನದ ಪ್ರಯೋಜನವು ವ್ಯಾಪಕವಾಗಿ ದೊರೆಯಬೇಕು ಎನ್ನಲಾಗಿದ್ದರೂ, ಅದಕ್ಕೆ ತಕ್ಕ ಯೋಚನೆ–ಯೋಜನೆಗಳಾವುವೂ ಅದರಲ್ಲಿಲ್ಲ; ಬದಲಿಗೆ, ಆಯುರ್ವೇದ, ಯೋಗ ಮುಂತಾದ ಗತಪದ್ಧತಿಗಳ ವೈಭವೀಕರಣವೂ, ಅವುಗಳನ್ನು ಬೆಳೆಸುವುದಕ್ಕೆ ಎಲ್ಲ ರೀತಿಯ ಉತ್ತೇಜನವೂ ಅಲ್ಲಿ ಎದ್ದು ಕಾಣುತ್ತದೆ.

ಆರೋಗ್ಯ ರಕ್ಷಣೆಗೆ ಇಂದು ಲಭ್ಯವಿರುವ ಅತಿ ಸಮರ್ಥವಾದ ವಿಧಾನಗಳನ್ನು ಅತಿ ಹೆಚ್ಚು ಅಗತ್ಯವುಳ್ಳವರಿಗೆ, ಸಮಗ್ರವಾಗಿ, ಸಮರ್ಪಕವಾಗಿ ತಲುಪಿಸಲು ಸಾಧ್ಯವಾಗುತ್ತಿಲ್ಲ ಎಂದು ಕರಡಿನ ಮೊದಲಲ್ಲೇ ಹೇಳಲಾಗಿದೆ (ಪುಟ ೩). ಆರ್ಥಿಕ ಪ್ರಗತಿ ಹಾಗೂ ಆರೋಗ್ಯ ಎರಡೂ ಒಂದರೊಡನೊಂದು ಬೆಸೆದಿರುವುದರಿಂದ ಆರ್ಥಿಕ ಪ್ರಗತಿಯ ಲಾಭಗಳನ್ನು ಬಳಸಿ ಆರೋಗ್ಯವನ್ನು ಉತ್ತಮಪಡಿಸುವುದು, ಹಾಗೂ ಆ ಮೂಲಕ ದೇಶದ ಉತ್ಪಾದಕತೆಯನ್ನೂ, ಸಂಪತ್ತನ್ನೂ ಇನ್ನಷ್ಟು ಹೆಚ್ಚಿಸುವುದು ಈ ಹೊಸ ಆರೋಗ್ಯ ನೀತಿಯ ಮೂಲ ಉದ್ದೇಶವಾಗಿದೆ ಎಂದೂ ಹೇಳಲಾಗಿದೆ (ಪುಟ ೩).

ಕಳೆದ ಅರುವತ್ತಾರು ವರ್ಷಗಳಲ್ಲಿ ಯಾವೊಂದು ಸರಕಾರವೂ ಈ ದೇಶಕ್ಕಾಗಿ ಏನನ್ನೂ ಮಾಡಿಯೇ ಇಲ್ಲವೆಂದು ಹೇಳುತ್ತಲೇ ಅಧಿಕಾರಕ್ಕೇರಿದ ಈ ಸರಕಾರವು, ತನ್ನ ಹೊಸ ಆರೋಗ್ಯ ನೀತಿಯ ಮೊದಲ ಪುಟಗಳಲ್ಲಿ ಈ ಹಿಂದಿನ ಸರಕಾರಗಳ ಸಾಧನೆಗಳನ್ನು ಒಂದೊಂದಾಗಿ ಹೊಗಳಿದೆ ! ತಾಯಂದಿರು ಮತ್ತು ಮಕ್ಕಳ ಮರಣ ಪ್ರಮಾಣಗಳಲ್ಲಿ ಗಣನೀಯವಾದ ಇಳಿಕೆಯಾಗಿರುವುದು, ಜನಸಂಖ್ಯಾವೃದ್ಧಿಯನ್ನು ತಡೆದಿರುವುದು, ಎಚ್‌ಐವಿ, ಕ್ಷಯ, ಕುಷ್ಠ, ಮಲೇರಿಯಾ, ಅಂಧತ್ವ ಮುಂತಾದವುಗಳ ನಿಯಂತ್ರಣಕ್ಕೆ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳು ಯಶಸ್ವಿಯಾಗಿರುವುದು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಹಾಗೂ ಕೆಲವು ಜನಸಮುದಾಯಗಳಿಗೆ ವಿಮಾಧಾರಿತ ಆರೋಗ್ಯ ಯೋಜನೆಗಳು ಯಶಸ್ವಿಯಾಗಿರುವುದು... ಇತ್ಯಾದಿಗಳ ಬಗ್ಗೆ ಅದರಲ್ಲಿ ಸವಿವರವಾಗಿ ಹೇಳಲಾಗಿದೆ (ಪುಟ ೩–೮).

ರಾಜ್ಯ–ಪ್ರದೇಶಗಳ ನಡುವೆ, ಹಳ್ಳಿ–ಪಟ್ಟಣಗಳ ನಡುವೆ, ಬಡವರು ಮತ್ತು ಸ್ಥಿತಿವಂತರ ನಡುವೆ ಆರೋಗ್ಯ ಸೇವೆಗಳ ಬಳಕೆಯಲ್ಲಿ ಅಗಾಧ ವ್ಯತ್ಯಾಸಗಳಿರುವುದನ್ನೂ ಅದರಲ್ಲಿ ಗುರುತಿಸಲಾಗಿದೆ. ಉಚಿತ ಸಾರ್ವತ್ರಿಕ ಆರೋಗ್ಯ

**ಆರೋಗ್ಯದ ಹಕ್ಕನ್ನು ಒದಗಿಸುವ ಬಗ್ಗೆ ಹೊಸ ನೀತಿಯಲ್ಲಿ ಪ್ರಸ್ತಾಪಿಸಲಾಗಿದ್ದರೂ, ಸಾರ್ವತ್ರಿಕ ಆರೋಗ್ಯ ಸೇವೆಗಳನ್ನು ಒದಗಿಸುವುದಕ್ಕೆ ಯಾವುದೇ ನಿರ್ದಿಷ್ಟ ಯೋಜನೆಗಳು ಅದರಲ್ಲಿ ಗೋಚರಿಸುವುದಿಲ್ಲ. ಸರಕಾರಿ ಆರೋಗ್ಯ ಕೇಂದ್ರಗಳನ್ನು ಬಲಪಡಿಸುವುದಕ್ಕೂ ಹೊಸ ನೀತಿಯಲ್ಲೇನಿಲ್ಲ. ಬದಲಿಗೆ, ಎಲ್ಲರ ಕೈಗೊಂದು ಆರೋಗ್ಯ ಕಾರ್ಡನ್ನು ಕೊಟ್ಟು , ಪ್ರಾಥಮಿಕ ಆರೋಗ್ಯ ಸೇವೆಗಳಾದಿಯಾಗಿ ಹೆಚ್ಚಿನ ಆರೋಗ್ಯ ಸೇವೆಗಳನ್ನು ವಿಮೆಯಾಧಾರಿತಗೊಳಿಸುವ ಯೋಜನೆಯು ಅದರಲ್ಲಿದೆ. ಈ ವ್ಯವಸ್ಥೆಯಲ್ಲಿ ಉನ್ನತ ಆರೋಗ್ಯ ಸೇವೆಗಳನ್ನು ಪಡೆಯಬೇಕಾದರೆ ಹೆಚ್ಚಿನ ಹಣಕ್ಕೆ ದೊಡ್ಡ ಮೊತ್ತದ ವಿಮೆಯನ್ನು ಪಡೆದು ಖಾಸಗಿ ಆಸ್ಪತ್ರೆಗಳಿಗೆ ಹೋಗಬೇಕಾಗುತ್ತದೆ. ಸ್ಥಿತಿವಂತರಿಗೆ ಸರಕಾರಿ ಹಾಗೂ ಆಸ್ಪತ್ರೆಗಳೆಲ್ಲೆಡೆ 'ಸಾರ್ವತ್ರಿಕ ಸೇವೆಗಳು' ದೊರೆತರೆ, ದೊಡ್ಡ ವಿಮೆಯನ್ನು ಪಡೆಯಲಾಗದ ಬಡವರು ತಮ್ಮ ಕಾರ್ಡಿಗೆ ದಕ್ಕಲಿರುವ ಸೀಮಿತ ಸೇವೆಗಳನ್ನಷ್ಟೇ ಪಡೆಯಬೇಕಾಗುತ್ತದೆ.**

ಸೇವೆಗಳ ನ್ಯೂನತೆಗಳಿಂದಾಗಿ ಶೇ. ೧೮ರಷ್ಟು ಜನರು ಗಂಭೀರ ರೋಗಗಳಿಗೆ ತಮ್ಮ ಕಿಸೆಯಿಂದಲೇ ವಿಪರೀತ ಖರ್ಚು ಮಾಡಬೇಕಾಗುತ್ತಿದೆಯೆಂದೂ, ಅದರಿಂದಾಗಿ ಪ್ರತೀ ವರ್ಷ ಆರೂವರೆ ಕೋಟಿ ಜನರು ಬಡವರಾಗುತ್ತಿದ್ದಾರೆಂದೂ ಒಪ್ಪಿಕೊಳ್ಳಲಾಗಿದೆ (ಪುಟ ೮). ವಿಮಾಧಾರಿತ ಆರೋಗ್ಯ ಯೋಜನೆಗಳ ಬಗ್ಗೆ ಸಾಕಷ್ಟು ಫಲಾನುಭವಿಗಳಿಗೆ ಸರಿಯಾದ ಮಾಹಿತಿಯಿಲ್ಲ, ಮಾತ್ರವಲ್ಲ, ಈ ಯೋಜನೆಗಳನ್ನು ನಿರ್ವಹಿಸುವ ವಿಮಾ ಕಂಪೆನಿಗಳು ಹಾಗೂ ಖಾಸಗಿ ಆಸ್ಪತ್ರೆಗಳಿಂದ ಹಲವು ತರಹದ ಮೋಸಗಳಾಗುತ್ತಿವೆ ಹಾಗೂ ಪ್ರಾಥಮಿಕ ಆರೋಗ್ಯ ಸೇವೆಗಳ ಬದಲು ಹೆಚ್ಚು ಲಾಭದಾಯಕವಾದ ದ್ವಿತೀಯ–ತೃತೀಯ ಸ್ತರದ ಚಿಕಿತ್ಸೆಗಳಿಗೇ ಪ್ರಾಶಸ್ತ್ಯ ನೀಡಲಾಗುತ್ತಿದೆ ಎಂದು ಕರಡಿನಲ್ಲಿ ದೂರಲಾಗಿದೆ (ಪುಟ ೯).

ಆದರೆ ಇಂತಹ ನ್ಯೂನತೆಗಳನ್ನು ಸರಿಪಡಿಸುವ ಯಾವ ಆಶಯವೂ ಈ ಹೊಸ ನೀತಿಯ ಕೊನೆಯ ಅಕ್ಷರದವರೆಗೆ ಕಾಣಸಿಗುವುದಿಲ್ಲ. ಬದಲಿಗೆ, ಬಡಜನರಿಗೆ ಆಧುನಿಕ ಆರೋಗ್ಯ ಸೇವೆಗಳು ದೊರೆಯದಂತೆ ಇನ್ನಷ್ಟು ವಂಚಿಸುವುದು ಹಾಗೂ ಖಾಸಗಿ ಆರೋಗ್ಯ ಸೇವೆಗಳನ್ನು ಇನ್ನಷ್ಟು ಬಲಪಡಿಸಿ, ಅವುಗಳಲ್ಲಾಗುತ್ತಿರುವ ಮೋಸಗಳನ್ನು ಇನ್ನಷ್ಟು ಬೆಳೆಯಗೊಡುವುದು ಈ ಹೊಸ ಆರೋಗ್ಯ ನೀತಿಯ ಮೂಲೋದ್ದೇಶವಾಗಿ ಕಾಣುತ್ತದೆ.

ಈ ಹೊಸ ನೀತಿಯಲ್ಲಿ ಎಲ್ಲರಿಗೂ ಉಚಿತ ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಖಾತರಿಪಡಿಸುವ ಆಶಯವನ್ನು ವ್ಯಕ್ತಪಡಿಸುತ್ತಲೇ, ಸರಕಾರವಷ್ಟೇ ಅದನ್ನು ಮಾಡಲಾಗದೆಂದು ಜಾರಿಕೊಳ್ಳಲಾಗಿದೆ (ಪುಟ ೧೩). ಸಾರ್ವಜನಿಕ ಆರೋಗ್ಯ ಸೇವೆಗಳಿಗೆ ಅತ್ಯಂತ ಕಡಿಮೆ ವ್ಯಯಿಸುವ ದೇಶಗಳಲ್ಲಿ ಒಂದು ಎಂಬ ಕುಖ್ಯಾತಿಯು ನಮ್ಮದು. ಇತ್ತೀಚಿನ ವರ್ಷಗಳಲ್ಲಿ ಅದು ಇನ್ನಷ್ಟು ಇಳಿಯುತ್ತಲಿದೆ. ಕಳೆದ ಸರಕಾರವು ೨೦೧೩–೧೪ರಲ್ಲಿ ಆರೋಗ್ಯ ಸೇವೆಗಳಿಗಾಗಿ ೩೩ ಸಾವಿರ ಕೋಟಿ (ರಾಷ್ಟ್ರೀಯ ಉತ್ಪನ್ನದ ಶೇ. ೧ಕ್ಕಿಂತಲೂ ಕಡಿಮೆ) ಒದಗಿಸಿ, ವರ್ಷದ ಕೊನೆಗೆ ವಿತ್ತೀಯ ಕೊರತೆಯನ್ನು ನೀಗಿಸಬೇಕಾದಾಗ ಆರೋಗ್ಯ ಇಲಾಖೆಯ ವೆಚ್ಚಗಳಿಗೆ ಕತ್ತರಿ ಹಾಕಿತ್ತು. ಈ ಹೊಸ ಸರಕಾರವೂ ೨೦೧೪–೧೫ರಲ್ಲಿ ೩೦ ಸಾವಿರ ಕೋಟಿ ಒದಗಿಸಿ, ಡಿಸೆಂಬರ್ ಕೊನೆಗೆ ೬೦೦೦ ಕೋಟಿಗಳನ್ನು ಕತ್ತರಿಸಿದೆ. ನಮ್ಮೀ ಸರಕಾರಗಳು ಸಿರಿವಂತರಿಗೆ ಲಕ್ಷಗಟ್ಟಲೆ ಕೋಟಿ ತೆರಿಗೆ ವಿನಾಯಿತಿ ನೀಡುತ್ತವೆ, ಇನ್ನಿತರ ತೆರಿಗೆಗಳನ್ನು ಸಂಗ್ರಹಿಸುವಲ್ಲೂ ಎಡವುತ್ತವೆ ; ಕೊನೆಗೆ ಈ ಕೊರತೆಯನ್ನು ಭರಿಸಲು ಬಡಜನರ ಆರೋಗ್ಯಕ್ಕಾಗಿ ಮೀಸಲಿಟ್ಟ ಅಲ್ಪ ಹಣವನ್ನೇ ನುಂಗಿಹಾಕುತ್ತವೆ. ಆರೋಗ್ಯ ಸೇವೆಗಳಿಗೆ ರಾಷ್ಟ್ರೀಯ ಉತ್ಪನ್ನದ ಶೇ. ೩ರಷ್ಟನ್ನು ಮೀಸಲಿಡುವ ಹನ್ನೆರಡನೇ ಯೋಜನೆ (೨೦೧೨–೧೭)ಯ ಆಶ್ವಾಸನೆಯು ಮರೀಚಿಕೆಯಾಗಿಯೇ ಉಳಿದಿದ್ದು, ಹೊಸ ನೀತಿಯಲ್ಲಿ ಅದನ್ನು ಶೇ. ೨.೫ಕ್ಕೆ ಇಳಿಸಲಾಗಿದೆ. ಈ ಶೇ. ೨.೫ರ ಸಣ್ಣ ಮೊತ್ತಕ್ಕೂ ಸಂಚಕಾರವಿರುವ ಸೂಚನೆಗಳು ಆ ಕರಡಿನಲ್ಲೇ ಕಾಣಸಿಗುತ್ತವೆ : ಈ ಗುರಿಯನ್ನು ತಲುಪಲು ಇನ್ನಷ್ಟು ಕಾಲ ಬೇಕಾಗಬಹುದೆಂದೂ, ಆರೋಗ್ಯ ಸೇವೆಗಳನ್ನು ಖಾತರಿಗೊಳಿಸಬೇಕಾದರೆ ಹೊಸ ಆರೋಗ್ಯಕರವನ್ನು ವಿಧಿಸುವ ಅಗತ್ಯವಿದೆಯೆಂದೂ ಹೇಳಲಾಗಿರುವುದು (ಪುಟ ೧೫). ಸರಕಾರದ ನಿರಾಸಕ್ತಿಗೂ, ದಿವಾಳಿತನಕ್ಕೂ ಸ್ಪಷ್ಟ ನಿದರ್ಶನವಾಗಿದೆ.




ಆರೋಗ್ಯದ ಹಕ್ಕನ್ನು ಒದಗಿಸುವ ಬಗ್ಗೆ ಹೊಸ ನೀತಿಯಲ್ಲಿ ಪ್ರಸ್ತಾಪಿಸಲಾಗಿದ್ದರೂ, ಸಾರ್ವತ್ರಿಕ ಆರೋಗ್ಯ ಸೇವೆಗಳನ್ನು ಒದಗಿಸುವುದಕ್ಕೆ ಯಾವುದೇ ನಿರ್ದಿಷ್ಟ ಯೋಜನೆಗಳು ಅದರಲ್ಲಿ ಗೋಚರಿಸುವುದಿಲ್ಲ. ಸರಕಾರಿ ಆರೋಗ್ಯ ಕೇಂದ್ರಗಳನ್ನು ಬಲಪಡಿಸುವುದಕ್ಕೂ ಹೊಸ ನೀತಿಯಲ್ಲೇನಿಲ್ಲ. ಬದಲಿಗೆ, ಎಲ್ಲರ ಕೈಗೊಂದು ಆರೋಗ್ಯ ಕಾರ್ಡನ್ನು ಕೊಟ್ಟು, ಪ್ರಾಥಮಿಕ ಆರೋಗ್ಯ ಸೇವೆಗಳಾದಿಯಾಗಿ ಹೆಚ್ಚಿನ ಆರೋಗ್ಯ ಸೇವೆಗಳನ್ನು ವಿಮೆಯಾಧಾರಿತಗೊಳಿಸುವ ಯೋಜನೆಯು ಅದರಲ್ಲಿದೆ. ಈ ವ್ಯವಸ್ಥೆಯಲ್ಲಿ ಉನ್ನತ ಆರೋಗ್ಯ ಸೇವೆಗಳನ್ನು ಪಡೆಯಬೇಕಾದರೆ ಹೆಚ್ಚಿನ ಹಣಕ್ಕೆ ದೊಡ್ಡ ಮೊತ್ತದ ವಿಮೆಯನ್ನು ಪಡೆದು ಖಾಸಗಿ ಆಸ್ಪತ್ರೆಗಳಿಗೆ ಹೋಗಬೇಕಾಗುತ್ತದೆ. ಸ್ಥಿತಿವಂತರಿಗೆ ಸರಕಾರಿ ಹಾಗೂ ಆಸ್ಪತ್ರೆಗಳೆಲ್ಲೆಡೆ 'ಸಾರ್ವತ್ರಿಕ ಸೇವೆಗಳು' ದೊರೆತರೆ, ದೊಡ್ಡ ವಿಮೆಯನ್ನು ಪಡೆಯಲಾಗದ ಬಡವರು ತಮ್ಮ ಕಾರ್ಡಿಗೆ ದಕ್ಕಲಿರುವ ಸೀಮಿತ ಸೇವೆಗಳನ್ನಷ್ಟೇ ಪಡೆಯಬೇಕಾಗುತ್ತದೆ (ಪುಟ ೨೦, ೨೨, ೨೫) ! ಈಗಲೂ ಯಶಸ್ವಿನಿಯಂತಹ ವಿಮಾಧಾರಿತ ಯೋಜನೆಗಳಲ್ಲಿ ಆಯ್ದ ಜನವರ್ಗಗಳಿಗೆ, ಆಯ್ದ ಆಸ್ಪತ್ರೆಗಳಲ್ಲಿ ಸೀಮಿತ ಚಿಕಿತ್ಸೆಯಷ್ಟೇ ದೊರೆಯುತ್ತದೆ, ಅದಕ್ಕಾಗಿ ಬೊಕ್ಕಸದ ಹಣವು ಖಾಸಗಿ ಆಸ್ಪತ್ರೆಗಳಿಗೆ ಸುರಿಯಲ್ಪಡುತ್ತದೆ. ಹೊಸ ಆರೋಗ್ಯ ನೀತಿಯು ಇದೇ ಮಾದರಿಯನ್ನು ಇನ್ನಷ್ಟು ಗಟ್ಟಿಗೊಳಿಸಲಿದೆ ; ಹಾಗಾಗಿ ಸರಕಾರಿ ಆಸ್ಪತ್ರೆಗಳು ಇನ್ನಷ್ಟು ಸೊರಗಲಿವೆ, ಖಾಸಗಿ ಆಸ್ಪತ್ರೆಗಳು ಬೆಳೆಯಲಿವೆ, ಇನ್ನಷ್ಟು ದುಬಾರಿಯಾಗಲಿವೆ. ಅತಿ ಬಡವರು ಹಾಗೂ ಗ್ರಾಮೀಣವಾಸಿಗಳು ಇಂತಹ ಸೊರಗಿಸಲ್ಪಟ್ಟ ಸರಕಾರಿ ಆಸ್ಪತ್ರೆಗಳನ್ನೇ ನೆಚ್ಚಿಕೊಂಡಿರಬೇಕಾಗುತ್ತದೆ ; ಅಲ್ಲಿನ ಚಿಕಿತ್ಸೆ ಫಲ ನೀಡದಿದ್ದರೆ ಖಾಸಗಿ ಆಸ್ಪತ್ರೆಗೆ ಹೋಗಿ ಕೈಯಿಂದ ಖರ್ಚು ಮಾಡಬೇಕಾಗುತ್ತದೆ, ಇನ್ನಷ್ಟು ಬಡವರಾಗಿ ಕಷ್ಟಕ್ಕೊಳಬೇಕಾಗುತ್ತದೆ. ಈಗಾಗಲೇ ಪ್ರತೀ ವರ್ಷ ಆರು ಕೋಟಿಗೂ ಹೆಚ್ಚು ಜನ ಆಸ್ಪತ್ರೆಗಳಿಗೆ ಹಣ ಸುರಿದು ಬಡವರಾಗುತ್ತಿದ್ದಾರೆ ಎಂದು ಹೇಳುವ ಕರಡು ದಾಖಲೆಯು, ಅದಕ್ಕೆ ಪರಿಹಾರವೊದಗಿಸುವ ಬದಲು ಇನ್ನಷ್ಟು ಬಿಗಡಾಯಿಸಲು ಹೊರಟಿರುವುದು ಈ ದೇಶದ ಜನಸಾಮಾನ್ಯರ ಮೇಲೆ ಮಾಡಲಾಗುತ್ತಿರುವ ಅತಿ ಕ್ರೂರ ಅಪಹಾಸ್ಯವಲ್ಲದೆ ಮತ್ತೇನು ? ವಿಮಾಧಾರಿತ ಯೋಜನೆಗಳಲ್ಲಾಗುತ್ತಿರುವ ಮೋಸಗಳ ಬಗ್ಗೆಯೂ, ಖಾಸಗಿ ಆಸ್ಪತ್ರೆಗಳನ್ನು ನಿಯಂತ್ರಿಸುವ ಕಷ್ಟಗಳ ಬಗ್ಗೆಯೂ ಬರೆದು, ಅದನ್ನು ಸರಿಪಡಿಸುವ ಗೋಜಿಗೆ ಹೋಗದೆ, ಅದೇ ಮೋಸದ ವ್ಯವಸ್ಥೆಯನ್ನು ಇನ್ನಷ್ಟು ಬೆಳೆಸಲು ಉದ್ದೇಶಿಸಿರುವುದು ಸರಕಾರ ಪ್ರಾಯೋಜಿತ ದರೋಡೆಯಲ್ಲವೇ ? ಈಗಾಗಲೇ ರೋಗಗ್ರಸ್ತವಾಗಿರುವ ಆರೋಗ್ಯ ಸೇವೆಗಳಿಗೆ ರೋಗವನ್ನೇ ಪರಿಹಾರವಾಗಿಸುವ ಈ ಮತಿಹೀನ ಧೋರಣೆಯು ಜನಸಾಮಾನ್ಯರ ಆರೋಗ್ಯಕ್ಕೆ ನಿಜಕ್ಕೂ ಮಾರಕವಾಗಲಿದೆ.

ಹೊಸ ಕರಡು ನೀತಿಯಲ್ಲಿ ಪ್ರತೀ ಸಾವಿರ ಜನರಿಗೆ ಒಂದು ಆಸ್ಪತ್ರೆ ಹಾಸಿಗೆಯನ್ನು ಒದಗಿಸುವ ಆಶಯವನ್ನು ಹೇಳಲಾಗಿದೆ (ಪುಟ ೨೪). ಪ್ರತೀ ೬೦೦ ಜನರಿಗೆ ಒಂದು ಆಸ್ಪತ್ರೆ ಹಾಸಿಗೆಯಿರಬೇಕೆಂಬ ಸ್ವತಂತ್ರ ಭಾರತದ ಮೊದಲ ಸರಕಾರದ ಆಶಯವು ಇಲ್ಲೂ ಮರೀಚಿಕೆಯಾಗಿ ಉಳಿದಿದೆ. ದ್ವಿತೀಯ ಹಾಗೂ ತೃತೀಯ ಸ್ತರದ ಆಸ್ಪತ್ರೆಗಳನ್ನು ಸರಕಾರವೇ ಕಟ್ಟುವ ಬಗ್ಗೆಯೂ ಹೊಸ ನೀತಿಯು ಉತ್ಸುಕವಾಗಿಲ್ಲ ; ಅದಕ್ಕೆ ಬದಲಾಗಿ, ಖಾಸಗಿ ಆಸ್ಪತ್ರೆಗಳನ್ನು ಬಳಸಿಕೊಳ್ಳುವ ಬಗ್ಗೆ ಪದೇ ಪದೇ ಪ್ರಸ್ತಾಪಿಸಲಾಗಿದೆ.

ಹೊಸ ಆರೋಗ್ಯ ನೀತಿಯು ಖಾಸಗಿ ಆರೋಗ್ಯ ಸೇವೆಗಳೆದುರು ಸಂಪೂರ್ಣವಾಗಿ ಶರಣಾಗಿರುವುದು ಕರಡಿನುದ್ದಕ್ಕೂ ಸ್ಪಷ್ಟವಾಗಿ ಕಾಣುತ್ತದೆ. ತನ್ಮೂಲಕ ಕೇಂದ್ರ ಸರಕಾರವು ತನ್ನ ದೌರ್ಬಲ್ಯವನ್ನು ಜಗಜ್ಜಾಹೀರುಗೊಳಿಸಿದೆ. ಸಾರ್ವಜನಿಕ ಭೂಮಿಯನ್ನೂ, ಹಲಬಗೆಯ ತೆರಿಗೆ ವಿನಾಯಿತಿಗಳನ್ನೂ ಪಡೆದಿರುವ ಹೆಚ್ಚಿನ ಬೃಹತ್ ಖಾಸಗಿ ಆಸ್ಪತ್ರೆಗಳು ತಮ್ಮ ಬಾಧ್ಯತೆಗಳನ್ನು ಮರೆಯುತ್ತವೆ ಎಂದು ಹೇಳುತ್ತಲೇ, ಈ ಆಸ್ಪತ್ರೆಗಳು ವಿದೇಶಿ ರೋಗಿಗಳಿಗೆ ಚಿಕಿತ್ಸೆ ನೀಡಿ ದೇಶದ ಆರ್ಥಿಕ ಪ್ರಗತಿಗೆ ನೆರವಾಗುವುದರಿಂದ ನಮ್ಮ ದೇಶದ ಬಡಜನರಿಗೆ ಚಿಕಿತ್ಸೆ ನೀಡುವಂತೆ ಅವುಗಳ ಮೇಲೆ ಒತ್ತಡ ಹೇರಬೇಕಾದ ಅಗತ್ಯವಿಲ್ಲವೆಂದು ಈ ಕರಡಿನಲ್ಲಿ ಘೋಷಿಸಲಾಗಿದೆ (ಪುಟ ೩೬) ! ಅಂದರೆ, ಈ ದೇಶದ ಬಡವರಿಗೆ ಚಿಕಿತ್ಸೆ ನೀಡುವ ಭರವಸೆಯಿತ್ತು ಸರಕಾರಿ ಭೂಮಿಯನ್ನೂ, ತೆರಿಗೆ

## ಅಭಿನಂದನೆಗಳು



ತುಮಕೂರು ವಿಶ್ವವಿದ್ಯಾನಿಲಯದ ೮ನೇ ವಾರ್ಷಿಕ ಘಟಿಕೋತ್ಸವದ ಸಮಾರಂಭದಲ್ಲಿ ಹೊಸತು ಬಳಗದ ಹಿರಿಯ ಭೂವಿಜ್ಞಾನಿ ಶ್ರೀ ಟಿ. ಆರ್. ಅನಂತರಾಮು ಮತ್ತು ಸಾಹಿತಿ ಪ್ರೊ॥ ಬರಗೂರು ರಾಮಚಂದ್ರಪ್ಪ ಅವರಿಗೆ ಗೌರವ ಡಾಕ್ಟರೇಟ್ ನೀಡಿ ಗೌರವಿಸಲಾಗಿದೆ. ಇವರಿಬ್ಬರಿಗೂ 'ಹೊಸತು' ಮತ್ತು 'ನವಕರ್ನಾಟಕ' ಬಳಗದಿಂದ ಹಾರ್ದಿಕ ಅಭಿನಂದನೆಗಳು.



ವಿನಾಯಿತಿಗಳನ್ನೂ ಪಡಕೊಂಡ ಆಸ್ಪತ್ರೆಗಳು, ನಂತರ ಅದೇ ಬಡವರನ್ನು ಒಳಕ್ಕೂ ಬಿಡದೆ ವಿದೇಶೀಯರಿಗೆ ಚಿಕಿತ್ಸೆ ಕೊಟ್ಟರೆ ಅದರಿಂದಲೇ ದೇಶೋದ್ಧಾರ ವಾಗುತ್ತದೆ ಎನ್ನುವುದು ಈ ಸರಕಾರದ ಧೋರಣೆಯಾಗಿದೆ.

ಈ ಹೊಸ ಆರೋಗ್ಯ ನೀತಿಯೇನಾದರೂ ಜಾರಿಗೊಂಡರೆ, ಜನಸಾಮಾನ್ಯರು ಅತ್ತ ಖಾಸಗಿ ಆಸ್ಪತ್ರೆಗಳೊಳಕ್ಕೆ ಪ್ರವೇಶವಿಲ್ಲದೆ, ಇತ್ತ ಸರಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆಯಿಲ್ಲದೆ ನರಳಬೇಕಾಗುತ್ತದೆ. ಸರಕಾರಿ ಆಸ್ಪತ್ರೆಗಳಲ್ಲಿ ಕೆಲವೊಂದು ಸೇವೆಗಳನ್ನು ವಿಮಾಧಾರಿತವಾಗಿ, ಖಾಸಗಿಯವರಿಗೆ ಹೊರಗುತ್ತಿಗೆ ನೀಡುವ ಯೋಜನೆಯು ಸರಕಾರಿ ಆಸ್ಪತ್ರೆಗಳನ್ನು ನಿರ್ಜೀವಗೊಳಿಸಲಿದೆ. ಸರಕಾರಿ ಆಸ್ಪತ್ರೆಗಳಲ್ಲಿ, ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ, ಆಧುನಿಕ ವೈದ್ಯರ ಸೇವೆಗಳನ್ನು ಉತ್ತೇಜಿಸುವುದಕ್ಕೆ ಯಾವೊಂದು ಉಪಕ್ರಮವೂ ಈ ಹೊಸ ನೀತಿಯಲ್ಲಿಲ್ಲ. ಬದಲಿಗೆ, ಬಡವರು ಹಾಗೂ ಗ್ರಾಮೀಣವಾಸಿಗಳಿಗೆ ಚಿಕಿತ್ಸೆ ನೀಡುವುದಕ್ಕೆ ಆಯುಷ್ ವೈದ್ಯರು, ಆಶಾ ಕಾರ್ಯಕರ್ತೆಯರು, ಸಮುದಾಯ ಆರೋಗ್ಯದಲ್ಲಿ ಬಿ.ಎಸ್ಸಿ. ಪದವೀಧರರು, ಫಾರ್ಮಸಿಸ್ಟ್‌ಗಳು, ದಾದಿಯರನ್ನು ನಿಯೋಜಿಸುವ ಬಗ್ಗೆಯೂ, ಅದಕ್ಕಾಗಿ ಟೆಲಿಮೆಡಿಸಿನ್‌ನಂತಹ ತಂತ್ರಜ್ಞಾನಗಳನ್ನು ಬಳಸುವ ಬಗ್ಗೆಯೂ ಹೇಳಲಾಗಿದೆ (ಪುಟ ೨೩, ೩೮, ೩೯). ಅಂದರೆ, ಖಾಸಗಿ ಆಸ್ಪತ್ರೆಗಳು ಸ್ಥಿತಿವಂತರಿಗೆ ಮೀಸಲು ; ಬಡಬಗ್ಗರ ಪಾಲಿಗೆ ಆಧುನಿಕ ವೈದ್ಯರಾಗಲೀ, ಸೌಲಭ್ಯಗಳಾಗಲೀ ಇಲ್ಲದ ಸರಕಾರಿ ಆಸ್ಪತ್ರೆಗಳು !

ಈ ಹೊಸ ನೀತಿಯಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸಾಕ್ಷ್ಯಾಧಾರಿತ ವಿಧಾನಗಳಿಗೆ ಪ್ರಾಮುಖ್ಯತೆ ಇರಬೇಕೆಂದು ಹೇಳುತ್ತಲೇ (ಪುಟ ೩೭, ೪೮), ಸಾಕ್ಷ್ಯಾಧಾರಗಳಿಲ್ಲದ ಬದಲಿ ಪದ್ಧತಿಗಳ ಬಗ್ಗೆ ಹೆಮ್ಮೆಯನ್ನು ವ್ಯಕ್ತಪಡಿಸಿ, ಅತಿ ಪ್ರಾಶಸ್ತ್ಯವನ್ನು ನೀಡಲಾಗಿದೆ ! ಈ ಹೊಸ ನೀತಿಯು ಸಾಕ್ಷ್ಯಾಧಾರಿತ ಆಧುನಿಕ ವೈದ್ಯರನ್ನು ಮರೆತು, ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲೂ, ಎಲ್ಲಾ ಉನ್ನತ ದರ್ಜೆಯ ಆಧುನಿಕ ಆಸ್ಪತ್ರೆಗಳಲ್ಲೂ ಇನ್ನಷ್ಟು ಬದಲಿ ಚಿಕಿತ್ಸಕರನ್ನು ನೇಮಿಸಹೊರಟಿದೆ. ಅದರೊಂದಿಗೆ ಬಡಜನರಿಗೂ, ಗ್ರಾಮೀಣವಾಸಿಗಳಿಗೂ ಚಿಕಿತ್ಸೆ ನೀಡುವ ಸರಕಾರಿ ಆಸ್ಪತ್ರೆಗಳೆಲ್ಲವೂ ಬದಲಿ ಚಿಕಿತ್ಸಕರ ಪಾಲಾಗಿ, ಆಧುನಿಕ ಚಿಕಿತ್ಸೆಯೆಲ್ಲವೂ ದುಬಾರಿ ಖಾಸಗಿ ಆಸ್ಪತ್ರೆಗಳಿಗೇ ಸೀಮಿತವಾಗುವ ಅಪಾಯವಿದೆ. ಹೀಗೆ ಸರಕಾರಿ ಆಸ್ಪತ್ರೆಗಳಲ್ಲಿ ಕಡಿಮೆ ಸಂಬಳದ 'ಆಯುಷ್' ವೈದ್ಯರನ್ನೂ, ಕಡಿಮೆ ವೆಚ್ಚದ ಆಯುಷ್ ಔಷಧಗಳನ್ನೂ ತುಂಬಿಸಿ ಹಣ ಉಳಿಸಹೊರಟಿರುವ ಸರಕಾರವು ಜನಸಾಮಾನ್ಯರ ಜೀವದೊಂದಿಗೆ ಚೆಲ್ಲಾಟವಾಡುತ್ತಿದೆ.

ಹಾಗೆಯೇ, ಬದಲಿ ಪದ್ಧತಿಗಳಿಗೆ ಯಾವುದೇ ಸಂಬಂಧವಿಲ್ಲದ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮ ಗಳನ್ನು ಆಯುಷ್ ಚಿಕಿತ್ಸಕರಿಗೆ ವಹಿಸಿಕೊಡುವ ಬೇಜವಾಬ್ದಾರಿ ಯೋಜನೆಯು ಅದರಲ್ಲಿದೆ (ಪುಟ ೩೪). ಜೊತೆಗೆ, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಲ್ಲಿ ಆಯುಷ್ ವೈದ್ಯರನ್ನು ನಿಯೋಜಿಸುವ ಈಗಿರುವ ಯೋಜನೆಯನ್ನು ಇನ್ನಷ್ಟು ವ್ಯಾಪಕಗೊಳಿಸುವ ಬಗ್ಗೆಯೂ ಹೇಳಲಾಗಿದೆ. ಆಧುನಿಕ ವೈದ್ಯಕೀಯ ಸಂಶೋಧನೆಗಳಿಗೂ, ಚಿಕಿತ್ಸಾ ಸೌಲಭ್ಯಗಳಿಗೂ ಹೆಚ್ಚಿನ ಹಣ ಒದಗಿಸುವ ಬಗ್ಗೆ ಹೆಚ್ಚೇನೂ ಹೇಳದೆ, ಬದಲಿ ಚಿಕಿತ್ಸೆಗಳಿಗೆ ಹೆಚ್ಚಿನ ಧನಸಹಾಯ ನೀಡುವ ಭರವಸೆಯನ್ನು ನೀಡಲಾಗಿದೆ (ಪುಟ ೩೪, ೩೫).

ಎಲ್ಲಕ್ಕಿಂತ ಮುಖ್ಯವಾಗಿ, ಆಯುಷ್ ಚಿಕಿತ್ಸಕರಿಗೆ ಆಧುನಿಕ ಔಷಧಗಳ ಬಳಕೆಯಲ್ಲಿ ಕಡ್ಡಾಯ ತರಬೇತಿ ನೀಡಿ, ಆರೋಗ್ಯ ಸೇವೆಗಳಲ್ಲಿ ನಿಯೋಜಿಸ ಲಾಗುವುದೆಂದು ಈ ಕರಡಿನಲ್ಲಿ ಹೇಳಲಾಗಿದೆ (ಪುಟ ೩೪). ವೈದ್ಯವೃತ್ತಿಯೆಂದರೆ ಕೇವಲ ಔಷಧಗಳನ್ನು ಕೊಡುವುದಷ್ಟೇ ಅಲ್ಲ ಎನ್ನುವ ಸಾಮಾನ್ಯ ಜ್ಞಾನವೂ ಇಲ್ಲದ ಈ ಆರೋಗ್ಯ ನೀತಿಯು ವೈದ್ಯ ವಿಜ್ಞಾನಕ್ಕಷ್ಟೇ ಅಲ್ಲ, ದೇಶದ ಎಲ್ಲ ನಾಗರಿಕರಿಗೂ ಅವಮಾನ ಕಾರಿಯಾಗಿದೆ, ಅಪಾಯಕಾರಿಯಾಗಿದೆ.



ಖಾಸಗಿ ವೈದ್ಯಕೀಯ ಕಾಲೇಜುಗಳಿಂದಾಗಿ ವೈದ್ಯಕೀಯ ಶಿಕ್ಷಣ ಹಾಗೂ ವೈದ್ಯಕೀಯ ಚಿಕಿತ್ಸೆಗಳು ಅತ್ಯಂತ ದುಬಾರಿಯಾಗುತ್ತಿರುವುದು, ಅಲ್ಲಿ ಕಲಿತ ವೈದ್ಯರು ಸರಕಾರಿ ಸೇವೆಗಳಿಗೆ, ಸಣ್ಣ ನಗರಗಳು ಹಾಗೂ ಗ್ರಾಮೀಣ ಪ್ರದೇಶಗಳಿಗೆ ಅಲಭ್ಯರಾಗುವುದು, ಖಾಸಗಿ ಸಂಸ್ಥೆಗಳಲ್ಲಿ ವೈದ್ಯಕೀಯ ಸಂಶೋಧನೆಯು ನಗಣ್ಯವಾಗಿರುವುದು ಇತ್ಯಾದಿ ಸಮಸ್ಯೆಗಳನ್ನು ಈ ಕರಡಿನಲ್ಲಿ ಪ್ರಸ್ತಾಪಿಸಲಾಗಿದೆ (ಪುಟ ೩೭). ಅದರ ಬೆನ್ನಿಗೇ, ಇನ್ನಷ್ಟು ಖಾಸಗಿ ಕಾಲೇಜುಗಳನ್ನು ಸ್ಥಾಪಿಸುವ ಇಂಗಿತವನ್ನೂ ಅದರಲ್ಲಿ ವ್ಯಕ್ತಪಡಿಸಲಾಗಿದೆ (ಪುಟ ೩೭) ! ವೈದ್ಯಕೀಯ ಶಿಕ್ಷಣವನ್ನು ನಿಯಂತ್ರಿಸುತ್ತಿರುವ ನಾಲ್ಕು ಮಂಡಳಿಗಳ ವೈಫಲ್ಯವು ಚಿಂತಾಜನಕವಾಗಿದೆ ಎನ್ನಲಾಗಿದ್ದರೂ (ಪುಟ ೪೪), ಅದನ್ನು ಸರಿಪಡಿಸುವ ಯಾವ ಯೋಜನೆಯೂ ಕರಡಿನಲ್ಲಿಲ್ಲ.

ಹೊಸ ನೀತಿಯಲ್ಲಿ ಏಳು ಆದ್ಯತೆಗಳ ಹೆಸರಲ್ಲಿ ಹಳೇ ಹೂಗಳ ಹೊಸ ಗುಚ್ಛವನ್ನು ತೋರಿಸಲಾಗಿದೆ (ಪುಟ ೧೭). ಹೆಚ್ಚುತ್ತಿರುವ ಸಾಂಕ್ರಾಮಿಕ ರೋಗಗಳ ಬಗ್ಗೆ, ಆಧುನಿಕ ರೋಗಗಳ ಬಗ್ಗೆ, ಮನೋರೋಗಗಳ ಬಗ್ಗೆ, ಬಾಯಿ ಹಾಗೂ ದಂತಸಂಬಂಧಿ ರೋಗಗಳ ಬಗ್ಗೆ ಯಾವೊಂದು ಯೋಚನೆ –ಯೋಜನೆಗಳೂ ಹೊಸ ನೀತಿಯಲ್ಲಿ ಕಾಣಸಿಗುವುದಿಲ್ಲ. ಇವುಗಳ ಕಾರಣಗಳು ಮತ್ತು ನಿವಾರಣೋಪಾಯಗಳ ಬಗ್ಗೆ ಸ್ಥಳೀಯ ಸಂಶೋಧನೆಗಳನ್ನು ಉತ್ತೇಜಿಸುವ ಯೋಜನೆಯೂ ಅದರಲ್ಲಿಲ್ಲ. ಆಧುನಿಕ ರೋಗಗಳಿಗೆ ಪರಿಹಾರವಾಗಿ ಆಯುಷ್ ಚಿಕಿತ್ಸೆಯನ್ನೂ, ಯೋಗಾಭ್ಯಾಸವನ್ನೂ ಉತ್ತೇಜಿಸುವ ಯೋಜನೆಗಳು ಈ ಸರಕಾರಕ್ಕೆ ಯಾವುದೇ ವೈಚಾರಿಕ – ವೈಜ್ಞಾನಿಕ ದೃಷ್ಟಿಕೋನವಿಲ್ಲವೆನ್ನುವುದನ್ನು ಸಾಬೀತುಮಾಡುತ್ತವೆ.

ಈ ಹೊಸ ನೀತಿಯನುಸಾರ ಎಲ್ಲ ವಿದ್ಯಾರ್ಥಿಗಳು ಹಾಗೂ ಉದ್ಯೋಗಸ್ಥರು ತಮ್ಮ ಆರೋಗ್ಯ ರಕ್ಷಣೆಗೆ ಯೋಗಾಭ್ಯಾಸವನ್ನು ಮಾಡಬೇಕಾಗುತ್ತದೆ (ಪುಟ ೧೯, ೩೪). ಎಲ್ಲಾ ಶಾಲೆಗಳಿಗೆ ಆಟದ ಬಯಲುಗಳನ್ನು ಒದಗಿಸಿ ಮಕ್ಕಳ ಆಟೋಟಗಳನ್ನು ಉತ್ತೇಜಿಸುವ ಬದಲು ಕೋಣೆಯೊಳಗೆ ಅವರನ್ನು ಕೂಡಿಟ್ಟು ಧ್ಯಾನಸ್ಥರಾಗುವಂತೆ ಬಲಾತ್ಕರಿಸುವ ಈ ನೀತಿಯಿಂದಾಗಿ ಮಕ್ಕಳ ಆರೋಗ್ಯವೂ ವೃದ್ಧಿಸದು, ಈಗಾಗಲೇ ನಲುಗುತ್ತಿರುವ ಕ್ರೀಡಾ ಕ್ಷಮತೆಯೂ ಬೆಳೆಯದು. ನೌಕರರ ಆರೋಗ್ಯ ರಕ್ಷಣೆಗೆ ಅವರ ಮೇಲಿರುವ ಒತ್ತಡಗಳನ್ನು ಇಳಿಸಬೇಕೇ ಹೊರತು ಪದ್ಮಾಸನ ಹಾಕಿಸುವುದರಿಂದ ಪ್ರಯೋಜನವಾಗದು.

ಒಟ್ಟಿನಲ್ಲಿ ಈ ಹೊಸ ನೀತಿಯಡಿ ಉಚಿತ ಆರೋಗ್ಯ ಕಾರ್ಡ್ ಪಡೆದ ಬಡವರು ಸರಕಾರಿ ಆಸ್ಪತ್ರೆಗಳಲ್ಲಿ ಆಯುಷ್ ವೈದ್ಯರಿಂದಲೂ, ದಾದಿಯರಿಂದಲೂ ಚಿಕಿತ್ಸೆ ಪಡೆಯುವಂತಾಗುತ್ತದೆ; ಅವರಿಗೇನಾದರೂ ಗಂಭೀರ ಸಮಸ್ಯೆಗಳಿದ್ದರೆ ಅದೇ ವೈದ್ಯರು – ದಾದಿಯರು ದೂರದೂರಿನ ತಜ್ಞರಿಂದ ಪಡೆದ ಟೆಲಿಮೆಡಿಸಿನ್ ಸಲಹೆಗೆ ತುತ್ತಾಗಬೇಕಾಗುತ್ತದೆ. ಇವೆಲ್ಲ ವಿಫಲವಾದಾಗ ಆಧುನಿಕ ಉನ್ನತ ಚಿಕಿತ್ಸೆ ಪಡೆಯಲೋಸುಗ ಖಾಸಗಿ ಆಸ್ಪತ್ರೆಗಳಿಗೆ ಹೆಚ್ಚಿನ ಹಣ ಕೊಟ್ಟು ಹೋಗಬೇಕಾಗುತ್ತದೆ, ವಿಮೆಯಿಲ್ಲದಿದ್ದರೆ ಕೈ ಖಾಲಿ ಮಾಡಿಕೊಳ್ಳಬೇಕಾಗುತ್ತದೆ.

**ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯ**
'ಅಕ್ಷಯ', ಕದ್ರಿ ಕೈಬಟ್ಟಲ್, ಆಳ್ವಾರಿಸ್ ರಸ್ತೆ
ಮಂಗಳೂರು – ೫೭೫ ೦೦೨

ನಾನು ಓದಿದ ಪುಸ್ತಕ

# 'ಪೋಕರಿ ಪಾಪಣ್ಣನ ಪರಾಕು' ಆಧುನಿಕ ಸಮಾಜಗಳ ಸಂಘರ್ಷದ ಶೋಧನೆ




ಕೃತಿಯ ಹೆಸರು : **'ಪೋಕರಿ ಪಾಪಣ್ಣನ ಪರಾಕು'**
ಆಧಾರ : ಕಾರ್ಲೊ ಕೊಲೋಡಿಯ
ಇಟಾಲಿಯನ್ ಕೃತಿ : **'ಪಿನೋಕಿಯ'**
ಕನ್ನಡಕ್ಕೆ : ಎಂ. ಎಸ್. ಕೆ. ಪ್ರಭು
ಪ್ರಕಾಶಕರು
ಸಾಹಿತ್ಯ ಭಂಡಾರ, ಜಂಗಮಮೇಸ್ತ್ರಿ ಗಲ್ಲಿ, ಬಳೇಪೇಟೆ
ಬೆಂಗಳೂರು – ೫೬೦ ೦೫೩
ಪುಟಗಳು : ೧೪೪ ಬೆಲೆ : ರೂ. ೧೦೫/–

ಇತ್ತೀಚೆಗೆ 'ಸಾಹಿತ್ಯ ಭಂಡಾರ' ಸಂಸ್ಥೆಯು ಕಾರ್ಲೊ ಕೊಲೋಡಿಯನ ಇಟಾಲಿಯನ್ ಭಾಷೆಯ ಕೃತಿ 'ಪಿನೋಕಿಯ' ಎಂಬ ಮಕ್ಕಳ ಕಾದಂಬರಿಯ ಭಾಷಾಂತರವನ್ನು ಪ್ರಕಟಿಸಿದೆ. ಕನ್ನಡದ ಸಮರ್ಥ ಅನುವಾದಕರಲ್ಲಿ ಒಬ್ಬರಾದ ಎಂ. ಎಸ್. ಕೆ. ಪ್ರಭು ಅವರು ಇದನ್ನು 'ಪೋಕರಿ ಪಾಪಣ್ಣನ ಪರಾಕು' ಎಂದು ಅನುವಾದಿಸಿದ್ದಾರೆ. ೧೯ನೇ ಶತಮಾನದ ಮಧ್ಯಭಾಗದಲ್ಲಿ ಬದುಕಿದ್ದ ಕೊಲೋಡಿಯ, ಮಹಾಯುದ್ಧಗಳು ಮತ್ತು ಆಧುನಿಕತೆಯು ಸಮಾಜದ ಮೇಲೆ ಉಂಟು ಮಾಡುವ ದುಷ್ಪರಿಣಾಮವನ್ನು ಗಾಢವಾಗಿ ಅನುಭವಿಸಿದ್ದವರು. ಸ್ವಿಟ್ಜರ್ಲೆಂಡಿನ ಮಕ್ಕಳ ಕಾದಂಬರಿ 'ಹೈಡಿ' ಹೇಗೆ ಇತ್ಯಾತ್ಮಕ ಮೌಲ್ಯಗಳಿಗೆ ಒಂದು ಐಕಾನಿಕ್ ಆದ ಪಾತ್ರ ಆಯಿತೋ, ಹಾಗೇ 'ಪಿನೋಕಿಯ' (ಈ ಕಾದಂಬರಿಯ ಮುಖ್ಯ ಪಾತ್ರ) ಕೂಡ ಇಟಲಿಯ ಐಕಾನ್ ಆಗಿದ್ದಲ್ಲದೆ, ಚಲನಚಿತ್ರವಾಗಿಯೂ ಪ್ರಸಿದ್ಧಿಯನ್ನು ಪಡೆಯಿತು.

'ಪಿನೋಕಿಯ' ಅಥವಾ ಕನ್ನಡದ 'ಪೋಕರಿ ಪಾಪಣ್ಣ' ಒಂದು ಮರದ ಗೊಂಬೆ ; ಅದಕ್ಕೆ ಜೀವ ಬಂದು, ಅದು ಮಾಡುವ ಅವಾಂತರಗಳ ಸರಮಾಲೆ, ತದನಂತರ ಗೊಂಬೆ ಮನುಷ್ಯನಾಗಿ ಮಾರ್ಪಾಡಾಗುವುದು ಕಥನದ ವಸ್ತು. ಕೇವಲ ಇಷ್ಟೇ ಆಗಿದ್ದರೆ, ಅದು ಇಷ್ಟು ಪ್ರಸಿದ್ಧಿಗೆ ಬರುತ್ತಿರಲಿಲ್ಲ, ಈ ಕಥನದ ಶಕ್ತಿ ಮತ್ತು ಸಂಕೀರ್ಣತೆ ಇರುವುದೆಲ್ಲಿ ಎಂದರೆ, ಪಾಪಣ್ಣನ ಮೂರ್ಖ ಮತ್ತು ಕ್ಷುದ್ರ ಎಂದು ಭಾವಿಸಲ್ಪಟ್ಟ ಅವಾಂತರಗಳಲ್ಲಿ ಅತ್ಯಂತ ಗಹನವಾದ ಸಾಮಾಜಿಕ ಮೌಲ್ಯಗಳ ಪರಾಮರ್ಶೆ ನಡೆಯುತ್ತಾ ಹೋಗುತ್ತದೆ. ಹಾಗೂ ಈ ಪ್ರಕ್ರಿಯೆಯಲ್ಲಿ ಮನುಷ್ಯ ಲೋಕ, ಜೀವ ಮತ್ತು ನಿರ್ಜೀವ ಲೋಕ, ಭೂಮಿ ಆಕಾಶ, ಸಮುದ್ರ – ಹೀಗೆ, ವಿಶಾಲ ವಿಶ್ವದ ವಿರಾಟ ಪರಿಸರ–ಪದರು ಪದರಾಗಿ ಅನಾವರಣಗೊಳ್ಳುತ್ತಾ, ಈ ಎಲ್ಲಾ ವಿಶ್ವಗಳ ನಂಬಿಕೆಗಳ, ಮೌಲ್ಯಗಳ, ನೈತಿಕತೆಗಳ ಶೋಧನೆ ನಡೆಯುತ್ತಾ ಹೋಗುತ್ತದೆ. ಈ ಕಾರಣದಿಂದ, ಒಂದು ಕುರೂಪಿ, ಕಿತಾಪತಿ ಎಂದು ಪ್ರೊಜೆಕ್ಟ್ ಮಾಡಲ್ಪಟ್ಟ ಮರದ ಗೊಂಬೆಯ ಕಥನಕ್ಕೆ ಮಹಾಕಾವ್ಯವೊಂದರ ಹರವು ಮತ್ತು ವ್ಯಾಪ್ತಿ ದಕ್ಕಿಬಿಡುತ್ತದೆ.

ಕಥನದ ಪರಿಸರಗಳು ಬದಲಾಗುತ್ತಾ ಹೋದಂತೆ, ಕಥನಕ್ಕೆ ಪುರಾಣದ, ಜನಪದದ, ನಾಟಕದ ಹಾಗೂ ಕವಿತೆಯ ಆಯಾಮಗಳು ಪ್ರಾಪ್ತವಾಗುತ್ತಾ ಹೋಗುತ್ತವೆ. ಹೀಗೆ ಮಕ್ಕಳ ಕಥನವೊಂದರೊಳಗೆ ಅನೇಕ ಪ್ರಕಾರಗಳ ಮತ್ತು ವಸ್ತುಗಳ ನೇಯ್ಗೆ ಅತ್ಯಂತ ಸಹಜವಾಗಿ ಮತ್ತು ಸಲೀಸಾಗಿ ಹೆಣೆದುಕೊಂಡುಬಿಡುತ್ತದೆ. ವಸ್ತುವಿನಲ್ಲಿ, ಪರಿಸರ ಮತ್ತು ಕಥನದ ಕ್ರಮದಲ್ಲಿ ಉಂಟಾಗುವ ಪಲ್ಲಟಗಳಿಂದ ಕಾದಂಬರಿಯಲ್ಲಿ ಮಾಂತ್ರಿಕ ವಾಸ್ತವತೆಯ ಲಕ್ಷಣಗಳು ಸೃಷ್ಟಿಯಾಗುತ್ತವೆ. ಈ ಲಕ್ಷಣದಲ್ಲಿ ಎರಡು ಮುಖ್ಯವಾದ ಸಂಕಥನಗಳು ರೂಪುಗೊಳ್ಳುತ್ತವೆ. ಒಂದು, ಇವಾನ್ ಇಲ್ಯಿಚ್ ಹೇಳುವ 'schooling and de-schooling' ಬಗೆಗಿನ ಸಂಕಥನ ; ಮತ್ತೊಂದು ಮಿಶೆಲ್ ಫೂಕೋ ಹೇಳುವ ಮನುಷ್ಯರ ವ್ಯಕ್ತಿತ್ವದ ಸಾಮಾಜಿಕ ಸಂರಚನೆ ಮತ್ತು ನಿರಚನೆಯ ಸಂಕಥನ. ಇದು ವ್ಯಕ್ತಿ ಸ್ವಾತಂತ್ರ್ಯ, ವೈಯಕ್ತಿಕ ಆಸೆ, ಅಭೀಪ್ಸೆಗಳು ಮತ್ತು ಸಾಮಾಜಿಕ ನೀತಿ, ನಿಯಮ ಕಟ್ಟಳೆಗಳ ನಡುವೆ ಉಂಟಾಗುವ ಸಂಘರ್ಷವನ್ನು ಚಿತ್ರಿಸುತ್ತದೆ. ಕೊನೆಗೆ, ಈ ಲೋಕದಲ್ಲಿ ಸಲ್ಲುವುದಕ್ಕೆ ಸಾಮಾಜಿಕ ಅಧಿಕಾರದ ಮೌಲ್ಯಗಳ ಒಳಗೇ ವ್ಯಕ್ತಿತ್ವವೊಂದು ಅಡಕಗೊಳ್ಳಬೇಕಾದ ಅನಿವಾರ್ಯತೆಯನ್ನು ಹೇಳುತ್ತದೆ. ಮಾಂತ್ರಿಕ ವಾಸ್ತವತೆ ಕಟ್ಟಿಕೊಡುವ ಪ್ರತಿಮೆಗಳು, ಸ್ಕೂಲಿಂಗ್ ಇಲ್ಲದಿದ್ದರೆ ಪ್ರಾಣಿಯಾಗಿ ಬಿಡುವ, ಜೀವನದುದ್ದಕ್ಕೂ ನರಕಸದೃಶವಾದ ಬದುಕನ್ನು ಬಾಳಬೇಕಾದ ಅಸಹಾಯಕತೆಯನ್ನು ಸೂಚಿಸುತ್ತವೆ. ಯಾವ ಪರಿಸರಕ್ಕೆ ಹೋದರೂ, ಅಲ್ಲಿ ಮೌಲ್ಯಗಳ ಹೆಸರಿನಲ್ಲಿ ಅಧಿಕಾರ ಮತ್ತು ಶ್ರೇಣೀಕರಣ ವ್ಯವಸ್ಥಿತವಾಗಿ ಸ್ಥಾಪಿತವಾಗುತ್ತಾ ಹೋಗುವುದನ್ನು ಕಥನ ಲಘು ಹಾಸ್ಯದ ಮೂಲಕ ಹೇಳುತ್ತದೆ.

ಕೊಲೋಡಿಯ, ಹೀಗೆ ಆಧುನಿಕ ಸಮಾಜದ ಅಧಿಕಾರದ ಅಮಾನವೀಯ ಹಾಗೂ ಸಂಕೀರ್ಣವಾದ ಮುಖಗಳನ್ನು ತನ್ನ ಕಥನದ ಮೂಲಕ ಅನಾವರಣಗೊಳಿಸುತ್ತಾನೆ. ಮಿಶೆಲ್ ಫೂಕೋ, ಸಾಮಾಜಿಕ ಅಧಿಕಾರದ ಅಮೂರ್ತ ಶಕ್ತಿಯ ಬಗ್ಗೆ ಹೇಳುತ್ತಾ, ವ್ಯಕ್ತಿಗಳನ್ನು ಅವರ ಸಮ್ಮತಿಯಿಂದಲೇ ವಸ್ತುಗಳನ್ನಾಗಿ ಮಾಡಿಕೊಳ್ಳುವ ತಂತ್ರಗಳ ಬಗ್ಗೆ ಪ್ರಸ್ತಾಪಿಸುತ್ತಾನೆ. ಈ ಪ್ರಕ್ರಿಯೆಯಲ್ಲಿ ಶಿಕ್ಷಣ, ಕುಟುಂಬ ಎಲ್ಲವೂ ಹೇಗೆ ಅಧಿಕಾರದ ಏಜೆಂಟ್‌ಗಳಾಗಿ ಪಾತ್ರವಹಿಸುತ್ತವೆ ಎಂಬುದನ್ನು ವಿವರಿಸುತ್ತಾನೆ. 'ಪೋಕರಿ ಪಾಪಣ್ಣ'ನ ಕಥನದಲ್ಲಿ ಈ ವಿಷಯವೇ ವಿಷದೀಕರಿಸಲ್ಪಡುತ್ತದೆ. ಅಧಿಕಾರದ ಈ ಅಮಾನವೀಯ ಗುಣದ ಹಿನ್ನೆಲೆಯಲ್ಲಿ ರೂಪುಗೊಳ್ಳುವ ಮನುಷ್ಯ ಪ್ರೀತಿಯ ಅದಮ್ಯ ಶಕ್ತಿ , ಸಂಬಂಧಗಳ ಸಹಾನುಭೂತಿ ಮತ್ತು ದುಡಿಮೆಯ ಘನತೆಯ ಸುತ್ತ ವಾಗ್ವಾದಗಳು ರೂಪುಗೊಳ್ಳುತ್ತವೆ. ಇದರ ಜೊತೆಗೆ, ಆಧುನಿಕತೆಯು ಮನುಷ್ಯ ಪರಿಸರ ಮತ್ತು ಜೀವ ಪರಿಸರದ ಮಧ್ಯೆ ಸೃಷ್ಟಿಸಿರುವ ಕಂದರವನ್ನು ನಿವಾರಿಸುವ ಪ್ರಯತ್ನ ಮಾಡುತ್ತದೆ. ಮನುಷ್ಯರು ಜನಾಂಗೀಯ ಮೂಲದ ಮೌಲ್ಯದತ್ತ ಮುಖ ಮಾಡಲೇಬೇಕಾದ ಅನಿವಾರ್ಯತೆಯನ್ನು ಕೂಡ ಕಥನ ಸೂಚಿಸುತ್ತದೆ.

ಎಂ. ಎಸ್. ಕೆ. ಪ್ರಭು ಅವರ ಅನುವಾದ ಹೃದ್ಯವಾಗಿದ್ದರೂ, ದೀರ್ಘವಾದ ಸಂಭಾಷಣೆಗಳನ್ನು ಸ್ವಲ್ಪ ಎಡಿಟ್ ಮಾಡಿದರೆ ಕಥನದ ಓದಿನಲ್ಲಿ ಉಂಟಾಗುವ ಏಕತಾನತೆಯನ್ನು ತಪ್ಪಿಸಬಹುದಿತ್ತು.

**ಬಿ. ಯು. ಸುಮಾ**
ನಂ. ೧೭೭೧, ೧೨ನೇ ಅಡ್ಡರಸ್ತೆ, ಕೆಂಗೇರಿ ಉಪನಗರ
ಬೆಂಗಳೂರು – ೫೬೦ ೦೬೦

# ಮಾಧ್ಯಮಗಳಲ್ಲಿ ನೀತಿಸಂಹಿತೆ

ಭಾರತದಲ್ಲೂ ಮಾಧ್ಯಮ ವೃತ್ತಿ ಸಂಘಟನೆಗಳು ತಮ್ಮದೇ ಆದ ನೀತಿಸಂಹಿತೆಗಳನ್ನು ಅಳವಡಿಸಿಕೊಂಡಿವೆ. ಭಾರತೀಯ ಪತ್ರಿಕಾ ಮಂಡಳಿ ನಮ್ಮ ದೇಶದ ಮಾಧ್ಯಮಗಳ ಕಾರ್ಯನಿರ್ವಹಣೆಯನ್ನು ಅವಲೋಕಿಸುವ ಕಾವಲು ಸಮಿತಿ. ಮಾಧ್ಯಮಗಳು ಕಾಯ್ದುಕೊಳ್ಳಬೇಕಾದ ಉನ್ನತಮಟ್ಟದ ಸಲುವಾಗಿ ಪತ್ರಿಕಾ ಮಂಡಳಿ ಕೂಡ ತನ್ನದೇ ನೀತಿಸಂಹಿತೆಯನ್ನು ರಚಿಸಿ, ಆಚರಣೆಗೆ ಒತ್ತು ನೀಡುತ್ತದೆ. ಕೋಮುವಾದಿ, ಕೀಳು ಅಭಿರುಚಿ ಮತ್ತು ಮಾನಹಾನಿಕರ ಬರವಣಿಗೆಗಳನ್ನು ನಿಗ್ರಹಿಸುವುದು ಈ ನೀತಿಸಂಹಿತೆಯ ಪ್ರಮುಖ ಅಂಶಗಳಲ್ಲಿ ಒಂದು.

**ಎಚ್. ಎಸ್. ಈಶ್ವರ**

ಇಂದಿನ ಕಾಲಘಟ್ಟದಲ್ಲಿ ತಾಂತ್ರಿಕ ಮತ್ತು ಜಾಗತಿಕ ಬೆಳವಣಿಗೆಗಳ ಕಾರಣದಿಂದಾಗಿ, ಸಂವಹನ ಮಾಧ್ಯಮಗಳು 'ದೈತ್ಯಾಕಾರ'ದಲ್ಲಿ ಬೆಳೆದು ನಿಂತಿವೆ. ನಮ್ಮ ದೈನಂದಿನ ಬದುಕಿನಲ್ಲಿ ಈ ಮಾಧ್ಯಮಗಳು ಮಹತ್ತರ ಪ್ರಭಾವ ಬೀರುವ ಸಾಮರ್ಥ್ಯವನ್ನು ಪಡೆದುಕೊಂಡಿವೆ. ಅವು ತಮ್ಮ ಬಳಕೆದಾರರ ಸೇವೆಯ ಉದ್ದೇಶ ಹೊಂದಿರುವುದಾಗಿ ಪ್ರಚಾರ ಮಾಡಿದರೂ, ನಾವು ಅವುಗಳ ಗುಲಾಮರಾಗಿ ಪರಿವರ್ತನೆಗೊಂಡಿರುವುದು ವಿಪರ್ಯಾಸ. ನಮ್ಮ ಸಾಮಾಜಿಕ ಆಗುಹೋಗುಗಳನ್ನು ಮತ್ತು ನಮ್ಮ ವ್ಯಕ್ತಿತ್ವ ವಿನ್ಯಾಸವನ್ನು ರೂಪಿಸುವಲ್ಲಿ ಅವುಗಳ ಪಾತ್ರ ಗಣನೀಯವಾದದ್ದು. ಅಷ್ಟೊಂದು ಪರಿಣಾಮಕಾರಿ ಪ್ರಭಾವ ಹೊಂದಿರುವ ಮಾಧ್ಯಮ ವ್ಯವಸ್ಥೆ ಎಷ್ಟು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿದೆ ಎಂದು ವಿಮರ್ಶೆ ಮಾಡುವುದು ಅನಿವಾರ್ಯ.

ಇಂದು ಈ ಮಾಧ್ಯಮಗಳು ತಮ್ಮ ಕಾರ್ಯ ನಿರ್ವಹಣೆಯ ಬಗ್ಗೆ ಕೆಲವು ತೀವ್ರತರ ಆಕ್ಷೇಪಣೆಗಳಿಗೆ ಗುರಿಯಾಗಿರುವುದು ಸತ್ಯ. ಒಡೆತನದ ಏಕಸ್ವಾಮ್ಯತೆಯಿಂದಾಗಿ ಮಾಧ್ಯಮ ಸ್ವಾತಂತ್ರ್ಯ ಅಪಾಯದ ಅಂಚಿನತ್ತ ಸಾಗುತ್ತಿದೆ. ಮಾಲೀಕತ್ವದ ಪ್ರಭಾವದಿಂದಾಗಿ ಮಾಧ್ಯಮಗಳು ರಾಜಕೀಯ ಮತ್ತು ಆರ್ಥಿಕ ಪಕ್ಷಪಾತ ನೀತಿಯನ್ನು ಅನುಸರಿಸುವ ಸಾಧ್ಯತೆಗಳು ಹೆಚ್ಚಾಗುತ್ತಿವೆ. ಹೀಗಾಗಿ ಈ ಮಾಧ್ಯಮಗಳ ವಿಶ್ವಾಸಾರ್ಹತೆಯ ಬಗ್ಗೆ ಸಹಜ ಅನುಮಾನಗಳು ಅನಿವಾರ್ಯವಾಗಿ ಹುಟ್ಟಿಕೊಳ್ಳುತ್ತವೆ. ಮಾಧ್ಯಮ ವೃತ್ತಿಯಲ್ಲಿ ವೃತ್ತಿಪರತೆಯ ಕೊರತೆಯೂ ಕಳವಳಕ್ಕೆ ಕಾರಣವಾಗುತ್ತದೆ. ಮಾಧ್ಯಮದ ಕೆಲಸ ಒಂದು 'ಬ್ರಹ್ಮವಿದ್ಯೆ', ಅದು ಕೆಲವರಿಗೆ 'ದೈವದತ್ತ'ವಾಗಿ ಪ್ರಾಪ್ತವಾಗುತ್ತದೆ ಎಂಬಂತಹ ಭಾವನೆಯೊಂದು ನಮ್ಮಲ್ಲಿ ಪ್ರಬಲವಾಗಿ ಬೇರುಬಿಟ್ಟಿದೆ. ಈ ಬಗೆಯ 'ತರಬೇತಿ–ವಿರೋಧಿ' ಧೋರಣೆ ವೃತ್ತಿಪರತೆಯನ್ನು ಬೆಳೆಸುವಲ್ಲಿ ಅಡ್ಡಿಯಾಗುತ್ತದೆ.

ಮಾಧ್ಯಮಗಳ ಕಾರ್ಯ ನಿರ್ವಹಣೆ ಕುರಿತಂತೆ ಪ್ರಕಟಿತವಾಗಿರುವ ಕೆಲವು ಆಪಾದನೆಗಳನ್ನು ಗುರುತಿಸಬಹುದು. ಮಾಧ್ಯಮಗಳ ವಸ್ತುನಿಷ್ಠತೆಯ ಬಗ್ಗೆ ಯಾವತ್ತೂ ಅನುಮಾನಗಳು ಇದ್ದೇ ಇವೆ. ಅವು ಸುದ್ದಿಗಳನ್ನು ತಿದ್ದಿ ತಮ್ಮ ನೀತಿಗೆ ಅನುಸಾರವಾಗಿ ತಿರುಚಿ ಬರೆಯುತ್ತವೆ ಎನ್ನುವ ಮಾತು ಹೊಸದೇನಲ್ಲ. ಅವು ಗಹನವಾದ ವಿಚಾರಗಳನ್ನು ಕಡೆಗಣಿಸಿ, ಗೌಣವಾದ ವಿಚಾರಗಳನ್ನು ರಂಜಕವಾಗಿ ಪ್ರಚಾರ ಮಾಡುತ್ತವೆ ಎಂಬ ಮಾತೂ ಇದೆ. ಅಪರಾಧ, ಹಿಂಸೆ, ಕ್ರೌರ್ಯ, ಲೈಂಗಿಕ ವಿಚಾರಗಳು ಮಾಧ್ಯಮಗಳಲ್ಲಿ ವಿಜೃಂಭಿಸುತ್ತವೆ. ಇಂತಹ ಸಮಾಜ ವಿರೋಧಿ ಚಟುವಟಿಕೆಗಳ ಮಿತಿ ಮೀರಿದ ಪ್ರಚಾರ ಸಮಾಜದ ಸ್ವಾಸ್ಥ್ಯಕ್ಕೆ ಎರವಾಗುತ್ತದೆ. ಅದರಲ್ಲೂ ಮಕ್ಕಳ ಮಾನಸಿಕ ಆರೋಗ್ಯ ಮತ್ತು ವರ್ತನೆಯ ಮೇಲೆ ನಕಾರಾತ್ಮಕ ಪರಿಣಾಮವನ್ನು ಉಂಟುಮಾಡುವುದಾಗಿ ಸಮಾಜ ವಿಜ್ಞಾನಿಗಳು, ಮನೋವಿಜ್ಞಾನಿಗಳು ತಮ್ಮ ಸಂಶೋಧನೆಗಳ ಮೂಲಕ ದೃಢಪಡಿಸಿದ್ದಾರೆ. ಪ್ರತಿಷ್ಠಿತ ವ್ಯಕ್ತಿಗಳ ಖಾಸಗಿ ಬದುಕನ್ನು ಸಾರ್ವಜನಿಕಗೊಳಿಸುವ ಮೂಲಕ ಅಂಥವರ 'ವ್ಯಕ್ತಿತ್ವದ ಕೊಲೆ' ಮಾಡುವ ಅನೈತಿಕ ಕ್ರಿಯೆಯಲ್ಲಿ ಮಾಧ್ಯಮಗಳು ತೊಡಗಿಕೊಳ್ಳುವುದು ಸಹ ಆಗಾಗ ನಡೆಯುತ್ತಲೇ ಇರುತ್ತದೆ. ನ್ಯಾಯಾಲಯದಲ್ಲಿ ವಿಚಾರಣೆಗೆ ಬರುವ ಮೊದಲೇ ಆರೋಪಿಯನ್ನು ಅಪರಾಧಿ ಎಂದು ಪರಿಗಣಿಸುವ ಮಾಧ್ಯಮಗಳ ಹವ್ಯಾಸ ಆತಂಕಕ್ಕೆ ಕಾರಣವಾಗಿದೆ. ಈ ಬಗೆಯ ಮಾಧ್ಯಮಗಳ ಪ್ರಚಾರ ನ್ಯಾಯಾಲಯದ ತೀರ್ಪುಗಳನ್ನು ಹಾದಿ ತಪ್ಪಿಸುವ ಸಾಧ್ಯತೆಗಳನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ. ಈ ಎಲ್ಲ ಆಪಾದನೆಗಳಿಗೂ ಮುಕುಟಪ್ರಾಯವಾಗಿರುವ ಇನ್ನೊಂದು ಆರೋಪ ಮಾಧ್ಯಮಗಳ ಭ್ರಷ್ಟತೆ. 'ಪೇಯ್ಡ್ ನ್ಯೂಸ್' ಎಂಬ ಪೆಡಂಭೂತ ಇತ್ತೀಚಿನ ದಿನಗಳಲ್ಲಿ ಮಾಧ್ಯಮಗಳನ್ನು ಕಾಡುತ್ತಿರುವ ವಿಚಾರ ಸಾಕಷ್ಟು ಚರ್ಚೆಗೆ ಎಡೆಮಾಡಿಕೊಟ್ಟಿದೆ.

ಮೇಲಿನ ಆಪಾದನೆಗಳ ಹಿನ್ನೆಲೆಯಲ್ಲಿ ಮಾಧ್ಯಮಗಳಲ್ಲಿ ನೀತಿಸಂಹಿತೆಯ ಪರಿಪಾಲನೆಯ ಅಗತ್ಯ ಮತ್ತು ಮಹತ್ವಗಳನ್ನು ಪರಿಶೀಲಿಸುವ ಅಗತ್ಯವಿದೆ. ನೀತಿಸಂಹಿತೆಯ ಚರ್ಚೆಯಲ್ಲಿ ನಾವು ಪ್ರಮುಖವಾಗಿ ಎರಡು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಮೊದಲಿಗೆ, ಮಾಧ್ಯಮಗಳು ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸುತ್ತವೆ, ಮತ್ತು ಯಾವುದೇ ಮಾಧ್ಯಮ ಸಂಸ್ಥೆಯಲ್ಲಿ ಹಲವು ಜನ ಒಟ್ಟಾಗಿ ಕೆಲಸ ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಯಾವುದೇ ಮಾಧ್ಯಮ



ನೀತಿ ಪರಿಪಾಲನೆ, ನಿಜವಾದ ಅರ್ಥದಲ್ಲಿ, ಆ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುವ ವ್ಯಕ್ತಿಗಳ ವೈಯಕ್ತಿಕ ನೈತಿಕತೆಯ ಆಧಾರದ ಹಿನ್ನೆಲೆಯಲ್ಲಿ ವ್ಯಕ್ತವಾಗುತ್ತದೆ. ಆದ್ದರಿಂದ ಒಂದು ಮಾಧ್ಯಮ ಸಂಸ್ಥೆಯ ನೈತಿಕ ಜವಾಬ್ದಾರಿ ಸಿಬ್ಬಂದಿ ವರ್ಗದ ನೈತಿಕತೆಯನ್ನೇ ಅವಲಂಬಿಸಿರುತ್ತದೆ. ಎರಡನೆಯದಾಗಿ, ನೀತಿ ಮತ್ತು ನಿಯಮ ಇವು ಒಂದಕ್ಕೊಂದು ಪೂರಕವಾದರೂ ಅವು ವಿಭಿನ್ನವಾದ ಪ್ರಕಾರಗಳು. ನಿಯಮಗಳು ಆಡಳಿತದಿಂದ ರಚಿತವಾಗಿ, ಹೊರ ಮೂಲಗಳಿಂದ ನಿರ್ಬಂಧಿಸಲ್ಪಡುತ್ತವೆ. ಆದರೆ ನೀತಿ ವ್ಯಕ್ತಿಯ ಆತ್ಮಪ್ರಜ್ಞೆಗೆ ಸಂಬಂಧಿಸಿದ್ದು, ಅವನಿಂದಲೇ ನಿರ್ಧಾರಿತವಾಗಿ, ಅವನೇ ಅದರ ನಿರ್ಬಂಧಕ್ಕೆ ಒಳಗಾಗುತ್ತಾನೆ. ಕಾನೂನುಗಳ ರಚನೆ ಮತ್ತು ಹೇರಿಕೆಯಿಂದ ಸದಾಚಾರವನ್ನು ನಿರೀಕ್ಷಿಸುವುದಕ್ಕೆ ಬರುವುದಿಲ್ಲ. ಆದ್ದರಿಂದ ನೀತಿಸಂಹಿತೆ ಕಾನೂನಿನ ಚೌಕಟ್ಟಿಗೆ ಹೊರತಾದದ್ದು. ಅದು ಸ್ವಯಂ–ವಿಧಿತ ಕರ್ತವ್ಯ.


*ರಾಬರ್ಟ್ ಹಚಿನ್*

ಮಾಧ್ಯಮ ನೀತಿಸಂಹಿತೆಗಳು ಇಪ್ಪತ್ತನೆಯ ಶತಮಾನದ ಆದಿ ಭಾಗದಿಂದಲೂ ಚಲಾವಣೆಯಲ್ಲಿವೆ. ಹಿಂದಿನ ಶತಮಾನದ ಮಧ್ಯಭಾಗದಲ್ಲಿ ಅಮೇರಿಕಾದಲ್ಲಿ ರಚಿತವಾದ ಪತ್ರಿಕಾ ಸ್ವಾತಂತ್ರ್ಯ ಕುರಿತ ಆಯೋಗ, ಮಾಧ್ಯಮಗಳ ನೀತಿಸಂಹಿತೆಯ ಬೆಳವಣಿಗೆಯ ಹಾದಿಯಲ್ಲಿ ಒಂದು ಮಹತ್ವದ ಮೈಲಿಗಲ್ಲು. ಶಿಕಾಗೋ ವಿಶ್ವವಿದ್ಯಾಲಯದ ಅಧ್ಯಕ್ಷರಾಗಿದ್ದ ರಾಬರ್ಟ್ ಹಚಿನ್ಸ್ ನೇತೃತ್ವದ ಈ ಆಯೋಗ ಸಮಾಜ ಮತ್ತು ಮಾಧ್ಯಮಗಳ ನಡುವಣ ಸೂಕ್ಷ್ಮ ಸಂಬಂಧಗಳನ್ನು ಕುರಿತು ವಿಮರ್ಶೆ ಮಾಡಿ, ಕೆಲವು ಮೌಲಿಕವಾದ ಶಿಫಾರಸ್ಸುಗಳನ್ನು ಮಾಡಿದೆ. ವ್ಯಕ್ತಿಗಳ ಹಕ್ಕನ್ನು ಪ್ರತಿಪಾದಿಸುವಲ್ಲಿ ಸಮಾಜದ ಹಿತವನ್ನು ಕಡೆಗಣಿಸಲಾಗುವುದಿಲ್ಲ. ಸಮಾಜದ ಒಳಿತು ಮತ್ತು ಸ್ವಾಸ್ಥ್ಯಕ್ಕೆ ಹೆಚ್ಚಿನ ಆದ್ಯತೆ ದೊರೆಯಬೇಕು. ಯಾರು ಸ್ವಾತಂತ್ರ್ಯದ ಸವಲತ್ತುಗಳನ್ನು ಅನುಭವಿಸುತ್ತಾರೋ, ಅಂಥವರು ಸಮಾಜದ ಯೋಗಕ್ಷೇಮಕ್ಕೂ ಹೊಣೆಯಾಗುತ್ತಾರೆ. ಸ್ವಾತಂತ್ರ್ಯ ಮತ್ತು ಜವಾಬ್ದಾರಿ ಎರಡೂ ಒಂದಕ್ಕೊಂದು ಪೂರಕವಾಗಿ ಕೆಲಸಮಾಡಬೇಕು. ಈ ಆಲೋಚನೆಗಳು ಹಚಿನ್ಸ್ ಆಯೋಗದ ಆಧಾರ ಸೂತ್ರಗಳು.

ಹಚಿನ್ಸ್ ಆಯೋಗದ ಒಂದು ಮಹತ್ತರ ಕೊಡುಗೆ ಪತ್ರಿಕಾ ಸ್ವಾತಂತ್ರ್ಯದ ಬಗೆಗಿನ ಒತ್ತನ್ನು ಪತ್ರಿಕೆಗಳ ಸಾಮಾಜಿಕ ಹೊಣೆಗಾರಿಕೆಯತ್ತ ಬದಲಾಯಿಸಿದ್ದು. ಯಾರು ಜವಾಬ್ದಾರಿಯಿಂದ ನಡೆದುಕೊಳ್ಳುತ್ತಾರೋ, ಅಂಥವರು ಸ್ವಾತಂತ್ರ್ಯದ ಸವಲತ್ತನ್ನು ಪಡೆಯಲು ಬಾಧ್ಯರು. ಆದ್ದರಿಂದ ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಮಾಧ್ಯಮಗಳು ಜವಾಬ್ದಾರಿಯಿಂದ ತಮ್ಮ ಪಾಲಿನ ಕಾರ್ಯವನ್ನು ನಿರ್ವಹಿಸಲೇಬೇಕು. ಹಚಿನ್ಸ್ ಆಯೋಗದ ಶಿಫಾರಸ್ಸುಗಳು, ನಂತರದ ನೀತಿ ಸಂಹಿತೆಯ ಕಲ್ಪನೆಯನ್ನು ವ್ಯಾಖ್ಯಾನಿಸುವಲ್ಲಿ ಸಾಕಷ್ಟು ಪ್ರಭಾವ ಬೀರಿದವು.

ವಿಶ್ವದಾದ್ಯಂತ ಇಂದು ಮಾಧ್ಯಮ ನೀತಿಸಂಹಿತೆಗಳು ಆಚರಣೆಯಲ್ಲಿವೆ. ಬೇರೆ ಬೇರೆ ಮಾಧ್ಯಮ ವೃತ್ತಿ ಸಂಘಟನೆಗಳು ತಮ್ಮದೇ ನೀತಿಸಂಹಿತೆಗಳನ್ನು ರೂಪಿಸಿಕೊಂಡು, ಅವುಗಳನ್ನು ಪಾಲಿಸಿಕೊಂಡು ಬರುವ ಪ್ರಯತ್ನವನ್ನು ಮಾಡುತ್ತಾ ಬಂದಿವೆ. ಅಮೇರಿಕಾದ ಪತ್ರಿಕಾ ಸಂಪಾದಕರ ಸಂಘ ೧೯೨೨ರಲ್ಲಿ ರೂಪಿಸಿ, ೧೯೭೫ರಲ್ಲಿ ಪರಿಷ್ಕರಿಸಿದ ನೀತಿಯಲ್ಲಿ ಪ್ರಮುಖವಾಗಿ ಆರು ಅಂಶಗಳು ಪ್ರಸ್ತಾಪವಾಗಿವೆ. ಅವೆಂದರೆ : ಹೊಣೆಗಾರಿಕೆ, ಪತ್ರಿಕಾ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವುದು, ಸ್ವಾವಲಂಬನೆ, ಸತ್ಯ ಮತ್ತು ನಿಖರತೆ, ನಿಷ್ಪಕ್ಷಪಾತ ನೀತಿ ಮತ್ತು ಸಮಾನಾವಕಾಶ.

ಭಾರತದಲ್ಲೂ ಮಾಧ್ಯಮ ವೃತ್ತಿ ಸಂಘಟನೆಗಳು ತಮ್ಮದೇ ಆದ ನೀತಿಸಂಹಿತೆಗಳನ್ನು ಅಳವಡಿಸಿಕೊಂಡಿವೆ. ಭಾರತೀಯ ಪತ್ರಿಕಾ ಮಂಡಳಿ ನಮ್ಮ ದೇಶದ ಮಾಧ್ಯಮಗಳ ಕಾರ್ಯನಿರ್ವಹಣೆಯನ್ನು ಅವಲೋಕಿಸುವ ಕಾವಲು ಸಮಿತಿ. ಮಾಧ್ಯಮಗಳು ಕಾಯ್ದುಕೊಳ್ಳಬೇಕಾದ ಉನ್ನತಮಟ್ಟದ ಸಲುವಾಗಿ ಪತ್ರಿಕಾ ಮಂಡಳಿ ಕೂಡ ತನ್ನದೇ ನೀತಿಸಂಹಿತೆಯನ್ನು ರಚಿಸಿ, ಆಚರಣೆಗೆ ಒತ್ತು ನೀಡುತ್ತದೆ. ಕೋಮುವಾದಿ, ಕೀಳು ಅಭಿರುಚಿ ಮತ್ತು ಮಾನಹಾನಿಕರ ಬರವಣಿಗೆಗಳನ್ನು ನಿಗ್ರಹಿಸುವುದು ಈ ನೀತಿಸಂಹಿತೆಯ ಪ್ರಮುಖ ಅಂಶಗಳಲ್ಲಿ ಒಂದು.

ವಿವಿಧ ನೀತಿಸಂಹಿತೆಗಳನ್ನು ಕ್ರೋಡೀಕರಿಸಿ ಅವುಗಳಲ್ಲಿ ಅಡಕವಾಗಿರುವ ಪ್ರಮುಖ ಸಾಮಾನ್ಯ ಅಂಶಗಳನ್ನು ಗುರುತಿಸಿ ಇಲ್ಲಿ ಪಟ್ಟಿಮಾಡಬಹುದು. ಅವುಗಳು ಹೀಗಿವೆ :

- ಸುದ್ದಿಯನ್ನು ವರದಿ ಮಾಡುವಲ್ಲಿ ನಿಖರತೆ, ಸಮತೋಲನ ಮತ್ತು ನಿಷ್ಪಕ್ಷಪಾತ ಧೋರಣೆಯನ್ನು ಸದಾ ಕಾಯ್ದುಕೊಳ್ಳಬೇಕು.
- ಸಾಮಾಜಿಕ ಪ್ರಕ್ರಿಯೆಗಳ "ಕಾವಲು ನಾಯಿ"ಯಾಗಿ, ಸದಾ ಜಾಗರೂಕತೆ ವಹಿಸಿ, ಅವ್ಯವಹಾರ ಮತ್ತು ಭ್ರಷ್ಟತೆಯನ್ನು ಬಹಿರಂಗಗೊಳಿಸಬೇಕು.
- ಜನರ ಭಾವನೆಗಳನ್ನು ಉದ್ರೇಕಗೊಳಿಸುವ, ಸಮೂಹಗಳ ನಡುವೆ ದ್ವೇಶದ ಕಿಡಿ ಹಚ್ಚುವ ಕೆಲಸಕ್ಕೆ ಕೈ ಹಾಕಬಾರದು. ಕೋಮು ಅಥವಾ ಮತೀಯ ದ್ವೇಷಗಳಿಗೆ ಪ್ರಚೋದನೆ ನೀಡಬಾರದು.
- ಯಾರದೇ ವೈಯಕ್ತಿಕ ಬದುಕನ್ನು ಅನವಶ್ಯಕವಾಗಿ ಪ್ರಚಾರ ಮಾಡಬಾರದು. ವ್ಯಕ್ತಿಗಳ ತೇಜೋವಧೆ ಮಾಡುವ ಹೀನಕೃತ್ಯಗಳಲ್ಲಿ ತೊಡಗಿಸಿಕೊಳ್ಳಬಾರದು.
- ಆರೋಪಗಳ ವರದಿಯಲ್ಲಿ ಆರೋಪಿಗೆ ದೊರಕಬೇಕಾದ ನ್ಯಾಯಯುತ ವಿಚಾರಣೆಯ ಹಕ್ಕು ಮತ್ತು ಸಾರ್ವಜನಿಕರ ಮಾಹಿತಿ ಹಕ್ಕುಗಳ ನಡುವಣ ಸಮತೋಲನವನ್ನು ಪಾಲಿಸಬೇಕು.
- ಸ್ವಯಂ ನಿಯಂತ್ರಣ (ಸೆಲ್ಫ್ ರೆಗ್ಯುಲೇಶನ್) ತತ್ವವನ್ನು ತಮ್ಮ ಕಾರ್ಯದಲ್ಲಿ ಅಳವಡಿಸಿಕೊಳ್ಳಬೇಕು. ವಸ್ತುನಿಷ್ಠತೆ, ತಾಟಸ್ಥ್ಯ, ನಿಷ್ಪಕ್ಷಪಾತ ಇವು ವೃತ್ತಿಯ ಮೂಲಮಂತ್ರಗಳಾಗಬೇಕು.
- ಅಪರಾಧ, ಹಿಂಸೆ, ಕ್ರೌರ್ಯಗಳನ್ನು ಯಾವತ್ತೂ ವೈಭವೀಕರಿಸಬಾರದು. ಈ ವಿಚಾರಗಳನ್ನು ಕುರಿತಂತೆ ಮಕ್ಕಳ ಬಗ್ಗೆ ಹೆಚ್ಚಿನ ಎಚ್ಚರಿಕೆ ವಹಿಸುವುದು ಅಗತ್ಯ.
- ಯಾವುದೇ ಜಾತಿ, ಮತ, ಲಿಂಗ, ವಯಸ್ಸು, ಭಾಷೆ ಮತ್ತು ದೇಶಗಳ ನಡುವೆ ತಾರತಮ್ಯ ಮಾಡಬಾರದು. ಮತ್ತು ಅವುಗಳನ್ನು ಕುರಿತು ಪೂರ್ವಗ್ರಹಪೀಡಿತ ಭಾವನೆಗಳನ್ನು ಪ್ರಚಾರ ಮಾಡಬಾರದು.
- ರಾಷ್ಟ್ರದ ಭದ್ರತೆಗೆ ಧಕ್ಕೆಯಾಗುವ ವಿಚಾರಗಳಲ್ಲಿ ಹೆಚ್ಚಿನ ಜಾಗರೂಕತೆಯನ್ನು ಅವಶ್ಯವಾಗಿ ಪಾಲಿಸಬೇಕು.
- ಭ್ರಷ್ಟತೆಯಲ್ಲಿ ಭಾಗಿಯಾಗುವ ಅವಕಾಶಗಳು, ಪ್ರಚೋದನೆಗಳು ಒದಗಿಬರುತ್ತಲೇ ಇರುತ್ತವೆ. ಆ ಬಗೆಯ ಆಮಿಷಗಳಿಗೆ ಬಲಿಯಾಗದೆ, ಪ್ರಾಮಾಣಿಕತೆಯನ್ನು ಕಾಯ್ದುಕೊಂಡು, ವೃತ್ತಿಧರ್ಮವನ್ನು ಪಾಲಿಸಬೇಕು.

ಇವು ಯಾವುದೇ ನೀತಿಸಂಹಿತೆಯಲ್ಲಿ ಕಾಣಬರುವ ಸಾಮಾನ್ಯ ಅಂಶಗಳು. ಇನ್ನೂ ಹಲವು ಸೂಕ್ಷ್ಮ ವಿಚಾರಗಳನ್ನು ಕುರಿತ ಅನೇಕ ನಿಯಮಗಳು ಇರಬಹುದು.

ಇಷ್ಟೆಲ್ಲ ನೀತಿಸಂಹಿತೆಗಳು ಇದ್ದಾವೆ, ನಿಜ. ಆದರೆ ವಾಸ್ತವದಲ್ಲಿ ಅವು ಎಷ್ಟರಮಟ್ಟಿಗೆ ಆಚರಣೆಗೆ ಬರುತ್ತವೆ ? ಈ ನೀತಿ ಸಂಹಿತೆಗಳಿಗೆ ವೃತ್ತಿಬಾಂಧವರು ಬದ್ಧರಾಗಿದ್ದಾರೆಯೇ ? ಇವುಗಳಿಗೆ ಅನುಗುಣವಾಗಿ ಕೆಲಸ ಮಾಡುತ್ತಿದ್ದಾರೆಯೇ ? ಈ ನೀತಿಸಂಹಿತೆಯನ್ನು ಕಾರ್ಯರೂಪಕ್ಕೆ ತರುವ ಪರಮಾಧಿಕಾರ ಅವನ್ನು ರೂಪಿಸಿರುವ ಸಂಘಟನೆಗಳಿಗೆ ಇದೆಯೇ ? ಈ ಬಗೆಯ ಪ್ರಶ್ನೆಗಳನ್ನು ಕುರಿತು ಆತ್ಮಾವಲೋಕನ ಮಾಡಿಕೊಳ್ಳುವ ಅವಶ್ಯಕತೆ ಇದೆ.

ಮಾಧ್ಯಮಗಳು ಸಮಾಜ ಸ್ವಾಸ್ಥ್ಯದ ಧರ್ಮದರ್ಶಿಗಳ ಸ್ಥಾನದಲ್ಲಿವೆ. ಒಂದು ಸಮಾಜದ ಅಳಿವು ಅಥವಾ ಉಳಿವು ಆ ಸಮಾಜದ ಮಾಧ್ಯಮಗಳು ಎಷ್ಟು ಸ್ವತಂತ್ರವಾಗಿ, ವಸ್ತುನಿಷ್ಠವಾಗಿ, ಸಾಮಾಜಿಕ ಹಿತರಕ್ಷಣೆಯ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡುತ್ತವೆ ಎನ್ನುವ ಅಂಶವನ್ನು ಅವಲಂಬಿಸಿರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಮಾಧ್ಯಮಗಳು ನೀತಿಸಂಹಿತೆಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸುವ ಅಗತ್ಯದ ಬಗ್ಗೆ ಎರಡು ಮಾತಿಲ್ಲ.

*(ಕೃಪೆ : ಆಕಾಶವಾಣಿ, ಬೆಂಗಳೂರು.)*


**ಎಚ್. ಎಸ್. ಈಶ್ವರ**
'ಉತ್ತುಂಗ', ಎಚ್. ಐ. ಜಿ. ೧೧, ಕೆ. ಹೆಚ್. ಬಿ. ಕಾಲನಿ
ಮೊದಲ ಹಂತ, ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯




# ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

## (ಕರ್ನಾಟಕ ಸರ್ಕಾರದ ಒಂದು ಉದ್ಯಮ)

6ನೇ ಮಹಡಿ, ಜಯನಗರ ವಾಣಿಜ್ಯ ಸಂಕೀರ್ಣ, 4ನೇ ಬ್ಲಾಕ್, ಜಯನಗರ, ಬೆಂಗಳೂರು–560 011
ಫೋನ್ : 080–26632792, 26542307. ಫ್ಯಾಕ್ಸ್ : 080–26542308 ಇ–ಮೇಲ್ : md.kswdc@gmail.com

**ಪೀಠಿಕೆ :** ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ೧೯೮೭ರಲ್ಲಿ ಕಂಪನಿಯ ಅಧಿನಿಯಮ ೧೯೫೬ರ ಅಡಿಯಲ್ಲಿ ಸ್ಥಾಪಿಸಲ್ಪಟ್ಟಿದೆ. ೨೦೦೧ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆ ೫,೨೭,೩೩,೯೫೮ ಇದರಲ್ಲಿ ಪ್ರತಿಶತ ಶೇಕಡ ೪೯.೦೭ರಂತೆ ಒಟ್ಟು ೨,೫೮,೭೭,೬೧೫ ಮಹಿಳೆಯರಿರುತ್ತಾರೆ. ರಾಜ್ಯದ ಒಟ್ಟು ಸಾಕ್ಷರತೆ ಶೇಕಡವಾರು ೬೬.೬೪% ರಾಜ್ಯದ ಒಟ್ಟು ಮಹಿಳೆಯರ ಸಾಕ್ಷರತೆ ಶೇಕಡವಾರು ೫೭.೪% ಆಗಿರುತ್ತದೆ. ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ಹಾಗೂ ನಗರದ ಕೆಲವು ಪ್ರದೇಶಗಳಲ್ಲಿ ದುರ್ಬಲ ವರ್ಗದ ಮಹಿಳೆಯರು ಅನಕ್ಷರಸ್ಥರು, ಹಿಂದುಳಿದ ಮಹಿಳೆಯರು ವಾಸಿಸುತ್ತಿದ್ದು, ಇವರುಗಳ ಆರ್ಥಿಕ ಸಬಲೀಕರಣಕ್ಕೆ ನಿಗಮವು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಮಹಿಳೆಯರ ಸಬಲೀಕರಣದಿಂದಲೇ ರಾಜ್ಯದ ಹಾಗೂ ರಾಷ್ಟ್ರದ ಅಭಿವೃದ್ಧಿಹೊಂದಲು ಸಾಧ್ಯವಾಗುತ್ತದೆ. ಇದೇ ಈ ನಿಗಮದ ಮುಖ್ಯ ಉದ್ದೇಶವಾಗಿರುತ್ತದೆ.

**ನಿಗಮದ ಮುಖ್ಯ ಉದ್ದೇಶಗಳು** ✳ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸಿ ಮಹಿಳೆಯರ ಅಭಿವೃದ್ಧಿಗೆ ಶ್ರಮಿಸುವುದು. ಭಾವಿ ಮಹಿಳಾ ಉದ್ಯಮಿಗಳನ್ನು ಗುರುತಿಸುವುದು. ✳ ನಿಗಮದ ವ್ಯಾಪ್ತಿಯಲ್ಲಿ ಬರುವ ಮಹಿಳೆಯರಿಗೆ ಆದಾಯ ಉತ್ಪನ್ನಕರ ಚಟುವಟಿಕೆಗಳ ಬಗ್ಗೆ ಮಾರ್ಗದರ್ಶನ ನೀಡುವುದು ಹಾಗೂ ತಾಂತ್ರಿಕ ಸಲಹಾ ಸೇವೆಯನ್ನು ಒದಗಿಸುವುದು. ✳ ಬ್ಯಾಂಕ್ ಹಾಗೂ ಇತರೆ ಆರ್ಥಿಕ ಸಂಸ್ಥೆಗಳಲ್ಲಿ ಲಭ್ಯವಿರುವ ಸಾಲವನ್ನು ಒದಗಿಸುವಲ್ಲಿ ಅನುಕೂಲ ಕಲ್ಪಿಸುವುದು. ✳ ಮಾರುಕಟ್ಟೆಯ ಅನುಕೂಲಗಳನ್ನು ಕಲ್ಪಿಸುವುದು. ✳ ಮಹಿಳಾ ಸಂಘಗಳನ್ನು, ಸಮಾಜಗಳನ್ನು, ಮಂಡಳಿಗಳನ್ನು ಸಹಕಾರಿಗಳನ್ನು ಉತ್ತೇಜಿಸುವುದು ಹಾಗೂ ಬಲಪಡಿಸುವುದು. ✳ ಸರ್ಕಾರಿ/ಸರ್ಕಾರೇತರ ಸಂಸ್ಥೆಗಳ ಮೂಲಕ ಮಹಿಳೆಯರು ಸ್ವ–ಉದ್ಯೋಗಿಗಳಾಗಲು ಕೌಶಲ್ಯ ಅಭಿವೃದ್ಧಿ ತರಬೇತಿಯನ್ನು ಹಮ್ಮಿಕೊಳ್ಳುವುದು.

### ಯೋಜನೆಗಳ ಹೆಸರು ಮತ್ತು ವಿವರಗಳು

#### ೧. ಮಹಿಳಾ ತರಬೇತಿ ಯೋಜನೆ

✳ ಅಸಹಾಯಕ ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಾಗಲು ಅವರಲ್ಲಿ ಉದ್ಯಮಶೀಲತೆಯನ್ನು ಬೆಳೆಸಿ, ಉದ್ಯಮ ಸ್ಥಾಪನೆಗೆ ಉಚಿತವಾಗಿ ಇಂಡಸ್ಟ್ರಿಯಲ್ ಸೀವಿಂಗ್ ಮೆಷಿನ್ ಆಪರೇಟರ್ (ಬೇಸಿಕ್), ಫ್ಯಾಷನ್ ಡಿಸೈನಿಂಗ್, ಬ್ಯೂಟೀಷಿಯನ್, ಆಹಾರ ಸಂಸ್ಕರಣೆ, ಹೋಂ ನರ್ಸಿಂಗ್, ಗೃಹ ವಸ್ತುಗಳ ರಿಪೇರಿ, ಕಸೂತಿ ಮತ್ತು ಎಂಬ್ರಾಯಿಡರಿ, ರಿಟೈಲ್ ಸೇಲ್ಸ್, ಬಿ.ಪಿ.ಒ. ತರಬೇತಿ, ಕೃಷಿ ಆಧಾರಿತ ತರಬೇತಿ (ಎರೆಹುಳು ಗೊಬ್ಬರ), ಅಗರಬತ್ತಿ ತಯಾರಿಕೆ, ಲ್ಯಾಬ್ ಟೆಕ್ನಿಷಿಯನ್, ಕಂಪ್ಯೂಟರ್ ಬೇಸಿಕ್ ಮತ್ತು ಕಮ್ಯೂನಿಕೇಷನ್ ಸ್ಕಿಲ್ಸ್ ಮತ್ತು ಸ್ಥಳೀಯ ಬೇಡಿಕೆಗೆ ಅನುಕೂಲವಾದ ಕೌಶಲ್ಯ ತರಬೇತಿ ನೀಡಲಾಗುವುದು.

✳ ಚಿಕ್ಕ ಉದ್ಯಮಗಳನ್ನು ಸ್ವಂತವಾಗಿ ಸ್ಥಾಪಿಸುವ ಇಚ್ಛೆಯುಳ್ಳ ಮಹಿಳೆಯರಿಗೆ ಯೋಜನಾ ವರದಿ ತಯಾರಿಕೆ, ಸಾಮಾನ್ಯ ಲೆಕ್ಕಪತ್ರ ನಿರ್ವಹಣೆ, ಕಚ್ಚಾ ಸಾಮಗ್ರಿಗಳ ನಿರ್ವಹಣೆ, ಮಾರುಕಟ್ಟೆ ಬಗ್ಗೆ ತರಬೇತಿ.

✳ ಇ–ಟೆಂಡರ್ ಮೂಲಕ ಅರ್ಹ ಸಂಸ್ಥೆಯನ್ನು ಆಯ್ಕೆ ಮಾಡಿದ ಸಂಸ್ಥೆಯ ಮೂಲಕ ತರಬೇತಿ ವ್ಯವಸ್ಥೆ ಕಲ್ಪಿಸಲಾಗುವುದು.

✳ ವಿಧವೆಯರು, ಅಸಹಾಯಕ ಮಹಿಳೆಯರು ಹಾಗೂ ಅಂಗವಿಕಲ ಮಹಿಳೆಯರಿಗೆ ಆದ್ಯತೆ, ಇವರಿಗೆ ಆದಾಯ ಮಿತಿ ಇರುವುದಿಲ್ಲ.

✳ ಕುಟುಂಬದ ವಾರ್ಷಿಕ ಆದಾಯ ಮಿತಿ ರೂ. ೪೦,೦೦೦/–

✳ ಫಲಾನುಭವಿಗಳ ವಯೋಮಿತಿ ೧೮ರಿಂದ ಮೇಲ್ಪಟ್ಟು ೪೫ ವರ್ಷದೊಳಗಿರಬೇಕು.

✳ ವಿವಿಧ ಕೌಶಲ್ಯ ತರಬೇತಿಗಳಿಗೆ ನಿಗದಿಯಾಗಿರುವ ವಿದ್ಯಾರ್ಹತೆಯನ್ನು ಫಲಾನುಭವಿಗಳೂ ಹೊಂದಿರಬೇಕು.

#### ೨. ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ನಿರ್ಮಾಣ

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ವಿಶೇಷ ಅಭಿವೃದ್ಧಿ ಯೋಜನೆಯಡಿ ಉತ್ತರ ಕರ್ನಾಟಕದ ೧೪ ಜಿಲ್ಲೆಗಳಲ್ಲಿ ನಿವೇಶನ ಹೊಂದಿರುವ, ವಸತಿ ರಹಿತ ಮಾಜಿ ದೇವದಾಸಿ ಮಹಿಳೆಯರಿಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ ವಸತಿ ನಿರ್ಮಾಣ ಯೋಜನೆಯನ್ನು ೨೦೦೯–೧೦ನೇ ಸಾಲಿನಿಂದ ಘಟಕ ವೆಚ್ಚ ರೂ. ೪೦,೦೦೦/–ಗಳಿಂದ ನೀಡುತ್ತಿದ್ದು, ೨೦೧೩–೧೪ನೇ ಸಾಲಿನಿಂದ ಸರ್ಕಾರವು ಘಟಕ ವೆಚ್ಚ ರೂ. ೧,೨೦,೦೦೦/–ಗಳಿಗೆ ಹೆಚ್ಚಿಸಿರುತ್ತಾರೆ. ಈ ಯೋಜನೆಯನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ.

#### ೩. ರಾಜ್ಯ ಸಂಪನ್ಮೂಲ ಕೇಂದ್ರ ಯೋಜನೆ

✳ ಈ ಯೋಜನೆಯಡಿ ಮಹಿಳಾ ಸ್ವ–ಉದ್ಯೋಗ ಸಲಹಾ ಕೇಂದ್ರಗಳ ಸ್ಥಾಪನೆ, ನಿಗಮದ ಯೋಜನೆಗಳ ಬಗ್ಗೆ ಪ್ರಚಾರ, ಮಹಿಳಾ ಅಭಿವೃದ್ಧಿಗೆ ಸಂಬಂಧಿಸಿದ ಪುಸ್ತಕಗಳ ಖರೀದಿ ಮತ್ತು ಡಾಟಾ ಬ್ಯಾಂಕ್ ನಿರ್ವಹಣೆ ಕೈಗೊಳ್ಳಲಾಗುವುದು.

✳ ರಾಜ್ಯದ ೩೦ ಜಿಲ್ಲೆಗಳಲ್ಲಿ ನಿಗಮದಿಂದ ನೇರವಾಗಿ, ಉಪ ನಿರ್ದೇಶಕರ ಕಚೇರಿಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಅನುಭವಿ ಅಧಿಕಾರಿಗಳ ಮೂಲಕ ಮಹಿಳಾ ಸ್ವ–ಉದ್ಯೋಗ ಮಾರ್ಗದರ್ಶನ ಕೇಂದ್ರಗಳನ್ನು ನಡೆಸಲು ಉದ್ದೇಶಿಸಲಾಗುವುದು.

✳ ಜಿಲ್ಲಾ ಮಟ್ಟದಲ್ಲಿ ವಿವಿಧ ಇಲಾಖಾ ಅಧಿಕಾರಿಗಳಿಗೆ, ಕಾಲೇಜು ವಿದ್ಯಾರ್ಥಿನಿಯರಿಗೆ ಮತ್ತು ಜನಪ್ರತಿನಿಧಿಗಳಿಗೆ ಲಿಂಗತಾರತಮ್ಯದ ಬಗ್ಗೆ ಕಾರ್ಯಾಗಾರ ಏರ್ಪಡಿಸುವುದು ಮತ್ತು ಸ್ತ್ರೀ ಸಮಾನತೆ ಬಗ್ಗೆ ಅರಿವು ಮೂಡಿಸುವುದು.

#### ೪. ಸ್ವ–ಸಹಾಯ/ಸ್ತ್ರೀಶಕ್ತಿ ಗುಂಪುಗಳ ಆರ್ಥಿಕ ಸ್ವಾವಲಂಬನೆಗಾಗಿ ಮೈಕ್ರೋ ಕ್ರೆಡಿಟ್ ಯೋಜನೆ : (ವೈಯಕ್ತಿಕ ಕಿರುಸಾಲ ಯೋಜನೆ)

ಸ್ವ–ಸಹಾಯ ಗುಂಪುಗಳಿಗೆ ಸಾಲ ಸೌಲಭ್ಯಕ್ಕಾಗಿ ಲಿಂಕೇಜ್ ಅನ್ನು ಬ್ಯಾಂಕುಗಳಿಂದ ಕಲ್ಪಿಸಿದ್ದರೂ ಸಹ ಎಲ್ಲ ಗುಂಪುಗಳಿಗೆ ಸಾಲ ಒದಗಿಸಲು ಸಾಧ್ಯವಾಗುವುದಿಲ್ಲ. ಬ್ಯಾಂಕಿನ ಬಡ್ಡಿ ದರವು ಸಹ ಹೆಚ್ಚಾಗಿರುತ್ತದೆ. ಆದ್ದರಿಂದ, ಅಸ್ತಿತ್ವದಲ್ಲಿರುವ ಮತ್ತು ಇತರೆ ಬ್ಯಾಂಕ್ ಹಾಗೂ ಸರ್ಕಾರದ ಸಂಸ್ಥೆಗಳಿಂದ ಸಾಲ ಪಡೆಯದೆ ಸ್ತ್ರೀಶಕ್ತಿ ಗುಂಪುಗಳಿಗೆ ಸಾಲ ಸೌಲಭ್ಯವನ್ನು ಒದಗಿಸಿದ್ದಲ್ಲಿ ಸದಸ್ಯರುಗಳು ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬಹುದಾಗಿರುತ್ತದೆ.

#### ಯೋಜನೆಯ ಉದ್ದೇಶಗಳು ಈ ಕೆಳಗಿನಂತಿವೆ

೧. ಕೌಶಲ್ಯ ಅಭಿವೃದ್ಧಿ ಪಡೆಯಲು ತರಬೇತಿ ನೀಡುವುದು.
೨. ಮಹಿಳೆಯರನ್ನು ಸಣ್ಣ ಸಣ್ಣ ಗುಂಪುಗಳಾಗಿ ಸಂಘಟಿಸುವುದು ಮತ್ತು ಅವರಿಗೆ ತರಬೇತಿ ನೀಡುವುದು ಮತ್ತು ಸಾಲ ಪಡೆಯಲು ಅವಕಾಶ ಕಲ್ಪಿಸುವುದು.
೩. ಸಂಘಟಿಸಿದ ಮಹಿಳೆಯರು ಸ್ವ–ಉದ್ಯೋಗ ಪ್ರಾರಂಭಿಸಿ ಆದಾಯ ಉತ್ಪನ್ನಕರ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳಲು ಅನುಕೂಲ ಮಾಡಿಕೊಡುವುದು.
೪. ಬೆಂಬಲ ಸೇವೆಯನ್ನು ನೀಡಿ ಮಹಿಳೆಯರು ತಮ್ಮ ಕೌಶಲ್ಯವನ್ನು ತರಬೇತಿ ಮೂಲಕ ಹೆಚ್ಚಿಸಿ ಉದ್ಯೋಗ ಪಡೆದು ಆರ್ಥಿಕ ಮಟ್ಟವನ್ನು ಹೆಚ್ಚಿಸುವುದು.

#### ಯೋಜನೆಯ ಸೇವೆಗಳ ವಿವರ

ಸ್ಟೆಪ್ ಯೋಜನೆಯು ಮಹಿಳೆಯರಿಗಾಗಿ ಈ ಕೆಳಗಿನ ಸೇವೆಗಳನ್ನು ಸಮಗ್ರೀಕರಿಸಿ ಅವರುಗಳನ್ನು ಆರ್ಥಿಕವಾಗಿ ಸುಭದ್ರರಾಗಿ, ಸ್ವತಂತ್ರರಾಗಿಸುವ ಮೂಲಕ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಹೆಚ್ಚಿಸುವುದು ಈ ಯೋಜನೆಯ ಸೇವಾ ಗುರಿಯಾಗಿರುತ್ತದೆ.

- ತರಬೇತಿ ಮೂಲಕ ಕೌಶಲ್ಯವನ್ನು ಅಭಿವೃದ್ಧಿಪಡಿಸುವುದು.
- ಸುಧಾರಿತ ಹಾಗೂ ಸುಸ್ಥಿತಿ ವೃತ್ತಿ / ಚಟುವಟಿಕೆ ಅವಕಾಶಗಳು.
- ಉತ್ಪಾದನಾ ಪೂರ್ವ ಹಾಗೂ ಉತ್ಪಾದನಾ ನಂತರದ ಸಂಪರ್ಕ ವ್ಯವಸ್ಥೆಗಳನ್ನು ಕಲ್ಪಿಸುವುದು.
- ಮಹಿಳೆಯರನ್ನು ಸಂಘಟಿಸಲು ನೆರವು ನೀಡುವುದು.

ಹೆಚ್ಚಿನ ಮಾಹಿತಿಗಾಗಿ ಆಯಾ ಜಿಲ್ಲೆಯ ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರು. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಥವಾ ನಿಗಮದ ಕೇಂದ್ರ ಕಛೇರಿಯನ್ನು ಸಂಪರ್ಕಿಸಬಹುದು.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / March 2015 / ₹ 15
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at MBC, Bengaluru GPO-560001 on the 28th of every month. (No. of Pages 64)